# ಸಾಹಿತ್ಯ ವಾರ್ಷಿಕ

# 1980



ಬೆಂಗಳೂರು ವಿಶ್ವವಿದ್ಯಾಲಯ

ಬೆಂಗಳೂರು



ಕನ್ನಡ ಅಧ್ಯಯನ ಕೇಂದ್ರಮಾಲೆ 42

# ಸಾಹಿತ್ಯ ವಾರ್ಷಿಕ 1980

ಸಂಪಾದಕರು

ಡಾ. ಜಿ. ಎಸ್. ಶಿವರುದ್ರಪ್ಪ

ವಿಶೇಷ ಸಹಾಯ

ಎನ್. ವಿ. ವಿಮಲ

ಸಹಕಾರ

ಬೆಂಗಳೂರು ವಿಶ್ವವಿದ್ಯಾಲಯದ
ಗ್ರಂಥಭಂಡಾರದ ಅಧಿಕಾರ ವರ್ಗ

ಪ್ರಸಾರಾಂಗ

ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

SAHITYA VARSHIKA 1980 (Year Book of Literature, 1980) A review
of Kannada books on literature published in 1980
Edited by Dr. G. S. Sivarudrappa
(Centre of Kannada Studies Series No. 42)
Published by Prasaranga, Bangalore University, Bangalore
Pp. 310+xvi 1982

ಪ್ರಧಾನ ಸಂಪಾದಕರು:
ಡಾ. ಜಿ. ಎಸ್. ಶಿವರುದ್ರಪ್ಪ



ಪ್ರಕಾಶಕರು:
ಕೆ. ಸಿ. ಶಿವಪ್ಪ
ನಿರ್ದೇಶಕ (ಕಾರ್ಯ ನಿರ್ವಾಹಕ), ಪ್ರಸಾರಾಂಗ,
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು - 560 056

ಪ್ರಕಟಣ ಸಹಾಯಕ:
ಬಿ. ಕೆ. ಕರೀಗೌಡ

ಬೆಲೆ: 11-00

ಮುದ್ರಣ:
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ, ಬೆಂಗಳೂರು

# ಮೊದಲ ಮಾತು

ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಶಿಕ್ಷಣದಲ್ಲಿ ಕನ್ನಡ ಮಾಧ್ಯಮದ ಅವಶ್ಯಕತೆಯನ್ನು ಪೂರೈಸುವ ಸಲುವಾಗಿ ಈಗಾಗಲೇ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿ ಪ್ರಕಟಿಸುತ್ತಿದೆ. ಇದರ ಜೊತೆಗೆ ವಿಶ್ವವಿದ್ಯಾಲಯವು ಸಾರ್ವಜನಿಕರಿಗಾಗಿ ವರ್ಷಾ-ದ್ಯಂತವು ಏರ್ಪಡಿಸುವ ಪ್ರಚಾರೋಪನ್ಯಾಸಗಳನ್ನೂ ವಿಶೇಷೋಪನ್ಯಾಸಗಳನ್ನೂ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿದೆ. ಈ ಪಂಕ್ತಿಗೆ ಇದೀಗ ಬೆಂಗಳೂರು ವಿಶ್ವ-ವಿದ್ಯಾಲಯದ ವಿವಿಧ ಅಧ್ಯಯನ ಶಾಖೆಗಳು ಕೈಗೊಳ್ಳುವ ವೈಯಕ್ತಿಕ ಹಾಗೂ ಸಾಮೂಹಿಕ ಸಂಶೋಧನಾತ್ಮಕ ವ್ಯವಸಾಯಕ್ಕೆ ಗ್ರಂಥರೂಪದ ಅಭಿವ್ಯಕ್ತಿಯನ್ನು ಕೊಡುವ ಕಾರ್ಯವು ಸೇರುತ್ತಿದೆ. ಇದರಿಂದಾಗಿ ವಿಶ್ವವಿದ್ಯಾಲಯದ ಒಂದೊಂದು ಅಧ್ಯಯನ ಶಾಖೆಯು ಅಧ್ಯಾಪಕರ ಸಂಶೋಧನಾತ್ಮಕ ಪ್ರವೃತ್ತಿಗೆ ತಕ್ಕಮಟ್ಟಿನ ಪ್ರೇರಣೆಯೂ ದೊರೆಯುತ್ತಿದೆ. ಈ ರೀತಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಕೇಂದ್ರ ಇಂಥ ಕೃತಿಗಳನ್ನು ಪ್ರಕಟಣೆಗೆ ಸಿದ್ಧಪಡಿಸುತ್ತಿರುವುದು ಪ್ರಶಂಸನೀಯವಾಗಿದೆ. ಪ್ರತಿಯೊಂದು ವಿಭಾಗವೂ ಹೀಗೆ ತನ್ನ ವಿಭಾಗದ ಹೆಸರಿನಲ್ಲಿ ಕೃತಿಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ಮೂಲಕ ಹೊರತರಲು ಮುಂದೆ ಬರುವುದೆಂದು ನಂಬಿದ್ದೇನೆ.

ವಿಶ್ವವಿದ್ಯಾಲಯದ ನಿಜವಾದ ಹಿರಿಮೆ ಅದರ ಬೌದ್ಧಿಕ ಸಾಧನೆ ಹಾಗೂ ಅಭಿವ್ಯಕ್ತಿಗಳಲ್ಲಿದೆ. ಆದರೆ ಈ ಕಾರ್ಯದಲ್ಲಿ ಆತುರ ಸಲ್ಲದು ; ವಿಶ್ವವಿದ್ಯಾಲಯ ಪ್ರಕಟಿಸುವ ಕೃತಿಗಳು ಅದರ ಮತ್ತು ವಿವಿಧ ಅಧ್ಯಯನ ವಿಭಾಗಗಳ ಘನತೆಯನ್ನು ಕಾಯ್ದುಕೊಳ್ಳುವಂತಿರಬೇಕು. ಈ ಕಾರ್ಯದಲ್ಲಿ ನಾವು ಹೊರತರುವ ಕೃತಿಗಳ ಸಂಖ್ಯೆ ಮುಖ್ಯವಲ್ಲ ; ಗಾತ್ರ ಮುಖ್ಯವಲ್ಲ ; ಗುಣ ಮುಖ್ಯ.

ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಹಾಗೂ ಸಂಶೋಧನ ಸಹಾಯಕರು ಸೇರಿ ಸಿದ್ಧಪಡಿಸಿರುವ ಈ 'ಸಾಹಿತ್ಯ ವಾರ್ಷಿಕ 1980' ಕನ್ನಡದಲ್ಲಿ 1980ರಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳನ್ನು ಕುರಿತ ವಿಮರ್ಶಾತ್ಮಕ ಸಮೀಕ್ಷೆಯಾಗಿದೆ. ವರ್ಷ ವರ್ಷವೂ ಈ ಬಗೆಯ 'ಸಾಹಿತ್ಯ ವಾರ್ಷಿಕ'ವನ್ನು ಸಿದ್ಧಗೊಳಿಸಿ ಪ್ರಕಟಿಸುವ ಈ ಯೋಜನೆ, ಕನ್ನಡ ಸಾಹಿತ್ಯ ವಿಮರ್ಶೆಯ ಬೆಳವಣಿಗೆಯಲ್ಲಿ ಮೌಲಿಕವಾದ ಪಾತ್ರ ವನ್ನು ವಹಿಸುವುದೆಂಬ ನಂಬಿಕೆ ಇದೆ. ಈ ಕಾರ್ಯಕ್ಕಾಗಿ ಕನ್ನಡ ಅಧ್ಯಯನ ಕೇಂದ್ರ ವನ್ನು ಅಭಿನಂದಿಸುತ್ತೇನೆ.

ಎಂ. ಎನ್. ವಿಶ್ವನಾಥಯ್ಯ
ಉಪ-ಕುಲಪತಿ
ಬೆಂಗಳೂರು ವಿಶ್ವವಿದ್ಯಾಲಯ

# ಮುನ್ನುಡಿ

## ಸಾಹಿತ್ಯ ವಾರ್ಷಿಕ 1980

ಇದು 1980ನೆಯ ಸಾಲಿನಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳ ಒಂದು ವಿಮರ್ಶಾತ್ಮಕ ಸಮೀಕ್ಷೆ. ಇದನ್ನು ನಡೆಯಿಸಿದವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಮತ್ತು ಸಂಶೋಧನ ಸಹಾಯಕರು. ಇದೊಂದು ಸಾಮೂಹಿಕ ಪ್ರಯತ್ನ. ಈ ಪ್ರಯತ್ನ ಪ್ರತಿ ವರ್ಷವೂ ಮುಂದು ವರಿಯುತ್ತದೆ. ಈಗಾಗಲೇ 'ಸಾಹಿತ್ಯ ವಾರ್ಷಿಕ 1981' ಸಿದ್ಧವಾಗುತ್ತಿದೆ. ಹೀಗೆ ಪ್ರತಿ ವರ್ಷವೂ ಕನ್ನಡದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಪ್ರಕಟವಾಗುವ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆಯನ್ನು ಸಿದ್ಧಪಡಿಸಿ ಪ್ರಕಟಿಸುವುದು ಈ ಯೋಜನೆಯ ಉದ್ದೇಶವಾಗಿದೆ.

ಇದು ಸುಲಭವಾದ ಕಾರ್ಯವೇನಲ್ಲ. ಬಹುಸಂಖ್ಯೆಯಲ್ಲಿ ವರ್ಷವರ್ಷವೂ ಪ್ರಕಟವಾಗುವ ಸಾಹಿತ್ಯ ಕೃತಿಗಳ ಜಾಡು ಹಿಡಿದು ಗುರುತಿಸುವುದು, ಅನಂತರ ಅವುಗಳನ್ನೆಲ್ಲ ಒಂದೆಡೆ ಕೂಡಿಸಿಕೊಳ್ಳುವುದು ಮೊದಲನೆಯ ಕಷ್ಟ. ಅವುಗಳನ್ನು ತೀರಾ ಮುಖಾಮುಖಿ ನಿಂತು ವಿಮರ್ಶಿಸುವುದು ಎರಡನೆಯ ಕಷ್ಟ. ಕೃತಿಗಳಿಗೆ ಕೃತಿಕಾರರಿಗೆ ತೀರಾ ಸಮೀಪದಲ್ಲಿಯೆ ನಿಂತು, ಅಂದಂದಿನ ಕೃತಿಗಳನ್ನು ಅಂದಂದೇ ವಿಮರ್ಶಿಸುತ್ತೇವೆಂದು ಹೊರಡುವುದೂ ಪ್ರಿಯವಾದ ಕಾರ್ಯವೇನಲ್ಲ. ಆದರೂ ಅಗತ್ಯವಾಗಿ ಮಾಡಬೇಕಾದ ಕಾರ್ಯ ; ತಪ್ಪೋ ಒಪ್ಪೋ ಯಾರಾದರೂ ಮಾಡಲೇ ಬೇಕಾದ ಕಾರ್ಯ. ಅದನ್ನು ನಾವು ಮಾಡಲು ಹೊರಟ್ಟಿದ್ದೇವೆ. ನಾವು ಹೊರಟಿರುವ ಉದ್ದೇಶ ಒಳ್ಳೆಯದು ಎಂಬುದೇ ನಮ್ಮ ಬೆಂಬಲಕ್ಕೆ ಇರುವ ಧೈರ್ಯ.

ಇದು ಆಯಾ ವರ್ಷ ಪ್ರಕಟವಾಗುವ ಪುಸ್ತಕಗಳನ್ನು ಪಟ್ಟಿ ಮಾಡುವ ಅಥವಾ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸುವ ಪ್ರಾಥಮಿಕ ನೆಲೆಯಲ್ಲಿ ಪರ್ಯವಸಾನ ವಾಗುವ ಸ್ವರೂಪದ್ದಲ್ಲ ; ಆಗಲೇ ಹೇಳಿರುವಂತೆ ಆಯಾ ವರ್ಷದ ಸಾಹಿತ್ಯ ಕೃತಿ ಗಳನ್ನು ಸಮೀಕ್ಷಿಸುವ ಸ್ವರೂಪದ್ದು. ಇಲ್ಲಿರುವ ಒಂದೊಂದು ಸಾಹಿತ್ಯ ಪ್ರಕಾರದ ಪರಿಶೀಲನೆಯಲ್ಲಿ ಆಯಾ ಲೇಖಕರ ಪರಿಮಿತಿಗಳನ್ನೂ, ಪರಿಶೀಲನಾ ಸಾಮರ್ಥ್ಯದ ತರತಮಗಳನ್ನೂ ಓದುಗರು ಗುರುತಿಸಬಹುದು. ಆಯಾ ವಿಭಾಗದ ಸಮೀಕ್ಷೆಯಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬ್ದಾರರು.

ನಾಳೆ, ಕನ್ನಡದಲ್ಲಿ ಯಾವುದೇ ಒಂದು ಸಾಹಿತ್ಯ ಪ್ರಕಾರವನ್ನು ಕುರಿತು ಕೆಲಸ ಮಾಡಲು ತೊಡಗುವವರಿಗೆ ಈ 'ಸಾಹಿತ್ಯ ವಾರ್ಷಿಕ'ಗಳಿಂದಾಗುವ ಪ್ರಯೋಜನ ಅಷ್ಟಿಷ್ಟಲ್ಲ. ಯಾವ ಯಾವ ವರ್ಷ ಕನ್ನಡದಲ್ಲಿ ಏನೇನು ಕೃತಿಗಳು ಪ್ರಕಟವಾಗಿವೆ, ಸಾಹಿತ್ಯದ ಯಾವ ಯಾವ ಪ್ರಕಾರಗಳಲ್ಲಿ ಏನೇನು ಕೆಲಸ ನಡೆದಿದೆ. ಯಾವ ದೃಷ್ಟಿ

ಧೋರಣೆಗಳು ಅವುಗಳ ಹಿನ್ನೆಲೆಗಿವೆ ಎಂಬುದು ನಾಳಿನ ವಿಮರ್ಶಕರಿಗೆ ಹಾಗೂ ಸಂಶೋಧಕರಿಗೆ ಮೂಲಭೂತ ಸಾಮಗ್ರಿಯಾಗಿ ಇದರಿಂದ ಒದಗುತ್ತದೆ. ಹಾಗೆಯೇ ಪ್ರತಿಯೊಂದು ವರ್ಷದ ಸಾಹಿತ್ಯದ ಸಾಧನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವವರ ಪಾಲಿಗೆ ಮತ್ತು ಸಾಹಿತ್ಯ ಚರಿತ್ರೆಯ ಲೇಖಕನಿಗೆ ಇದೊಂದು ಋಣದ ಗಣಿಯಾಗುವುದರಲ್ಲಿ ಸಂದೇಹವಿಲ್ಲ.

ಈ ಕಾರ್ಯದಲ್ಲಿ ನಾವು ಕೇವಲ ಸಾಹಿತ್ಯ ಸಂಬಂಧಿಯಾದ ಕೃತಿಗಳನ್ನು ಮಾತ್ರ, ಅದರಲ್ಲೂ 1980ರಲ್ಲಿ ಮೊದಲ ಮುದ್ರಣವನ್ನು ಕಂಡ ಕೃತಿಗಳನ್ನು ಮಾತ್ರ ಪರಿಶೀಲನೆಗೆ ಎತ್ತಿಕೊಂಡಿದ್ದೇವೆ. ಕನ್ನಡದಲ್ಲಿ ಪ್ರಕಟವಾಗುವ ವೈಜ್ಞಾನಿಕ, ಮಾನವಿಕ, ಶೈಕ್ಷಣಿಕ ಇತ್ಯಾದಿ ಬೇರೆ ಬೇರೆ ವಿಷಯಗಳನ್ನು ಪರಿಗಣಿಸಿಲ್ಲ. ಅದಕ್ಕೆ ಕಾರಣ, ಈ ಕಾರ್ಯದಲ್ಲಿ ತೊಡಗಿರುವ ನಮಗೆ ಸಾಹಿತ್ಯೇತರ ವಿಷಯಗಳನ್ನು ಕುರಿತು ಪರಿಶೀಲಿಸಲು ಅಥವಾ ವಿಮರ್ಶಿಸಲು ಸಾಮರ್ಥ್ಯವಾಗಲಿ, ಅಧಿಕಾರವಾಗಲಿ ಇಲ್ಲ. ಹೀಗಾಗಿ ಕೇವಲ ಸಾಹಿತ್ಯ ಸಂಬಂಧಿಯಾದ ಕೃತಿಗಳ ಪರಿಶೀಲನೆಯನ್ನು ಈ 'ಸಾಹಿತ್ಯ ವಾರ್ಷಿಕ'ದಲ್ಲಿ ಕಾಣಬಹುದು. ಹಾಗೆಯೇ ಇಲ್ಲಿ 1980ರಲ್ಲಿ ಪ್ರಕಟವಾದ ಎಲ್ಲ ಸಾಹಿತ್ಯ ಸಂಬಂಧಿಯಾದ ಕೃತಿಗಳನ್ನೂ ಗಮನಿಸಿದ್ದೇವೆ ಎಂದು ಹೇಳುವ ಧೈರ್ಯವಿಲ್ಲ. ಯಾಕೆಂದರೆ ಆಯಾ ವರ್ಷ ಪ್ರಕಟವಾದ ಸಮಸ್ತ ಸಾಹಿತ್ಯ ಕೃತಿಗಳನ್ನೂ ಸಕಾಲದಲ್ಲಿ ಗುರುತಿಸಿ ಒಂದೆಡೆ ಕೂಡಿಸುವ ವ್ಯವಸ್ಥೆ ಸಾಧ್ಯವಾಗುತ್ತಿಲ್ಲ. ಅಲ್ಲದೆ 1980ರಲ್ಲಿ ಪ್ರಕಟವಾದ ಎಷ್ಟೋ ಕೃತಿಗಳು 1980ರ ವರ್ಷಾಂತ್ಯದವರೆಗೂ ಕಾರಣಾಂತರದಿಂದ ಕಾಣಲು ದೊರೆಯುವುದಿಲ್ಲ. ಆದರೂ ವಿಶ್ವವಿದ್ಯಾಲಯದ ಗ್ರಂಥಭಂಡಾರದ ಅಧಿಕಾರಗಳು ನಮಗೆ ಒತ್ತಾಸೆಯಾಗಿ ನಿಂತು ಸಾಧ್ಯವಾದಷ್ಟು ಮಟ್ಟಿಗೆ ಆಯಾವರ್ಷ ಪ್ರಕಟವಾಗುವ ಕೃತಿಗಳನ್ನು ದೊರಕಿಸಿ ಕೊಟ್ಟಿದ್ದಾರೆ. ನಮ್ಮ ಕೋರಿಕೆಯ ಮೇಲೆ 'ಪ್ರಜಾವಾಣಿ' ಹಾಗೂ 'ಸುಧಾ' ಪತ್ರಿಕೆಯವರು, ಪ್ರತಿವಾರದ 'ಸಾದರ ಸ್ವೀಕಾರ' ವಿಭಾಗದಲ್ಲಿ, ಸ್ವೀಕಾರವಾದ ಕೃತಿಗಳು ಪ್ರಕಟವಾದ ವರ್ಷವನ್ನು ಕಾಣಿಸಿ ಈ ಒಂದು ಯೋಜನೆಯಲ್ಲಿ ಸಹಕರಿಸಿದ್ದಾರೆ. ಕನ್ನಡ ಪ್ರಮುಖ ಪತ್ರಿಕೆಗಳಲ್ಲಿ ಆಗಾಗ ಬಂದ ಪುಸ್ತಕವಿಮರ್ಶೆಯೂ ಮತ್ತು ಮೈಸೂರಿನಿಂದ ಪ್ರಕಟವಾಗುವ 'ಗ್ರಂಥಲೋಕ' ಹಾಗೂ 'ಪುಸ್ತಕ ಪುರವಣಿ'ಗಳು ಸಹ ನಮ್ಮ ಈ ಪರಿಶೀಲನೆಗೆ ನೆರವಾಗಿದೆ. ಹೀಗೆ ಲೇಖಕರ, ಪ್ರಕಾಶಕರ, ವಿಮರ್ಶಕರ, ಪತ್ರಿಕೆಗಳ ಮತ್ತು ಗ್ರಂಥಭಂಡಾರದ ನಿರಂತರ ಸಹಕಾರದಿಂದ ಮಾತ್ರ ಇಂಥ ಯೋಜನೆ ಯಶಸ್ವಿಯಾಗುವ ಸಾಧ್ಯತೆಗಳಿವೆ.

ನಮಗೆ ತಿಳಿದಮಟ್ಟಿಗೆ, 'ಸಾಹಿತ್ಯ ವಾರ್ಷಿಕ'ದಂಥ ಯೋಜನೆಯನ್ನು ಬಹುಶಃ ಯಾವ ಒಂದು ಭಾರತೀಯ ವಿಶ್ವವಿದ್ಯಾಲಯವೂ ಕೈಗೊಂಡಂತೆ ತೋರುವುದಿಲ್ಲ. ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ಕನ್ನಡ ಅಧ್ಯಯನ ಕೇಂದ್ರವು ಸಕ್ರಿಯವಾಗಿ

ಪಾಲುಗೊಳ್ಳುವ ಒಂದು ಅವಕಾಶವನ್ನು ಈ ಯೋಜನೆ ಒದಗಿಸಿದೆ ಎಂದು ನಾವು ಭಾವಿಸಿದ್ದೇವೆ.

ಈ ವರ್ಷದ ಸಂಪುಟದಲ್ಲಿಯೂ ಇತರ ಭಾಷೆಗಳಿಂದ ಕನ್ನಡಕ್ಕೆ ಅನುವಾದ ಗೊಂಡ ಕೃತಿಗಳ ಸಮೀಕ್ಷೆ, ಪ್ರತಿಯೊಂದು ವಿಷಯ ವಿಭಾಗದ ಕೊನೆಯಲ್ಲಿ ಬರುವಂತೆ ನೋಡಿಕೊಳ್ಳಲಾಗಿದೆ. 1980ರಲ್ಲಿ ಸಾಹಿತ್ಯಕ್ಕೆ ಸಂಬಂಧಪಟ್ಟ ಲೇಖನಗಳು ಎಲ್ಲೆಲ್ಲಿ ಪ್ರಕಟವಾಗಿವೆ ಎಂಬ 'ಲೇಖನ ಸೂಚಿ' ಯೊಂದು ಮುಂದುವರೆದಿದೆ.

ಇದುವರೆಗೂ ಪ್ರಕಟವಾದ 'ಸಾಹಿತ್ಯವಾರ್ಷಿಕ'ಗಳನ್ನು ಓದಿ ತುಂಬ ವಿಶ್ವಾಸ ದಿಂದ ಹಲವರು ಉಪಯುಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಸಂಪುಟದಿಂದ ಸಂಪುಟಕ್ಕೆ ಆಗುತ್ತಿರುವ ಸೂಕ್ತವಾದ ತಿದ್ದುಪಡಿ ಮತ್ತು ಮಾರ್ಪಾಡುಗಳು ಇಂಥ ಸಲಹೆಗಳ ಪರಿಣಾಮ. ಇದು ಈ ಯೋಜನೆಯಲ್ಲಿ ಪ್ರಕಟವಾಗುತ್ತಿರುವ ಹತ್ತನೆಯ ಸಾಹಿತ್ಯ ವಾರ್ಷಿಕ.

ಇಂತಹ ಯೋಜನೆಯನ್ನು ನಿರಾತಂಕವಾಗಿ ನಡೆಸಿಕೊಂಡು ಹೋಗಲು ಎಲ್ಲ ಅನುಕೂಲಗಳನ್ನು ಕಲ್ಪಿಸಿದ ಬೆಂಗಳೂರು ವಿಶ್ವವಿದ್ಯಾಲಯಕ್ಕೆ, ಈ ಪ್ರಯತ್ನದ ಜತೆಜತೆಯಾಗಿ ನಿಂತು ಸಹಕರಿಸುತ್ತಿರುವ ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥ ಭಂಡಾರದ ಅಧಿಕಾರವರ್ಗಕ್ಕೆ ಮತ್ತು ಗ್ರಂಥಾಧಿಕಾರಿ ಡಾ॥ ಕೆ. ಎಸ್. ಉಮಾಪತಿ ಶೆಟ್ಟಿ ಅವರಿಗೆ, ಸಾಹಿತ್ಯದ ವಿವಿಧ ಪ್ರಕಾರಗಳನ್ನು ಪರಿಶೀಲಿಸುವ ಶ್ರಮ ತೆಗೆದುಕೊಂಡ ಕನ್ನಡ ಅಧ್ಯಯನ ಕೇಂದ್ರದ ನನ್ನ ಸಹೋದ್ಯೋಗಿ ಮಿತ್ರರಿಗೆ, ಈ ಕೃತಿಯ ಪ್ರಕಟಣೆಯ ಹೊಣೆಯನ್ನು ಉತ್ಸಾಹದಿಂದ ಹೊತ್ತ ಪ್ರಸಾರಾಂಗದ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಕೆ. ಸಿ. ಶಿವಪ್ಪ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಜಿ. ಎಸ್. ಶಿವರುದ್ರಪ್ಪ
ನಿರ್ದೇಶಕರು
ಕನ್ನಡ ಅಧ್ಯಯನ ಕೇಂದ್ರ

ಮಾರ್ಚ್ 23, 1982

## ಪ್ರಕಾಶಕರ ಮಾತು

ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸುವ ಸದುದ್ದೇಶದಿಂದ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಪಠ್ಯ ಹಾಗೂ ಪಠ್ಯೇತರ ಹೊತ್ತಿಗೆಗಳನ್ನು ಪ್ರಕಟಿಸುವುದರ ಜೊತೆಗೆ ಇತರ ವಿಷಯದಲ್ಲಿ ಪ್ರಸಿದ್ಧರಾದ ವಿದ್ವಾಂಸರಿಂದ ಗ್ರಂಥಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಕಾರ್ಯವನ್ನು ನಿರ್ವಹಿಸುತ್ತಿದೆ. ಆಧುನಿಕ ಕನ್ನಡ ಸಾಹಿತ್ಯದ ಆವರಣಕ್ಕೆ ಅಗತ್ಯವಾದ ಹಾಗೂ ಜನಸಾಮಾನ್ಯರಿಗೆ ಜ್ಞಾನವನ್ನು ನೀಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವಶಾಸ್ತ್ರ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ, ಜಾನಪದ, ಸಾಮಾಜಿಕ ಹಾಗೂ ಮಾನವಿಕಶಾಸ್ತ್ರ ಮುಂತಾದ ವಿಷಯಗಳನ್ನು ಕುರಿತು ಪ್ರಸಾರಾಂಗ ಈಗಾಗಲೇ ಅನೇಕ ಹೊತ್ತಿಗೆಗಳನ್ನು ಪ್ರಕಟಿಸಿದೆ. ಬರಲಿರುವ ವರ್ಷಗಳಲ್ಲಿ ಇಂಥ ಹಲವಾರು ವಿಷಯಗಳ ಮೇಲೆ ಮಹತ್ತರವಾದ ಹೊತ್ತಿಗೆಗಳನ್ನು ಪ್ರಕಟಿಸಬೇಕೆಂಬ ಉದ್ದೇಶವನ್ನು ಪ್ರಸಾರಾಂಗ ಹೊಂದಿದೆ.

ಪ್ರಸ್ತುತ ಕೃತಿ, 'ಸಾಹಿತ್ಯ ವಾರ್ಷಿಕ 1980' ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಹಾಗೂ ಸಂಶೋಧನಾ ಸಹಾಯಕರು ಸೇರಿ ಸಿದ್ಧಪಡಿಸಿರುವ ವಿಮರ್ಶಾ ಸಂಕಲನ. 1980ರಲ್ಲಿ, ಕನ್ನಡದಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳನ್ನು ಕುರಿತು ವಿಮರ್ಶಾತ್ಮಕವಾಗಿ ಸಮೀಕ್ಷಿಸಲಾದ ಕೃತಿ ಇದಾಗಿದೆ. ವರ್ಷವರ್ಷವೂ ಈ ಬಗೆಯ 'ಸಾಹಿತ್ಯವಾರ್ಷಿಕ'ವನ್ನು ಕನ್ನಡ ಅಧ್ಯಯನ ಕೇಂದ್ರವು ಸಿದ್ಧಗೊಳಿಸುತ್ತಿರುವುದು ತುಂಬಾ ಸ್ವಾಗತಾರ್ಹವಾದ ಸಂಗತಿ. ಈ ಕೃತಿಯನ್ನು ಸಿದ್ಧಪಡಿಸಿ, ಕನ್ನಡ ಅಧ್ಯಯನ ಕೇಂದ್ರ ಮಾಲೆಗೆ, ಪ್ರಸಾರಾಂಗದ ಪ್ರಕಟಣೆಗೆ ವರ್ಷವರ್ಷವೂ ನೆರವು ನೀಡುತ್ತಾ ಬರುತ್ತಿರುವ ಡಾ॥ ಜಿ. ಎಸ್. ಶಿವರುದ್ರಪ್ಪನವರಿಗೂ, ಇನ್ನಿತರ ಲೇಖಕರಿಗೂ ವಿಶ್ವವಿದ್ಯಾಲಯದ ಪ್ರಸಾರಾಂಗದ ಪರವಾಗಿ ನನ್ನ ವಂದನೆಗಳು. ಈ ಕೃತಿಯನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟ ವಿಶ್ವವಿದ್ಯಾಲಯದ ಮುದ್ರಣಾಲಯದ ಸಿಬ್ಬಂದಿ ಅಭಿನಂದನೆಗೆ ಪಾತ್ರರು.

ಕೆ. ಸಿ. ಶಿವಪ್ಪ
ನಿರ್ದೇಶಕ (ಕಾರ್ಯನಿರ್ವಾಹಕ)
ಪ್ರಸಾರಾಂಗ

ಪರಿವಿಡಿ

# ಎಂಭತ್ತರ ಕಾವ್ಯ

**ಡಿ. ಆರ್. ನಾಗರಾಜ್**

ಎಂಭತ್ತರ ದಶಕದ ಮೊದಲ ವರ್ಷದ ಕಾವ್ಯ ಪರೀಕ್ಷೆ ಇದು. ಕಾಲಪುರುಷನ ಹೆಜ್ಜೆಯಲ್ಲಿ ಹಿಂದಿನ ವರ್ಷಗಳಲ್ಲಿ ಕಾಣಿಸದೇ ಇದ್ದ ಹೊಸ ಅಂಶವ್ಯಾವುದೂ ಧುತ್ತೆಂದು ಮೂಡಿ ಬಂದಿಲ್ಲ. ಹಿಂದಿನ ವರ್ಷಗಳದೇ ಸಮಸ್ಯೆಗಳು ಈ ವರ್ಷವೂ ಕಾಡಿವೆ.

ಇಲ್ಲಿ ವ್ಯಕ್ತವಾಗಿರುವ ಒಂದು ಮುಖ್ಯ ಸಂಗತಿ ಎಂದರೆ, ನಮ್ಮ ಮಧ್ಯಮವರ್ಗ ಅನುಭವಿಸುತ್ತಿರುವ ಬಿಕ್ಕಟ್ಟು. ಅದು ತಾತ್ವಿಕತೆ ಹಾಗೂ ಸೃಜನಶೀಲತೆಯ ಬಿಕ್ಕಟ್ಟು. ನವ್ಯಕಾವ್ಯ ಮಾರ್ಗದ ಈಗಿನ ಕೃತಿಗಳನ್ನು ನೋಡಿದರೆ ಈ ಮಾತು ಸ್ಪಷ್ಟವಾಗುತ್ತವೆ. ಅಥವಾ ಈಗಿನ ಬಹುಪಾಲು ತರುಣ ಕವಿಗಳ ಕೃತಿಗಳನ್ನು ನೋಡಿದರೂ ಆ ಸಂಗತಿ ಸ್ಪಷ್ಟವಾಗುವಂಥದು. ಮೊದಲಿನವರ ಕಾವ್ಯ ಬಂಧ ಒಂದು ಸಣ್ಣ ಒಳನೋಟ, ದೃಶ್ಯಿಕ ಅನುಭವ, ಚುರುಕಾದ ತಿರುವು ಇಷ್ಟಕ್ಕೆ ಸೀಮಿತ. ಈ ಕಾವ್ಯ ಬಂಧ ಎಷ್ಟೊಂದು ತೆಳುವು? ತೀವ್ರವಾದದ್ದನ್ನು, ಸಾಂದ್ರವಾದದ್ದನ್ನು ಅಲ್ಲಿ ಕಾಣಲು ಸಾಧ್ಯವಾಗುತ್ತಿಲ್ಲ. ಇನ್ನೊಂದು ರೀತಿಯ ವಾಮಪಂಥೀಯ ಕಾವ್ಯ ಕೂಡಾ ಮಧ್ಯಮವರ್ಗದ ಒಂದು ಗುಂಪು ಪ್ರಗತಿಪರ ಆಕ್ರೋಶವನ್ನು ಪ್ರಕಟಿಸುವಂಥದು. ಈ ಕಾವ್ಯ ಬಂಧ ಕೂಡಾ ಅಷ್ಟೇ ತೆಳು. ಮೊದಲನೆಯವರು ನೋಟಕ್ಕಾಗಿ ತಹ ತಹಿಸುವ ಮೂಲಕ ಬಿಕ್ಕಟ್ಟನ್ನು ದಾಟಲು ಯತ್ನಿಸುತ್ತಿದ್ದಾರೆ. ಎರಡನೆಯವರು ಆಕ್ರೋಶದ ಮೂಲಕ. ಆದರೆ, ಅವರ ಅನುಭವದ ಮೂಲಸ್ಥಿತಿ ಅವರ ಕಾವ್ಯ ಬಂಧದಲ್ಲಿ ಸಾಬೀತಾಗಿ ಹೋಗಿದೆ. ಯಾಕೆ ಹೀಗೆ?

ಬಹುಶಃ ಇದಕ್ಕೆ ಉತ್ತರ, ಭಾರತೀಯ ನವೋದಯದ ಚೌಕಟ್ಟಿನಲ್ಲಿ ರೂಪುಗೊಂಡ ಮಧ್ಯಮವರ್ಗದ ಬೌದ್ಧಿಕ ವ್ಯಕ್ತಿತ್ವ. ವಿಶ್ವಾತ್ಮಕ ಮೌಲ್ಯಗಳನ್ನು ಆಳವಾಗಿ ರೂಢಿಸಿಕೊಂಡ ಜನ ಇವರು. ಈ ನೆಲದ ಬಹುಸಂಖ್ಯಾತ ಜನತೆಯ ಮಾನಸಿಕ ಬದುಕಿನಿಂದ ಈ ಕಾರಣಕ್ಕಾಗಿಯೇ ಬೇರ್ಪಟ್ಟ ಜನ ಇವರು. ಬಹುಸಂಖ್ಯಾತ ಜನತೆಯ ಧರ್ಮ, ಆಚರಣೆ, ನಂಬಿಕೆ, ಕನಸು, ಪುರಾಣ ಇವೆಲ್ಲವುಗಳಿಂದ ವೈಚಾರಿಕವಾಗಿ ದೂರ ಹೋದವರು. ಅವರ ಪ್ರಯಾಣ ಕೊನೆ ಘಟ್ಟಕ್ಕೆ ಬಂದಿದೆ, ಕಾವ್ಯಕ್ಕೆ ಸಂಬಂಧಿಸಿದಂತೆ. ಕನ್ನಡ ಕಾವ್ಯದಲ್ಲಿ ಮಧ್ಯಮವರ್ಗದ ಒಂದು ಗುಂಪು

ರಾಜಕೀಯವಾಗಿ ಪ್ರಗತಿಪರ ನಿಲುವನ್ನು ತಳೆದಿದ್ದೂ ಕೂಡಾ ಈ ಬಿಕ್ಕಟ್ಟಿನ ಅರಿವಿನಿಂದಲೆ. ಆದರೂ ಆ ಬಹುಸಂಖ್ಯಾತ ಬದುಕಿಗೆ ಸ್ಥೂಲ ರಾಜಕೀಯ ಪ್ರತಿಸ್ಪಂದಿಸಿದರೆ ಹೊರತು, ಆ ಜಗತ್ತಿನ ಒಳಗಿನವರಾಗಿ ಸೃಜನಶೀಲರಾಗಲು ಸಾಧ್ಯವಾಗಲಿಲ್ಲ. (ಮಹಾದೇವರಂಥ ಅಪವಾದವಿದೆ) ಸಾಮಾಜಿಕವಾಗಿ ಬೇರೆ ಬೇರೆ ವರ್ಗಗಳ ಜನ ಇಲ್ಲಿದ್ದರಾದರೂ, ಅವರ ಬೌದ್ಧಿಕ ತಯಾರಿ ಕೂಡಾ ಬೇರೆಯವರಿಗಿಂತ ಭಿನ್ನವಾದುದಲ್ಲ. ಹೀಗಾಗಿ, ಕನ್ನಡ ಕಾವ್ಯದಲ್ಲಿ ಬಹುಸಂಖ್ಯಾತ ಬದುಕಿನ ಮುಖ್ಯ ಲೋಕಗಳು ಬರದೆ ಸಾಂದ್ರಹೀನ ಸ್ಥಿತಿಗೆ ಮುಟ್ಟಿಬಿಟ್ಟಿದೆ.

ಮತ್ತೆ ನಮ್ಮ ಕಾವ್ಯಕ್ಕೆ ಹೊಸ ಚೈತನ್ಯ, ಸಾಂದ್ರತೆ ತರುವುದಕ್ಕೆ ಇರುವ ರೀತಿಯೆಂದರೆ ಕಾವ್ಯದಲ್ಲಿ ಬಹುಸಂಖ್ಯಾತ ಜನಸ್ತೋಮದ ನಿರ್ದಿಷ್ಟ ಅನುಭವ ಲೋಕವನ್ನು ತರುವುದು. ಬಹುಸಂಖ್ಯಾತ ಜನತೆಯ ಸಂಸ್ಕೃತಿಗಳ, ಜೀವನ ಕ್ರಮಗಳ ಸಹಭಾಗಿಯಾಗಿ ಅಭಿವ್ಯಕ್ತಿ ಕೊಡಲು ಯತ್ನಿಸುವುದು. ಈ ಪ್ರಯತ್ನದ ಮುಖ್ಯ ನೆಲೆಯಿಂದ ಆಧುನಿಕ ಭಾರತೀಯರಾದ ನಾವು ನಂಬಿಕೊಂಡಿರುವ ವೈಚಾರಿಕತೆ, ವೈಜ್ಞಾನಿಕ ಚಿಂತನೆ ಮುಂತಾದ ಕಲ್ಪನೆಗಳ ಪುನರ್ ಪರಿಶೀಲನೆ. ಇಲ್ಲಿಯ ಅತ್ಯಂತ ದೊಡ್ಡ ಸಮಸ್ಯೆ ಎಂದರೆ ಬಹುಸಂಖ್ಯಾತ ಸಂಸ್ಕೃತಿಗಳು ಮತ್ತು ವ್ಯವಸ್ಥೆಯ ಬದಲಾವಣೆ ಇವೆರಡರ ನಡುವೆ ಅರ್ಥಪೂರ್ಣ ಸಂಬಂಧ ಸ್ಥಾಪಿಸುವುದು.

ಈ ವರ್ಷದ ಕಾವ್ಯ ಸೂಚಿಸುವುದು ಈ ಸಮಸ್ಯೆಗಳನ್ನೆ ಎಂದು ಈ ಲೇಖಕನ ವಿಶ್ಲೇಷಣೆ. ಇಲ್ಲಿ ಬಂದಿರುವ ವೆಂಕಟೇಶಮೂರ್ತಿ, ಕಮಲಾ ಹೆಮ್ಮಿಗೆ, ಅರವಿಂದ ನಾಡಕರ್ಣಿ, ಪ್ರಗತಿಪರ ಕವಿಗಳು ಮೇಲೆ ಸೂಚಿಸಲಾದ ಸಮಸ್ಯೆಯ ಎರಡು ಮುಖಗಳನ್ನು ಪ್ರತಿನಿಧಿಸುತ್ತಾರೆ. ಇವೆರಡರಿಂದ ಅರ್ಥಪೂರ್ಣವಾಗಿ ಬೇರೆಯಾಗಿ ನಿಂತ ಕಂಬಾರರ ಕಾವ್ಯವೂ ಇಲ್ಲಿದೆ.

ಕಳೆದ ಮೂರು ವರ್ಷಗಳಲ್ಲಿ ಕಾಣಿಸಿಕೊಂಡಿದ್ದ ಕೆಲವು ಕವಿಗಳು ಈ ವರ್ಷವೂ ಬಂದಿದ್ದಾರೆ (ಕಂಬಾರ, ವೆಂಕಟೇಶಮೂರ್ತಿ, ಅರವಿಂದ ನಾಡಕರ್ಣಿ). ಅವರ ಈ ವರ್ಷದ ಕೃತಿಗಳನ್ನು ಹೇಳುವಾಗ, ಹಿಂದಿನ ವರ್ಷದ ಆಲೋಚನೆಗಳನ್ನು ಗಮನಿಸಲಾಗಿದೆ. ಉಳಿದ ವಿಮರ್ಶೆಯ ನೆಲೆಗಳನ್ನು ಸಾಧ್ಯವಾದಷ್ಟು ಅಲ್ಲಿಯೇ ಕಾಣಿಸಲು ಯತ್ನಿಸಿದ್ದೇನೆ.

ಮೂಲಕ ಮಹಾಶಯರು : ಗೋಪಾಲಕೃಷ್ಣ ಅಡಿಗ

ತಮ್ಮೊಳಗೇ ತಾನು ಜಗಳವಾಡುವುದು ಕಾವ್ಯ ಎಂಬ ಯೇಟ್ಸ್‌ನ ವ್ಯಾಖ್ಯಾನ ಇಲ್ಲಿ ಸಲ್ಲುವಂಥದ್ದಲ್ಲ. ಈ ಸಂಕಲನದ ಬಂಧದ ಮುಖ್ಯರೂಪ ಹೊರಮುಖಿಯಾದದ್ದು ; ಹೊರಗೆ ಜಗಳಕ್ಕೆ, ತೀಕ್ಷ್ಣ ಟೀಕೆಗಳನ್ನು ಮಾಡುತ್ತಾ ನಿಲ್ಲುವಂಥದ್ದು. ಅಡಿಗರ ಕಾವ್ಯ ಚರಿತ್ರೆಯಲ್ಲಿ ಒಳಮುಖೀ ಮತ್ತು ಹೊರಮುಖೀ ಬಂಧಗಳೆರಡೂ

ಉದ್ದಕ್ಕೂ ಹರಿದು ಬಂದಿವೆ. ಆದರೆ, ಹೊರಮುಖಿಯಾದಾಗಲೆಲ್ಲಾ aggressive ಆಗಿ, ವಸ್ತು ಪ್ರತಿರೂಪ ನಿರ್ಮಾಣ ಇಲ್ಲವಾಗಿ ವಾದವಾಗಿ ಬೆಳೆಯುತ್ತಾ ಹೋಗುತ್ತದೆ. ಈ ಕೃತಿ ಈ ಬಗೆಯದೆ. ಆದ್ದರಿಂದ, ಈ ಕೃತಿಯನ್ನು ಓದಿಯಾದ ಮೇಲೆ ಇದರ ಬಗ್ಗೆ ಅಂಥ ಉತ್ಸಾಹವೇನೂ ಉಳಿಯುವುದಿಲ್ಲ.

ಆಧುನಿಕ ಜೀವನದಲ್ಲಿಯ, ನಮ್ಮ ಸಮಕಾಲೀನ ಜೀವನದಲ್ಲಿಯ ಸರ್ವಾಧಿಕಾರೀ ರೂಪಗಳನ್ನು ಕುರಿತ ಉಗ್ರಟೀಕೆ ಇಲ್ಲಿಯ ಎಲ್ಲ ಕವನಗಳ ಆಶಯ. ಆದರೆ ಈ ವ್ಯಗ್ರತೆ ಬಹಳಷ್ಟು ಸಾರಿ ತನ್ನ ಹದ್ದನ್ನು ಮೀರುವ ಆತುರವನ್ನು ಪ್ರಕಟಿಸುತ್ತದೆ. ಸಮೂಹ ಸಮಾಜ ಮತ್ತು ಜನತೆಯ ನಡುವಣ ಸೂಕ್ಷ್ಮ ವ್ಯತ್ಯಾಸ ಮರೆಯಾಗಿ ಹೋಗುತ್ತದೆ. 'ಮೂಲಕ ಮಹಾಶಯರು' ಕವನ ಇಡೀ ಸಂಕಲನದಲ್ಲಿ ಅತ್ಯಂತ ವ್ಯಗ್ರವಾದ ರಚನೆ. ಉಗ್ರಟೀಕೆಯ ರೂಪದಲ್ಲೆ ಇಡೀ ಕವನ ಸಾಗುತ್ತದೆ, ಇದರ ಇನ್ನೊಂದು ಮುಖವಾದ ಉಪದೇಶಾತ್ಮಕ ಸಾಲುಗಳೂ ಕೂಡಾ ಕವನದ ಕೊನೆಯ ಭಾಗದಲ್ಲಿ ಮೂಡಿಬರುತ್ತವೆ ಆದರೆ, ಒಟ್ಟಾರೆಯಾಗಿ ಅಡಿಗರ ಶ್ರೇಷ್ಠ ಕಾವ್ಯದ ಮುಖ್ಯಗುಣವಾದ ಸಾವಯವ ಶಿಲ್ಪದ ಗೈರುಹಾಜರಿ. ಇದೇ ಈ ಸಂಕಲನದ ಪ್ರಾತಿನಿಧಿಕ ಕವನ ಎಂದು ಹೇಳಬಹುದು.

ಇಲ್ಲೆಲ್ಲಾ ಕವನದ ಶಿಲ್ಪದೊಳಗೆ ರೂಪುತಾಳದ ಅಡಿಗರ "ವೈಚಾರಿಕತೆ"ಯೇ ವಿಜೃಂಭಿಸುತ್ತದೆ. ವ್ಯಕ್ತಿವಿಶಿಷ್ಟತೆ, ವ್ಯಕ್ತಿ ಸ್ವಾತಂತ್ರ್ಯ ಮುಂತಾದುವುಗಳ ಬಗ್ಗೆ ಸರಳ ಭಾಷ್ಯದಂತೆ ಬಹಳಷ್ಟು ಕವನಗಳು ಕಾಣುತ್ತವೆ. ಕಾವ್ಯದ ಮಟ್ಟಿಗೆ ವಿಚಾರಗಳು ಎಷ್ಟೇ ಉನ್ನತವಾಗಿದ್ದರೂ ಅವು ಅಮೂರ್ತವೇ. ಓದುಗನಿಗೆ ದಟ್ಟವಾಗಿ ತಟ್ಟದ ಸಂಗತಿಗಳು. ಅವು ನಿರ್ದಿಷ್ಟ ಮೂರ್ತತೆಯಲ್ಲಿ ಕಾವ್ಯದಲ್ಲಿ ಮೈತಾಳಬೇಕು. ತಮ್ಮ ಶ್ರೇಷ್ಠ ಕವನಗಳಲ್ಲಿ ಅಡಿಗರು ಕ್ರಾಂತಿಕಾರಿ ರೀತಿಯಲ್ಲಿ ಸಾಧಿಸಿದ್ದು, ಆ ಘಟ್ಟಗಳಲ್ಲಿ ಹೇಳಿದ್ದು ಇದನ್ನೆ. ಆದರೆ ಇಲ್ಲಂತೂ ಆ ಆಕೃತಿ ಪ್ರಜ್ಞೆ, ವಿಷಾದಮಯ ರೀತಿಯಲ್ಲಿ ಮಾಯವಾಗಿದೆ.

ವಾದದ ರೂಪವನ್ನು ಬಿಟ್ಟುಕೊಟ್ಟು ವ್ಯಾಕುಲತೆಯ ಕಡೆಗೆ ನಡೆವ ಒಂದೆರಡು ಕವನಗಳು ಈ ಕವನದಲ್ಲಿ ಮಾರ್ಮಿಕ ಯಶಸ್ಸನ್ನು ಗಳಿಸಿವೆ. "ಕೆಸರು ತೆಗೆಯುವುದು", "ಮಗು" ಕವನಗಳು ಈ ರೀತಿಯವು. ಇಲ್ಲಿ ಕೂಡಾ ವಿಚಾರಗಳ ತಾರ್ಕಿಕ ಪ್ರಕರಣ ನಡೆದಿದೆ, ಆದರೆ ಅಂಥ ಉಗ್ರವಾದ ಆವರಣವಿಲ್ಲ. ಸೂಕ್ಷ್ಮ ಅಂತರ್ಮುಖೀ ಶ್ರುತಿ ಈ ಕವನಗಳಿಗೊಂದು ವಿಶಿಷ್ಟ ಯಶಸ್ಸನ್ನು ನೀಡಿದೆ.

ಒಂದು ಹಂತದಿಂದಾಚೆಗೆ ವೃದ್ಧಾಪ್ಯದ ಕಡೆಗೆ ನಡೆಯುತ್ತಿದ್ದ ಹಾಗೆ ಯಾಕೆ ನಮ್ಮ ಕವಿಗಳು ಹೀಗಾಗುತ್ತಾರೆ? ಕೆಲವರಿಗೆ ಅನುಭವಗಳನ್ನು ಮೂರ್ತಗೊಳಿಸುವ, ನಿರ್ದಿಷ್ಟಗೊಳಿಸುವ ಹಠ ಹೋಗಿ ಅಮೂರ್ತ ವಿಚಾರಗಳ, ಧರ್ಮದ ಬೆನ್ನು ಹತ್ತುತ್ತಾರೆ. ಅಡಿಗರು ಇದಕ್ಕಿಂತ ಭಿನ್ನ. ಆದರೆ, ಇಲ್ಲಿ ವಿಚಾರಗಳ ತಾರ್ಕಿಕ ಪೃಥಕ್ಕರಣದ ಹಠ ಎರಡೂ ಕಡೆಗೆ ಅರ್ಥಪೂರ್ಣ ಕಾವ್ಯಬಂಧ ಮಾಯವಾಗುತ್ತದೆ. ಈ ಸಂಕಲನ ಅದಕ್ಕೆ ಸಾಕ್ಷಿ.

ಜೀವಧ್ವನಿ : ಚೆನ್ನವೀರ ಕಣವಿ

ಹಿಂದೆ ಕುರಕೋಟಿಯವರು "ನವ್ಯಕಾವ್ಯ ಪ್ರಯೋಗದಲ್ಲಿ ಕಣವಿಯವರ ಕಾವ್ಯದ ಮುಖ್ಯ ಲಕ್ಷಣಗಳು ಸ್ವಾನುಭೂತಿ ಮತ್ತು ವರ್ಣನೆ ಎಂದಿದ್ದಾರೆ. ಕಣವಿಯವರ ಕಾವ್ಯದ ಚರ್ಚೆಗೆ ಉತ್ತರ ಪ್ರಾರಂಭವಾಗುವ ಈ ವಿಚಾರದ ಹಿನ್ನೆಲೆಯಲ್ಲಿಯೇ ಪ್ರಸ್ತುತ ಕೃತಿಯನ್ನು ನೋಡಿದರೆ ಕುತೂಹಲಕಾರೀ ಅಂಶಗಳು ಹೊರ ಬೀಳುತ್ತವೆ.

ಮೇಲಿನ ಎರಡೂ ಗುಣಗಳ ಹಿನ್ನೆಲೆಯಲ್ಲಿಯೇ ಕಣವಿಯವರ ಅತ್ಯಂತ ಶ್ರೇಷ್ಠಕಾವ್ಯವನ್ನು ವಿಶ್ಲೇಷಿಸಬೇಕೆನ್ನುವ ನಿಲುವು ಅರ್ಥಪೂರ್ಣವಾದರೂ, ಆ ಎರಡೂ ನೆಲೆಗಳಿಗಿಂತ ಭಿನ್ನವಾದ ನೆಲೆಯಲ್ಲಿಯೇ ಅವರ ಕಾವ್ಯವನ್ನು ನೋಡಲು ಸಾಧ್ಯವಿದೆ. ಅದು ಅವರ ವಿಚಾರಧಾರೆಯ ನೆಲೆಯಿಂದ ಕಾವ್ಯವನ್ನು ನೋಡಲು ಯತ್ನ. ನವೋದಯದ ಚಾರಿತ್ರಿಕ ಸಂದರ್ಭದಲ್ಲಿ, ಅದರ ಮುಂದಿನ ಕೆಲವು ವರ್ಷ ಗಳಲ್ಲಿ ಉದಾರವಾದ ಕಾವ್ಯದ ಮುಖ್ಯ ತಾತ್ವಿಕತೆಗಳಲ್ಲಿ ಒಂದು. ವೈಚಾರಿಕತೆಯ ಹಂತದಲ್ಲಿ ಉದಾರವಾಗಿದ್ದುದೇ ಕಾವ್ಯರೂಪದಲ್ಲಿ, ಭಾಷಾ ಬಳಕೆಯಲ್ಲಿ ಭಾವ ಗೀತಾತ್ಮಕತೆಯಾಗಿ ಪರಿವರ್ತನೆಯಾಗುತ್ತದೆ. ಕಣವಿಯವರ ಕಾವ್ಯವನ್ನು ಈ ಮಾತಿಗೆ ಸಮರ್ಥ ಉದಾಹರಣೆಯನ್ನಾಗಿ ತೋರಿಸಬಹುದು. ಅಂದೂ ಈ ಎರಡೂ ಗುಣಗಳೇ ಕಣವಿಯ ಕಾವ್ಯದಸತ್ವ ; ಈ ಹೊತ್ತಿಗೂ ಹಾಗೆಯೇ. ಕನ್ನಡ ನವೋ ದಯ ಈ ಗುಣಗಳನ್ನು ಕವಿಯಲ್ಲಿ ರೂಪಿಸಿರುವುದರಿಂದ, ಈ ಮೌಲ್ಯ ನಿರಂತರತೆ ಕಣವಿಯವರಿಗೆ ನವೋದಯದ ಜೊತೆಗೆ ಆಳವಾದ ಸಂಬಂಧವನ್ನು ತೋರಿಸುತ್ತದೆ. ಕಾವ್ಯಸಂಸ್ಥೆಯ ಜೀವಂತರೂಪಗಳಿಗೆ ಕವಿ ಪ್ರತಿಸ್ಪಂದಿಸುತ್ತಾ ಬಂದರೂ, ಈ ಎರಡೂ ಗುಣಗಳ ಹಿನ್ನೆಲೆಯಲ್ಲಿಯೇ ಬೆಳೆಯುತ್ತಾ ಬಂದಿದ್ದಾರೆ. ಈ ಕಾರಣಕ್ಕಾಗಿಯೇ ನವೋದಯದ ನಂತರ ಕನ್ನಡ ಕಾವ್ಯ ಚಳುವಳಿಯಲ್ಲಿ ಮಾಯವಾದ ಅನೇಕ ಸಂಗತಿ ಗಳನ್ನು ಕಣವಿ ಮತ್ತು ಅವರ ಜೊತೆಗಾರರ ಕಾವ್ಯದಲ್ಲಿ ಈ ಹೊತ್ತಿಗೂ ಕಾಣಬಹುದು. "ಜೀವಧ್ವನಿ" ಕಣವಿಯವರಲ್ಲಿಯ ಈ ನಿರಂತರತೆಗೆ ಸಾಕ್ಷಿ.

"ಜೀವಧ್ವನಿ"ಕಣವಿಯವರ ಕಾವ್ಯದಲ್ಲಿಯ ಅನೇಕ ಬದಲಾವಣೆಗಳನ್ನು ಪ್ರತಿಧ್ವನಿ ಸುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ವರ್ಣನೆಯ ವಿವರಶೀಲತೆ ಬದಲಾಗಿ ಅನೇಕ ಕಡೆ ಆ ವಿವರಶೀಲತೆ ಇಲ್ಲದೆಯೂ ಸೂಕ್ಷ್ಮವಾಗುವ ಪ್ರಯತ್ನ ಸ್ಪಷ್ಟವಾಗುವ ಪ್ರಯತ್ನ. ಕಣವಿಯವರ ಕಾವ್ಯಸಿದ್ಧಿಯಲ್ಲಿ ತುಂಬ ಪ್ರಮುಖಸ್ಥಾನಗಳಿಸಿರುವ ಸಾನೆಟ್‌ಗಳ ಬಂಧದಲ್ಲಿ ಇವುಗಳನ್ನು ಕಾಣಬಹುದು. ಇಲ್ಲಿ ಕೂಡಾ ಕೆಲವು ಸೊಗಸಾದ ಸಾನೆಟ್ಟುಗಳಿವೆ. "ಪ್ರತಿ ಯುಗಾದಿಯ ನಸುಕು", "ಬೆಳುವಲದ ಬಾಗಿನ" "ಗೋಪುರದ ಗಡಿಯಾರ," "ಜಿಜ್ಞಾಸೆ", ಸಾನೆಟ್ಟುಗಳು ಯಶಸ್ಸು ಗಳಿಸುವುದು ವಸ್ತು ಮತ್ತು ವಿವರ ಗಳೆರಡರ ನಡುವಣ ಅಖಂಡ ಸಂಬಂಧದಿಂದ. ಕಣವಿಯವರ ಮೊದಲ ಕಾವ್ಯವಿವರ ತನ್ನ ಸಮೃದ್ಧತೆಯಿಂದ, ಕುಸುರಿಗೆಲಸದ ಜಾಣ್ಮೆಯಿಂದ ವಿಜೃಂಭಿಸಿದ ರೀತಿಯನ್ನು ಇಲ್ಲಿ ಕಾಣಲಾಗುವುದಿಲ್ಲ. ಇಲ್ಲಿ ವಿವರವೆಂಬುದನ್ನು ವಸ್ತುವಿನ ಶರೀರದಲ್ಲಿ ಅಂತ ರಂಗೀಕರಿಸಲ್ಪಟ್ಟಿದೆ.

ಕಣವಿಯವರಿಗೆ ಕನ್ನಡ ನವೋದಯದ ಜೊತೆಗೆ ಇರುವ ಆಳವಾದ ಸಂಬಂಧಕ್ಕೆ ಇಲ್ಲಿಯ ಪ್ರಕೃತಿ ಕೂಡಾ ಇನ್ನೊಂದು ಮಹತ್ವದ ಉದಾಹರಣೆ. ಪ್ರಕೃತಿ ಎಂದರೆ ಬರೀ ಕಲ್ಲು, ಮಣ್ಣು, ಹೊಳೆಗಳ ಚಿತ್ರಣವಲ್ಲ. ಅಲ್ಲಿ ಇದು ಬದುಕಿನ, ಚರಿತ್ರೆಯ ಪ್ರತಿಮೆ ಕೂಡಾ ಹೌದು. ಕಣವಿಯವರ ಸೂಕ್ಷ್ಮ ಅನುಭವಗಳೆಲ್ಲ ಪ್ರಕೃತಿಗೆ ಭಾಷಾಂತರವಾಗುತ್ತದೆ. "ಜೋಳದ ಪಾಳಿ", "ಅಡ್ಡಮಳೆ" "ಧ್ವನಿ-ದ್ವನಿ", "ನೆನಪು" "ಪ್ರತಿ ಯುಗಾದಿಯ ನಸುಕು" ಈ ದೃಷ್ಟಿಯಿಂದ ಇಡೀ ಸಂಕಲನರ ಶ್ರೇಷ್ಠ ಕವನಗಳು. ಅದರಲ್ಲೂ "ಧ್ವನಿ-ದ್ವನಿ" ಕವನವಂತೂ ಕಣವಿಯವರ ಅನೇಕ ಸೂಕ್ಷ್ಮ ಶಕ್ತಿಗಳನ್ನು ಬಳಸಿಕೊಂಡಿದೆ.

ಭಾಷೆಯ ಪ್ರಬುದ್ಧ ಭಾವಗೀತಾತ್ಮಕತೆ ಇಲ್ಲಿಯ ಇನ್ನೊಂದು ಪ್ರಧಾನ ಅಂಶ. ಬಹುಶಃ ಇದು ಸಾಧ್ಯವಾದದ್ದು ಕವಿ ತಮ್ಮ ಕಾವ್ಯದಲ್ಲಿ ಪ್ರಕೃತಿಯ ಮೂಲಕ ತಮ್ಮ ಸೂಕ್ಷ್ಮ ಅನುಭವಗಳನ್ನು ಪ್ರತೀಕಗೊಳಿಸುವ ರೀತಿಯಿಂದಾಗಿ. ಇಲ್ಲಿ ವಿಷಯವಿಲ್ಲದ ವ್ಯಂಗ್ಯ, ಸುಶಿಕ್ಷಿತ ಅಪಹಾಸ್ಯದ ಕವನಗಳು ಸಾಕಷ್ಟಿವೆ. ಕಾವ್ಯಬಂಧದ ದೃಷ್ಟಿಯಿಂದ ಇವನ್ನು ಮುಖ್ಯವಾಗಿ ಪರಿಗಣಿಸಲು ಸಾಧ್ಯವಿಲ್ಲವಾದರೂ, ಓದಿಸಿಕೊಳ್ಳುವ ಗುಣ ಇಲ್ಲಿ ಮುಖ್ಯ. "ಅಲ್ಲ, ಮಾತ್ಡೇಳಿತೀನಿ," "ಎದ್ದೀರಾ ? ನೀವು ಎದ್ದೀರಾ" ಕವನಗಳು ದೊಡ್ಡ ಸಭೆಗಳಲ್ಲಿ ಮೆಚ್ಚುಗೆಗಳಿಸುವಂಥ ಅನೇಕ ಗುಣಗಳನ್ನು ಹೊಂದಿವೆ.

ಇವಲ್ಲದೆ ಕೆಲವು ಸುಂದರವಾದ ಅನುವಾದಗಳೂ ಈ ಕೃತಿಯಲ್ಲಿವೆ. ಅನೇಕ ದಶಕಗಳ ಕಾಲ ಕಾವ್ಯ ಪ್ರಯೋಗ ನಡೆಸಿದ ಕವಿಗಳ ಕಾವ್ಯವನ್ನು ವಿಶ್ಲೇಷಿಸುವಾಗ ಚಾರಿತ್ರಿಕವಾದ ಒಂದು ಪ್ರಶ್ನೆ ಸಹಜವಾಗಿ ಮೂಡುತ್ತದೆ. ಕವಿಯ ಕಾವ್ಯ ಜೀವನ ದಲ್ಲಿ ತುಂಬ ಮಹತ್ವದ ಸೃಜನಶೀಲತೆಯ ಘಟ್ಟ ಯಾವುದು ? ಅದರ ಪ್ರೇರಣೆ, ನೆಲೆಗಳಾವುವು ? ಒಂದು ಬಗೆಯಲ್ಲಿ ಈ ಪ್ರಶ್ನೆ ಹುಚ್ಚುತನದಂತೆ, ಅಸಾಧ್ಯ ಸಾಹಸ ದಂತೆ ಕಂಡರೂ ಇದರ ಉತ್ತರವೇ ಕವಿಯೊಬ್ಬನ ಕಾವ್ಯಜೀವನದ ಒಳ ಮುಖಗಳನ್ನು ಸಮರ್ಥವಾಗಿ ಗುರುತಿಸುತ್ತದೆ. ಅಂಥ ಪ್ರಯತ್ನ ಮಾಡುವ ಗಂಭೀರ ಕಾವ್ಯಾ ಭ್ಯಾಸಿಗೆ "ಜೀವಧ್ವನಿ" ಬಹುಮುಖ್ಯ ಮಾಹಿತಿಯಾಗುವ ಸಾಧ್ಯತೆ ಇದೆ. "ದೀಪ ಧಾರಿ", "ಮಣ್ಣಿನ ಮೆರವಣಿಗೆ", "ನೆಲ-ಮುಗಿಲು" ಸಂಕಲನಗಳ ಹಿನ್ನೆಲೆಯಲ್ಲಿ ಈ ಸಂಕಲನವನ್ನು ಅಧ್ಯಯನ ಮಾಡಿದಾಗ, ಕೆಲವರ ಒಲವು ಆ ಸಂಕಲನಗಳ ಕಡೆಗೇ ತಿರುಗಬಹುದು. ನನಗಂತು ಎರಡೂ ದೋಣಿಯಲ್ಲಿ ಕಾಲಿದೆ. ಏಕೆಂದರೆ, ಎರಡೂ ಒಂದೇ ಹೊಳೆಯ ಬೇರೆಬೇರೆ ನಿಲ್ದಾಣಗಳು ಎಂಬ ನಂಬಿಕೆ. ಮತ್ತಷ್ಟು ಆಳವಾದ ಅಧ್ಯಯನ ಈ ಪ್ರಶ್ನೆಗೆ ಉತ್ತರ ದೊರಕಿಸಬಹುದೇನೋ.

ಎದೆತುಂಬಿ ಹಾಡಿದೆನು : ಜಿ. ಎಸ್. ಶಿವರುದ್ರಪ್ಪ

ಜಿ. ಎಸ್. ಎಸ್. ಅವರ ಹಾಡಬಹುದಾದ ನಲವತ್ತಾರು ಭಾವಗೀತೆಗಳ ಸಂಕಲನ ಇದು. ಹಾಡುಗಾರಿಕೆಯ ಮೂಲಕ ತುಂಬ ಜನಪ್ರಿಯವಾಗಿರುವ ಕವನಗಳು ಇಲ್ಲಿವೆ.

ಕನ್ನಡ ನವೋದಯದಿಂದ ತಮ್ಮ ಕಾವ್ಯ ಶಿಕ್ಷಣ ಪ್ರಾರಂಭಿಸಿದ ಶ್ರೀಯುತರಿಗೆ ಭಾವಗೀತೆ ಸಹಜವಾಗಿಯೇ ಒಲಿದಿರುವುದನ್ನು ಈ ಕೃತಿಯಲ್ಲಿ ಕಾಣಬಹುದು. ಜಿ.ಎಸ್.ಎಸ್.ರ ಮೊದಲ ಹಂತದ ಪ್ರಧಾನ ಸೃಷ್ಟಿ ಎಂದರೇನೇ ಭಾವಗೀತೆ. ಹೀಗಾಗಿ ವಿವಿಧ ಸಂಕಲನಗಳಿಂದ ಆರಿಸಲಾಗಿರುವ ಈ ಭಾವಗೀತೆಗಳ ಸಂಕಲನ ಒಟ್ಟಾರೆಯಾಗಿ ಕವಿಯ ಪ್ರೇರಣೆ ಮತ್ತು ನೀತಿಗಳನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ. ಈ ಎಲ್ಲ ಭಾವಗೀತೆಗಳು ಸೃಷ್ಟಿಯಾಗಿರುವುದು ಸೌಂದರ್ಯಾತ್ಮಕ ಮತ್ತು ಮೆಟಫಿಸಿಕಲ್ ಘಟ್ಟಗಳಲ್ಲಿ ಎಂಬ ಅಂಶ ಕುತೂಹಲಕಾರಿ. ಹೀಗಾಗಿ, ಭಾವಗೀತೆಯ ರೂಪ ಕನ್ನಡದಲ್ಲಿ ಒಂದು ನಿರ್ದಿಷ್ಟ ಜೀವನದರ್ಶನದ ಅಭಿವ್ಯಕ್ತಿ ಕೂಡಾ. ಬೇರೆ ಘಟ್ಟಗಳಲ್ಲಿ ಕೂಡಾ ಭಾವಗೀತೆ ರಚನೆಯಾಗಿರಬಹುದಾದರೂ, ಎರಡರ ನಡುವೆ ಒಂದು ಪ್ರಮುಖ ವ್ಯತ್ಯಾಸ ಕಾಣುತ್ತದೆ. ಮೊದಲ ಘಟ್ಟಗಳಲ್ಲಿ ಕವಿಯ ಕೇಂದ್ರಕಾಳಜಿಗಳು ಮತ್ತು ಭಾವಗೀತೆಗಳ ನಡುವೆ ಅಭಿನ್ನ ಸಂಬಂಧವಿದೆ. ಆದರೆ, ಎರಡನೆಯದರಲ್ಲಿ, ಕವಿಯ ಕೇಂದ್ರಕಾಳಜಿ ಬೇರೆಯಾಗಿ ಆಂಶಿಕವೆಂಬಂತೆ ಭಾವಗೀತೆಗಳು ರಚನೆಯಾಗಿವೆ. "ಗೋಡೆ" ಸಂಕಲನದಲ್ಲಿ ಪ್ರಕಟವಾಗಿರುವ ಭಾವಗೀತೆಗಳಿಗೂ, ಮೊದಲ ಎರಡು ಘಟ್ಟಗಳಲ್ಲಿ ರಚನೆಯಾಗಿರುವ ಭಾವಗೀತೆಗಳಿಗೂ ಆ ಕೃತಿಗಳ ಸಂದರ್ಭದಲ್ಲಿ ಪ್ರಕಟವಾಗುವ ವ್ಯತ್ಯಾಸ ಎದ್ದು ಕಾಣುವಂಥದು. "ಗೋಡೆ" ಸಂಕಲನ ಜಿ.ಎಸ್.ಎಸ್. ಅವರ ಕಾವ್ಯ ಜೀವನದಲ್ಲಿ ರುದ್ರತಿಳಿವಿನಘಟ್ಟ ಎಂದು ಹೆಸರಿಸಬಹುದಾದ ನೆಲೆ. ಅಲ್ಲಿಯ ಕೇಂದ್ರಕಾಳಜಿ ಸುಕುಮಾರ ಭಾವಗೀತೆಯಾಗಿ ಅಭಿವ್ಯಕ್ತಿಯಾಗಲು ಸಾಧ್ಯವಿಲ್ಲ. "ನಾವು", "ನಿನ್ನದೆ ನೆಲ", "ಯುಗಾದಿಯ ಹಾಡು", ಮುಂತಾದ ರಚನೆಗಳನ್ನು ಆ ಸಂಕಲನದ ಶ್ರೇಷ್ಠ ಕವನಗಳ ಜೊತೆಗೆ ಹೋಲಿಸಿ ನೋಡಿದರೆ ವ್ಯತ್ಯಾಸ ತಿಳಿಯುತ್ತದೆ. ಆದರೆ, ಮೊದಲ ಸಂಕಲನದ ಭಾವಗೀತೆಗಳಿಗೂ—ಅಂದರೆ "ಸಾಮಗಾನ", "ಒಲವು-ಚೆಲುವು", "ತೆರೆದದಾರಿ", "ದೇವಶಿಲ್ಪ", "ಕಾರ್ತೀಕ"ದಿಂದ ಆರಿಸಿದಂಥವು-ಅಲ್ಲಿಯ ಶ್ರೇಷ್ಠ ಸಂಕಲನಗಳಿಗೆ ಆಳವಾದ ಸಂಬಂಧ ಇರುವುದು ಕಂಡುಬರುತ್ತದೆ. ಅಲ್ಲಿಯ ಶ್ರೇಷ್ಠಕವನದ ಸುಂದರ ಭಾವಗೀತೆಗಳೂ ಹೌದು. ಈ ಸಂಕಲನದಲ್ಲಿ ಅಂಥ ರಚನೆಗಳು ಸಾಕಷ್ಟಿವೆ.

"ಅಲ್ಲಿ-ಇಲ್ಲಿ", "ನೆಲದ ಕರೆ", "ಒಂದು ಕ್ಷಣ", "ಶರದ್‌ರಾತ್ರಿ", "ಆವಾಹನೆ", "ತೃಪ್ತಿ"ಯಂತಹ ಸುಂದರ ಕವನಗಳು ಈ ಸಂಕಲನದ ಮೌಲಿಕತೆಯನ್ನು ಹೆಚ್ಚಿಸಿವೆ. ಇಡೀ ಸಂಕಲನದಲ್ಲಿ ಕಾಣುವ ಆದರ್ಶವಾದ, ಅಂತಃಕರಣ, ಪ್ರಸನ್ನತೆ ಮುಂತಾದ ಗುಣಗಳ ಪ್ರಾತಿನಿಧಿಕ ಕವನಗಳು ಇವು. ಈ ಕೃತಿಯ ಇನ್ನೊಂದು ಆಕರ್ಷಣೆ ಎಂದರೆ "ತೀರ್ಥವಾಣಿ"ಯ ಅನೇಕ ಕವನಗಳು ಇಲ್ಲಿ ಸೇರಿವೆ ಎಂಬುದು. "ಹೌದೇನೆ ಉಮಾ ಹೌದೇನೆ" ರೀತಿಯ ಕವನಗಳು "ತೀರ್ಥವಾಣಿ"ಯಲ್ಲಿ ಸಾಕಷ್ಟಿವೆ. ದೈವದ ಪರಿಭಾಷೆಯಲ್ಲಿ ಮಾನವರಾಗವೊಂದರ ಉತ್ಕಟ ಆರಾಧನೆ.

ಬರುಬರುತ್ತಾ ಜಿ.ಎಸ್.ಎಸ್.ರ ಕಾವ್ಯದಿಂದ ಈ ರೂಪದ ಭಾವಗೀತಾತ್ಮಕತೆ ಮಾಯವಾಗುತ್ತಾ ಬಂತು ಎಂಬುದು ಕಾವ್ಯಾಭ್ಯಾಸಿಗಳಿಗೆ ತಿಳಿದ ವಿಷಯ. ಆದರೆ, ಈ ಭಾವಗೀತಾತ್ಮಕತೆ ಬೇರೆ ರೀತಿಯಲ್ಲಿ ಅಂತರ್ಗತವಾಗಿ ಮುಂದುವರಿಯಿತು

ಎಂಬುದು ನಿಜವಾದರೂ, ಇವೆರಡರ ಸಂಬಂಧ, ಆಳವಾದ ಅಧ್ಯಯನಕ್ಕೆ ಯೋಗ್ಯ. ಏಕೆಂದರೆ, ಕನ್ನಡ ನವೋದಯ ಮತ್ತು ನವ್ಯಗಳು ಪ್ರತಿಕ್ರಿಯಿಸಿದ ಒಂದು ರೀತಿಯನ್ನೂ ನಾವು ಈ ಮೂಲಕ ಅರ್ಥಮಾಡಿಕೊಳ್ಳಲು ಸಾಧ್ಯವಿದೆ. ಜಿ.ಎಸ್.ಎಸ್.ರ ಇನ್ನೂ ಅನೇಕ ಭಾವಗೀತೆಗಳು ಈ ಕೃತಿಯಲ್ಲಿ ಸೇರಿಲ್ಲವಾದರೂ, ಈ ಕೃತಿ ಮೇಲೆ ಸೂಚಿಸಿದ ರೀತಿಯ ಅಭ್ಯಾಸಕ್ಕೆ ಮಹತ್ವದ ನೆರವು ನೀಡುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಕಾವ್ಯ ರಸಿಕರಿಗೆ ಬೇಕಾದ ಸುರಳಿ, ಸುಂದರ ಭಾವಗೀತೆಗಳು ಒಂದೆಡೆಗೆ ಸಿಕ್ಕಿವೆ. ಈ ಸಂಕಲನದ ಅಸ್ತಿತ್ವ ಇರುವುದು ಬಹುಶಃ ಇಲ್ಲೇ.

ಆಯ್ದು ಕವನಗಳು : ಚಂದ್ರಶೇಖರ ಕಂಬಾರ

ಭಾರತೀಯ ನವೋದಯ ವಿಶ್ವಾತ್ಮಕ ಮೌಲ್ಯಗಳನ್ನು ದಟ್ಟವಾಗಿ ಹಬ್ಬಿಸಲಾರಂಭಿಸಿದ ಮೇಲೆ ನಮ್ಮ ಸಂಸ್ಕೃತಿಯಲ್ಲಾಗಿರುವ ಪಲ್ಲಟಗಳ, ದುರಂತ ಪಲ್ಲಟಗಳ ಸ್ವರೂಪ ನಮ್ಮ ತಾತ್ವಿಕ ಹಿಡಿತಕ್ಕಿನ್ನೂ ಸಿಕ್ಕಿಲ್ಲ. ಯಾವ ನಿರ್ದಿಷ್ಟ ಆಚಾರಕ್ರಮದಲ್ಲೂ ಬೇರಿಲ್ಲದ ಅಮೂರ್ತ ಮೌಲ್ಯಗಳ ಜಗತ್ತಿನ ಆರಂಭ ಅದು. ಆಧುನಿಕ ಕನ್ನಡ ಸಾಹಿತ್ಯದ ಮೇಲಂತೂ ಇದರ ಪರಿಣಾಮ ಗಾಢವಾದದ್ದೆ. ಪ್ರತಿಷ್ಠಿತ ವಿಶ್ವಾತ್ಮಕಮೌಲ್ಯಗಳಿಗಿಂತ ಭಿನ್ನವಾದ ಕೆಳ ಸಂಸ್ಕೃತಿಗಳ ಜೊತೆಗೆ ಸಾಹಿತ್ಯದಲ್ಲಿ ಅರ್ಥಪೂರ್ಣ ಸಂಬಂಧ ಅಸಾಧ್ಯವಾಗಿ ಬಿಟ್ಟಿತು. ಆ ಜಗತ್ತು ಬರೀ ಮೌಢ್ಯದ ಜಗತ್ತಾಗಿ ಕಂಡಿತು. ಈ ರೀತಿಯ ಮೌಲ್ಯಗಳ ಬೆನ್ನು ಹತ್ತಿ ಹೊರಟ ಮಧ್ಯಮವರ್ಗ ಸಹಜವಾಗಿ ಈಗ ತನ್ನ ಪ್ರಯಾಣದ ಕೊನೆಯನ್ನು ಮುಟ್ಟಿದೆ. ಎದುರಿಗೊಂದು ದೊಡ್ಡ ಗೋಡೆ. ಈ ಕಾರಣಕ್ಕಾಗಿಯೇ ಕನ್ನಡ ಮಧ್ಯಮ ವರ್ಗದ ಕಾವ್ಯ ಈಗ ಸಣ್ಣ ಒಳನೋಟಗಳ ಪುಲಕಗಳ ಕಾವ್ಯವಾಗಿ ಒಂದು ಕಡೆ ನಿಂತಿದೆ. ಇಲ್ಲ ಪ್ರಗತಿಪರ ಘೋಷಣೆಗಳನ್ನು ಹೊತ್ತು ಅದೇ ವಿಶ್ವಾತ್ಮಕ ಪರಿಭಾಷೆಯಲ್ಲಿ ಕೂಗುತ್ತಿದೆ. ಈ ಎರಡು ಕಡೆಯೂ ಬಹು ಸಂಖ್ಯಾತ ಜನತೆಯ ಸಂಸ್ಕೃತಿಯ ಅಂತರಂಗದ ಜೊತೆಗೆ ಸಂಬಂಧ ಇಲ್ಲವಾಗಿದೆ.

ಈ ಕಾರಣಕ್ಕಾಗಿಯೇ ಚಂದ್ರಶೇಖರ ಕಂಬಾರರ ಸ್ಥಾನ ಆಧುನಿಕ ಕನ್ನಡ ಕಾವ್ಯದಲ್ಲಿ ಅನನ್ಯವಾದದ್ದು. ನವೋದಯ (ಬೇಂದ್ರೆಯವರ ಕೆಲವು ಕವನಗಳನ್ನು ಬಿಟ್ಟು) ನವ್ಯ ಹಾಗೂ ನವ್ಯೋತ್ತರ ಸಾಹಿತ್ಯಕ ಮಾರ್ಗಗಳು ಸಂಬಂಧ ಸ್ಥಾಪಿಸಲು ನಿರ್ಲಕ್ಷಿಸಿದ ಅನುಭವ ಲೋಕಗಳ ಪ್ರತಿನಿಧಿಯಾಗಿ ಕಂಬಾರರು ಕನ್ನಡ ಕಾವ್ಯದಲ್ಲಿ ಪ್ರಕಟವಾದರು. ಜನ ಸಾಮಾನ್ಯರ ಮಾನಸಿಕ ಬದುಕಿನ ವಾಸ್ತವವಾದ, ಪುರಾಣ, ಕಥೆ, ರಿಚುಯಲ್, ಅ-ವೈದಿಕ ಸಾಂಸ್ಕೃತಿಕ ನೆಲೆಗಳಿಂದ ತಮ್ಮ ಕಾವ್ಯ ಜೀವನದ ಶಕ್ತಿಯನ್ನು ಕಂಬಾರರು ಪಡೆದುಕೊಂಡರು. ಹಳ್ಳಿಯ ಕನಸುಗಾರನ, ಕ್ಷುದ್ರದೇವತೆಗಳ ಅರ್ಚಕನ, ಮೈದುಂಬಿ ಕುಣಿಯುವ ಆರಾಧಕನ ಧಾರೆಗಳು ಕಂಬಾರರ ಕಾವ್ಯದಲ್ಲಿ ಪ್ರಕಟವಾಗುತ್ತವೆ.

ಈ ಸಂಕಲನದಲ್ಲಿ ಅತ್ಯಂತ ಮಹತ್ವಾಕಾಂಕ್ಷೀ ಕವನವೆಂದರೆ "ಹೇಳತೇನ ಕೇಳು". ಇದರ ಚಾರಿತ್ರಿಕ ಅನುಭವ, ವಸ್ತು ಮತ್ತು ಆಕೃತಿಗಳ ನಡುವೆ ಇರುವ ಯಶಸ್ವೀ ಸಾಮರಸ್ಯ ಈ ಕವನವನ್ನು ಕನ್ನಡದ ಶ್ರೇಷ್ಠ ಕವನಗಳಲ್ಲೊಂದನ್ನಾಗಿ ಮಾಡಿದೆ. ಇದನ್ನು ಮತ್ತೆ ಓದುವಾಗ ನನಗೆ ನಥಾನ್ ವ್ಯಾಚೆಲ್ ಎಂಬ ಚರಿತ್ರಕಾರನ "ವಿಶನ್ ಆಫ್ ದಿ ವ್ಯಾಂಕ್ವಿಷ್ಡ್" ಎಂಬ ಕೃತಿ ಉದ್ದಕ್ಕೂ ನೆನಪಾಗುತ್ತಿತ್ತು. ಪೆರು ಜನಾಂಗವನ್ನು ಸ್ಪಾನಿಯನ್ನರ್ ಜಯಿಸಿದಾಗ ಸೋತವರ ಸಂಸ್ಕೃತಿಯಲ್ಲಿ ಉಂಟಾದ ವಿದ್ಯಾಮಾನಗಳ, ಅಲ್ಲೋಲಕಲ್ಲೋಲಗಳ ಅಪೂರ್ವ ಸಂಶೋಧನೆ ಈ ಕೃತಿ. ಈ ಕಾವ್ಯ ಅಂಥದೇ ಒಂದು ವಿಶಿಷ್ಟ ಚಾರಿತ್ರಿಕ ಅನುಭವವನ್ನು ನೀಡುತ್ತದೆ. ಪಾಶ್ಚಾತ್ಯ ನಾಗರಿಕತೆಯ ಆಗಮನದಿಂದಾಗಿ ಭಾರತದ ಸಂಸ್ಕೃತಿಯಲ್ಲುಂಟಾದ ವಿದ್ಯಾಮಾನಗಳ ಮಾರ್ಮಿಕ ಕಥನವಿದು. ಒಡೆದು ಹೋದ ವ್ಯಕ್ತಿತ್ವಗಳು ಹುಟ್ಟಿದವು. ಚರಿತ್ರೆಯ ಚಲನೆಯೇ ಹೀಗೆ. ನಿರ್ದಯವಾಗಿ ಹಳೆಯದನ್ನು ಕೊಯ್ಯುತ್ತಾ, ಹೊಸದು ಅತ್ಯಂತ ಕೆಟ್ಟದಾಗಿದ್ದರೂ ಅದಕ್ಕೆ ವಿಚಿತ್ರ ಬಗೆಯ ಶಕ್ತಿಯನ್ನು ನೀಡಿ ಮುನ್ನಡೆಯುತ್ತಾ ಹೋಗುತ್ತದೆ. ಇಡೀ ಕೃತಿಯನ್ನು ದಟ್ಟವಾಗಿ ವಿಷಾದ, ಹತಾಶೆ ಆವರಿಸಿದ್ದರೂ ಹೊಸ ಬೆಳಕಿಗೆ ಭರವಸೆ ಸಣ್ಣಗೆ ಮೂಡುತ್ತದೆ. ಜಾನಪದ ಕಥೆಯ ಚೌಕಟ್ಟಿನಲ್ಲಿದ್ದರೂ ಇದರ ಚಾರಿತ್ರಿಕ ಅನುಭವ ತುಂಬ ಮುಖ್ಯವಾದದ್ದು, ಎಲ್ಲ ದೊಡ್ಡ ಕಾವ್ಯದ ಆಶಯವಾದ ಚಾರಿತ್ರಿಕತೆ ಇಲ್ಲಿಯೂ ಇದೆ.

ಕಂಬಾರರ ಕಾವ್ಯದ ಮುಖ್ಯ ವಸ್ತುಗಳಾದ ವ್ಯಕ್ತಿತ್ವದ ಅಧಿಕೃತತೆ (ಐಡೆಂಟಿಟಿ) ಮತ್ತು ಕಾಮ ಎರಡೂ ಈ ಸಂಕಲನದ ಮುಖ್ಯ ವಸ್ತುಗಳು. ಎರಡೂ ಪರಸ್ಪರ ತಳುಕನ್ನು ಹಾಕಿಕೊಂಡಿವೆ. ಜೊತೆಗೆ, ಕಾಮ ಮತ್ತು ದೈವವೂ ಕಂಬಾರರ ಕವನಗಳಲ್ಲಿ ತಳಕು ಹಾಕಿಕೊಂಡಿವೆ. ಕಾಮದ ಮಾಧ್ಯಮದ ಮೂಲಕ ದೈವೀ ಅನುಭವ ಸಾಕ್ಷಾತ್ಕಾರವಾಗುತ್ತದೆ ಎಂಬ ತಾತ್ವಿಕ ನೆಲೆಯಿಂದ ಹೊರಟ "ನೆರಳಿನ ಜೋಡಿ" ಮತ್ತು "ಕುದುರೀ ಸಿದ್ದ" ಕವನಗಳು ಈ ಕೃತಿಯ ಇನ್ನೆರಡು ಅತ್ಯಂತ ಮಹತ್ವದ ಕವನಗಳು, ಆದರೆ ಇವೆರಡರ ಸಂಬಂಧ ತಾರ್ಕಿಕವಾದುದಲ್ಲ. ಒಂದಕ್ಕೆ ಹತ್ತಿದ್ದರೆ ಇನ್ನೊಂದು ಸಲೀಸಾಗಿ ಸಿಗುವಂಥದಲ್ಲ. ಅಲ್ಲಿ ನುಸುಳುವ ದ್ರೋಹ, ನಿಗೂಢತೆ, ಭಯ, ವಿಷಾದ ಎಲ್ಲವೂ ಅತ್ಯಂತ ನಾಟಕೀಯವಾದವುಗಳೇ. ಈ ಎರಡೂ ಕವನಗಳು ಶೋಧಿಸುವುದು ಆ ನೆಲೆಗಳನ್ನೆ. "ನೆರಳಿನ ಜೋಡಿ"ಯ ಕಾಮುಕ (ಸ್ವರತಿ) ಹುಡುಗನಿಗೆ ದೈವ ಸ್ಪರ್ಶಿಸುತ್ತದೆ. ಅರ್ಥವಾಗದೆ ಆತ ಬೆದರಿ ಸಾಯುತ್ತಾನೆ. "ಕುದುರೀ ಸಿದ್ದ"ದಲ್ಲಿ ಕಾಮದಲ್ಲೇ ಇದ್ದು ದೈವಕ್ಕೆ ಮೋಸ ಮಾಡುವ ವ್ಯಕ್ತಿ ದುರಂತವನ್ನು ಅಪ್ಪುತ್ತಾನೆ.

ಕಂಬಾರರ ಕಾವ್ಯ ಶೈಲಿ ನಿರ್ದಿಷ್ಟ ವಸ್ತುವಿನ ಶೋಧನೆಗೆ ತಕ್ಕಂತೆ ರೂಪುಗೊಳ್ಳುವಂಥದು. ಈ ಕಾರಣಕ್ಕಾಗಿಯೇ ಅವರಲ್ಲಿ ಏಕತಾನತೆ ಇಲ್ಲ. ಇಲ್ಲಿರುವ ಎಲ್ಲ ಕವನಗಳೂ ಅವರ ಬಹುಮುಖೀ ಪ್ರತಿಭೆಗೆ ಸಾಕ್ಷಿಗಳು. ದೀರ್ಘ ಕವನಗಳಿಗೆ ಒಳಪ್ರವೇಶ ಮಾಡಲು, ಅರ್ಥದ ಸುಸಂಗತ ಪವಾಡವನ್ನು ತಿಳಿಯಲು ದ್ವಾರಗಳು

ಕಡಿಮೆ ಇವೆ ಎನ್ನಿಸಿದರೂ, ತೀಕ್ಷ್ಣ ಎಚ್ಚರದ, ಏಕಾಗ್ರ ಅಧ್ಯಯನದಿಂದಾಗಿ ಆ ಕವನಗಳ ಒಳಪ್ರವೇಶ ಸಾಧ್ಯವಾಗುತ್ತದೆ. ಓದುಗನ ಶ್ರಮವೇ ಇಲ್ಲವಾಗಿ, ಸಿದ್ಧಸರಕಿನ ಬಂಧವೇ ಈ ಹೊತ್ತು ಹೆಚ್ಚಾಗುತ್ತಿರುವ ಈ ಬಗೆಯ ಬಂಧ ನಿಜಕ್ಕೂ ಸ್ವಾಗತಾರ್ಹವೇ.

ಕ್ರಿಯಾಪರ್ವ : ಹೆಚ್. ಎಸ್. ವೆಂಕಟೇಶಮೂರ್ತಿ

ಒಂದು ಬಗೆಯ ತಿರುವು ಇಲ್ಲಿಯ ಮುಖ್ಯ ರಚನಾ ವಿಧಾನ. ಕವನ ಬೆಳೆಯುತ್ತಾ ಅನಿರೀಕ್ಷಿತ ತಿರುವುಗಳ ಕಡೆಗೆ ಧಾವಿಸುವುದೇ ಇಲ್ಲಿಯ ಶಿಲ್ಪದ ತರ್ಕ. ಗಮನಾರ್ಹ ಸಂಗತಿ ಎಂದರೆ ಇಲ್ಲಿಯ ಕವನಗಳ ಶಿಲ್ಪ ಸಾಂದ್ರವಾದದ್ದಲ್ಲ ಎಂಬುದು. ಆಕಾಶದಲ್ಲಿ ಬೆಳಕಿನ ಚಮತ್ಕಾರ ನಡೆಸಿದಂತೆ. ಅನಿರೀಕ್ಷಿತ ತಿರುವು ಮತ್ತು ಈ ಹಾರುವ ಬೆಳಕಿನ ರೇಖೆಗಳಂಥ ಶಿಲ್ಪಗಳ ನಡುವೆ ಇರುವ ಸೂಕ್ಷ್ಮ ಸಂಬಂಧವನ್ನು ಗಂಭೀರ ಕಾವ್ಯಾಭ್ಯಾಸಿಗಳಿಗೆ ವಿವರಿಸಬೇಕಾಗಿಲ್ಲ. "ಓಡುವ ರೈಲಿನಲ್ಲಿ", "ಜೋತಾಡುವ ವಸ್ತುಗಳು", "ಒಂದೇ ಮಧ್ಯಾಹ್ನ", "ಶುಕ್ಲಪಕ್ಷ" ಮುಂತಾದ ಕವನಗಳ ಶುಭ್ರತೆಗೆ ಇದೇ ಕಾರಣ. ವಾಸ್ತವದ ಸಾಮಾನ್ಯ ಗ್ರಹಿಕೆಯನ್ನು ನಿರಾಕರಿಸಿ, ಅದರ ವಿವರಗಳನ್ನೆ ತಿರುಗಿಸಿ ಆಟವಾಡುತ್ತಾ ಹೋಗುವ ಗುಣ ಈಗಿನ ಕಾವ್ಯ ಸಂದರ್ಭದಲ್ಲಿ ವೆಂಕಟೇಶಮೂರ್ತಿಯವರನ್ನು ಆಕರ್ಷಕ ಕವಿಯನ್ನಾಗಿ ಮಾಡಿದೆ.

ಈ ಸಾಮಾನ್ಯ ಗ್ರಹಿಕೆಯ ನಿರಾಕರಣೆ ಅಂತಿಮವಾಗಿ ಬಹುಮುಖೀ ವ್ಯವಸ್ಥೆಯಾಗಿ ರೂಪುಗೊಳ್ಳದೆ, ಒಂದು ಆಕರ್ಷಕ ಒಳನೋಟಕ್ಕಷ್ಟೆ ನಿಲ್ಲುವುದರಿಂದ ಇವರ ಕವನಗಳ ಶಿಲ್ಪ ಕೂಡಾ ಸಾಂದ್ರತೆಯನ್ನು ಸಾಧಿಸಲಾರದೆ ಹೋಗಿದೆ. ಆದರೆ ಈ ಬಗೆಯ ತಿರುವು ಕೂಡಾ ರುದ್ರ ತಿರುವಿನ ನೆಲೆಯಿಂದ ಮೂಡಿ ಬಂದಾಗ ಅತ್ಯಂತ ಗಾಢ ಕಾವ್ಯಾತ್ಮಕ ಅನುಭವ, ದರ್ಶನ ಹುಟ್ಟಬಲ್ಲುದು. ಆದರೆ ಇಲ್ಲಿ ಅದು ಒಂದು ಬಗೆಯ ಈಸ್ಥೆಟಿಕ್ ಆದ ತಿರುವು ಮಾತ್ರ. "ದುರಂತ" (ಇದರ ತಲೆ ಬರೆಹ ಅಸಮಂಜಸ ಎಂದು ನನಗನ್ನಿಸಿದೆ.) ಕವನವನ್ನು ಈ ಮಾತಿಗೆ ಉದಾಹರಣೆಯನ್ನಾಗಿ ನೋಡಬಹುದು. ಆದ್ದರಿಂದಲೇ, ಇಲ್ಲಿಯ ಕವನಗಳ ಅನುಭವ ಪುಲಕವಾಗಿ ಮಾತ್ರ ಕೊನೆಯಾಗುತ್ತದೆ.

ವೆಂಕಟೇಶಮೂರ್ತಿಯವರ ಕಾವ್ಯ ಬಂಧದ ಈ ಲಲಿತ ತೆಳುತನದ ಹಿಂದೆ ಇರಬಹುದಾದ ಎರಡು ಕಾರಣಗಳು : ನೇತ್ಯಾತ್ಮಕ ಚಿಂತನೆ ಹಾಗೂ ಸಂಘರ್ಷಗಳ ಗೈರು ಹಾಜರಿ. ಕಾವ್ಯದ ಭಾಷೆ ಗೊಡ್ಡಾದ, ಸತ್ವಹೀನ ಸಾಮಾನ್ಯ ಗ್ರಹಿಕೆಯ ಭಾರದಿಂದ ಬಿಡುಗಡೆ ಹೊಂದಿ ಪ್ರತಿ ಲೋಕವನ್ನು ಸೃಷ್ಟಿಸುವುದು ಈ ಎರಡರ ಒತ್ತಾಯದಿಂದಲೇ. ಭಾಷೆ ತನ್ನ ಉಪಭೋಗವಾದೀ ಅಸ್ತಿತ್ವದಿಂದ ಬಿಡುಗಡೆ ಹೊಂದಿ ಹೊಸ ಜಗತ್ತಾಗಿ ಕಾಣುವುದು ಇಂಥ ಪ್ರಯತ್ನಗಳಿಂದಲೇ. ಭ್ರಷ್ಟ ರಾಜಕಾರಣಿಗಳ, ದಿನನಿತ್ಯದ ನೀರಸ ವ್ಯವಹಾರದ, ಸುಳ್ಳು ಆವೇಶದ ಮಾತುಗಾರರ, ಧರ್ಮದ ಗಲೀಜು ಪಾರ್ಸೆಲ್ಲಾಗಿ ಹೋಗುವ ಭಾಷೆ ತನ್ನೆಲ್ಲ ಕೊಳಕನ್ನು ತೊಳೆದು,

ಒಳಗಿನ ಲೋಕಗಳನ್ನು ಸೃಷ್ಟಿಸು ಎಂದು ಕವಿಗೆ ಸವಾಲು ಹಾಕುವುದು ಅಂಥ ನೆಲೆಯಲ್ಲಿಯೇ. ಕನ್ನಡದ ಅತ್ಯುತ್ತಮ ಕಾವ್ಯ ಹುಟ್ಟಿರುವುದು ಈ ನೆಲೆಯಿಂದಲೆ. ಆದರೆ ನೇತ್ಯಾತ್ಮಕ ಚಿಂತನೆ ಮತ್ತು ಸಂಘರ್ಷಗಳು ವೆಂಟೇಶಮೂರ್ತಿಯವರ ಕಾವ್ಯದಲ್ಲಿ ಗೈರುಹಾಜರಿಯಾಗಿರುವ ರೀತಿ ಕಾವ್ಯಬಂಧ ಮತ್ತು ಮಧ್ಯಮವರ್ಗದ ಅನುಭವ ಪರಂಪರೆಗಳ ನಡುವೆ ಇರುವ ಸೂಕ್ಷ್ಮ ಸಂಬಂಧಗಳನ್ನು ಅರ್ಥಮಾಡಿಕೊಳ್ಳಲು ಪ್ರೇರೇಪಿಸುವಂಥದು. ವೆಂಕಟೇಶಮೂರ್ತಿಯವರ ಕವನಗಳು ಮೂಲತಃ ಅಲಂಕರಿಸುವ ರೀತಿಯವು.

"ಕಂಚಿನ ತೇರು", "ಕ್ರಿಯಾಪರ್ವ" ಎಂಬೆರಡು ಮಹತ್ವಾಕಾಂಕ್ಷೀ ಕವನಗಳು ಈ ಕೃತಿಯಲ್ಲಿವೆ. ಈ ಬಗೆಯ ಕವನಗಳು ನನ್ನಂಥವನ ಏಕಾಗ್ರತೆಯನ್ನು ಸೆಳೆಯುವುದು ಕಡಿಮೆ. ಇವುಗಳು ತಮ್ಮ ದೀರ್ಘತೆಯ ಕಾರಣಕ್ಕಾಗಿ ಸಾಂದ್ರತೆಯ ಭ್ರಾಂತಿಯನ್ನು ಹುಟ್ಟಿಸುತ್ತದೆ. ಆದರೆ ನಿಜವಾಗಿಯೂ ಇವು ಹತ್ತಿರವಿರುವುದು ಫೈರಿಟೇಲ್‌ಗಳಿಗೆ. ಇವುಗಳ ಶಿಲ್ಪದರೀತಿ ನಿಷ್ಕ್ರಿಯ ಆಸ್ವಾದನೆಯನ್ನು ಕಥೆ ಕೇಳುವಾಗಿನ ಅವಿಮರ್ಶಾತ್ಮಕ ಆಸ್ವಾದನೆಯನ್ನು ಒಳಗೊಂಡಿದೆ ಎಂಬ ಕಾರಣಕ್ಕೆ ಈ ಎರಡೂ ಕವನಗಳು ನನಗೆ ಪ್ರಿಯವಾದುವುಗಳಲ್ಲ. ಏಕೆಂದರೆ, ಕಾವ್ಯವೂ ಸೇರಿದಂತೆ ಎಲ್ಲ ಸಾಹಿತ್ಯ ಪ್ರಕಾರಗಳ ಅನುಭವದಲ್ಲಿ ಕ್ರಿಯಾಶೀಲತೆಯ ಅಂಶ ಇರಬೇಕೆಂಬ ನಿಲುವು ಈ ಲೇಖಕನದು. ಅಸಾಮಾನ್ಯ ಅನುಭವಗಳನ್ನು ಹೇಳುವ ಕೃತಿಗಳೆಲ್ಲ ಫೇರಿಟೇಲ್‌ಗಳಾಗಬೇಕಾಗಿಲ್ಲ. ಅವುಗಳ ಬಂಧ ನಿರ್ದಿಷ್ಟ ಬೆಳೆವಣಿಗೆಯತ್ತ ಅಂಗುಲ ಅಂಗುಲವಾಗೇ ಚಲಿಸುತ್ತಾ ಓದುಗನ ಅಧ್ಯಯನ ಕ್ರಮವನ್ನು ಕ್ರಿಯಾಶೀಲವನ್ನಾಗಿ ಮಾಡುತ್ತದೆ. ಬೇಂದ್ರೆಯವರ "ಕಲ್ಪವೃಕ್ಷ ವೃಂದಾವನಂಗಳಲ್ಲಿ", "ಜೋಗಿ", ಕಂಬಾರರ "ನೆರಳಿನ ಜೋಡಿ "ಕವನಗಳು ಇದಕ್ಕೆ ಸಾಕ್ಷಿ. ಈ ಫೇರಿಟೇಲ್‌ಗಳ ರೀತಿಯ ಬಂಧದಿಂದಾಗಿಯೇ ಅಂಥ ಮಹತ್ವದ ದರ್ಶನದ ಅನುಭವ ಈ ಎರಡರಲ್ಲಿ ಆಗುವುದಿಲ್ಲ. ಬೆಟ್ಟವನ್ನು ಹತ್ತಿ ನಡೆದಾಗ ಮಾತ್ರ ಬೆಟ್ಟದ ಮುಡಿಯ ಬೆಳಕನ್ನು ಕಾಣುವ ಅಪೂರ್ವ ಅನುಭವ ಸಿಗುವುದು. ಮತ್ತೆ ಇಂಥಲ್ಲಿ ನೇತ್ಯಾತ್ಮಕ ಚಿಂತನೆ ಮತ್ತು ಸಂಘರ್ಷಗಳ ಗೈರುಹಾಜರಿ ಕಾಡುತ್ತದೆ.

ವೆಂಕಟೇಶಮೂರ್ತಿ ಈಗ ಬರೆಯುತ್ತಿರುವ ತರುಣ ಕವಿಗಳಲ್ಲಿ ಅತ್ಯಂತ ಗಮನಾರ್ಹ ಕವಿ ಎಂಬುದರ ಬಗ್ಗೆ ಅನುಮಾನವೇ ಇಲ್ಲ. ಆದರೆ ಕನ್ನಡ ಕಾವ್ಯ ಪರಂಪರೆ ಮತ್ತು ಒಟ್ಟಾರೆಯಾಗಿ ಚಾರಿತ್ರಿಕ ಸನ್ನಿವೇಶಗಳ ಹಿನ್ನೆಲೆಯಲ್ಲಿ ಅವರ ಕಾವ್ಯ ಬಂಧವನ್ನು ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. "ಸಿಂದಾಬಾದನ ಆತ್ಮಕಥೆ"ಯಿಂದ ಪ್ರಾರಂಭವಾದ ಒಂದು ನಿರ್ದಿಷ್ಟ ಘಟ್ಟವನ್ನು ಕುರಿತು ೀಲಿನ ಮಾತುಗಳನುವ್ನೆ ಹೇಳಲಾಗಿದೆ.

ಇನ್ನಾದರೂ ಅರ್ಥವಾಗೋಣ : ಶಿವಾನಂದ ಬೇಕಲ್

ದಕ್ಷಿಣ ಕನ್ನಡದ ಕಡೆಂಗೋಡ್ಲು ಕಾವ್ಯ ಪ್ರಶಸ್ತಿಯನ್ನು ಈ ಕೃತಿ ಪಡೆದಿದೆ. ಈ ಕೃತಿಯಲ್ಲಿ ಸ್ವಂತಿಕೆಗಿಂತ ಕನ್ನಡದ ಉಳಿದ ಕವಿಗಳ ಪ್ರಭಾವವೇ ಎದ್ದು ಕಾಣು

ತ್ತದೆ. ಕಾವ್ಯವನ್ನು ಗಂಭೀರವಾಗಿ ತೆಗೆದುಕೊಂಡ ಕವಿಗಳಿಗೆ ಮೊದಲ ಹಂತದಲ್ಲಿ ಹೀಗಾಗುವುದು ಸಹಜ ಎಂದುಕೊಂಡರೂ ಒಂದು ಬಗೆಯ ಅಸಮಾಧಾನ ಉಳಿದೇ ಉಳಿಯುತ್ತದೆ.

ಆಧುನಿಕ ಕನ್ನಡ ಕಾವ್ಯ ಪರಂಪರೆಯ ಬಗ್ಗೆ ಸಾಕಷ್ಟು ಶ್ರದ್ಧೆ ಇರುವ ಸೂಚನೆ ಈ ಕೃತಿಯಲ್ಲಿ ಸಿಗುತ್ತದೆ. ಹೀಗಾಗಿ, ಬೌದ್ಧಿಕ ಪ್ರಬುದ್ಧತೆ ಈ ಕೃತಿಯ ಮೊದಲ ಲಕ್ಷಣ. ಅನುಭವಗಳನ್ನು ಆದಷ್ಟು ಖಚಿತವಾಗಿ, ನಿರ್ದಿಷ್ಟವಾಗಿ ಹೇಳುವ ಪ್ರಯತ್ನ ವನ್ನೂ ಶಿವಾನಂದರು ಮಾಡುತ್ತಾರೆ. "ಇಲ್ಲಿ ಅಂಥದ್ದೇನು ನಡೆದಿದೆ ಹೇಳಿ", "ನೆನಪು", "ನಮನವಿದೊ" ಕವನಗಳು ಈ ದೃಷ್ಟಿಯಿಂದ ಯಶಸ್ವೀ ರಚನೆಗಳು. ಇನ್ನುಳಿದ ಅನೇಕ ಕವನಗಳಲ್ಲಿ ಅಡಿಗ, ಕಣವಿ, ಕಂಬಾರರ ನೆನಪಾಗುತ್ತದೆ. ಇಡೀ ಕೃತಿಯಲ್ಲಿ "ನಮ್ಮೂರ ಕೊಡಗಳು" ಎಂಬ ತೀರಾ ವೈಯಕ್ತಿಕ ಅರ್ಥಲೋಕದಿಂದ ಬಂದು, ಅನುಭವ ಸಾಧಾರಣೀಕರಣವಾಗುವಲ್ಲಿ ವಿಫಲವಾಗಿದೆ.

ಹೆಚ್ಚು ವೈವಿಧ್ಯಮಯ ಆಕೃತಿಗಳ ಕಡೆ ಕವಿ ಗಮನ ಹರಿಸಬೇಕಾದ ಅಗತ್ಯ ಎದ್ದು ಕಾಣುತ್ತದೆ.

ನವನೀತ : ವಾಣಿ

ಆಧುನಿಕ ವಚನ ಸಾಹಿತಿಗಳ ಸಾಲಿಗೆ ವಾಣಿಯವರೂ ಈಗ ಸೇರಿದ್ದಾರೆ. ಅವರ ನಾಮಾಂಕಿತ ವಾಗೀಶ್ವರಿ. ಎಷ್ಟೇ ಸಹಾನುಭೂತಿಯಿಂದ ಇಲ್ಲಿಯ ವಚನ ಗಳನ್ನು ನೋಡಿದರೂ, ನೂರಕ್ಕೆ ತೊಂಬತ್ತೆಂಟು ಪಾಸಾಗದೆ ಹೋಗುತ್ತವೆ. ಇಂಥ ಕಡೆಗಳಲ್ಲಿ ಮಾತನ್ನು ಜ್ಯೋತಿರ್ಲಿಂಗದಂತೆ, ಸ್ಫಟಿಕದ ಶಲಾಕೆಯಂತೆ ಬಳಸ ಬೇಕು. ಆದರೆ, ಇಲ್ಲಿ ಭಾಷೆಗಿರುವ ಸಾಧ್ಯತೆಯ ಬಗ್ಗೆ ಕವಯಿತ್ರಿಗೆ ಗಮನವೇ ಇಲ್ಲ.

ಕೆಲವು ಕಡೆಗೆ ಸೂಕ್ಷ್ಮವಾದ ಒಳನೋಟಗಳನ್ನು, ಚುರುಕು ದೃಷ್ಟಿಯನ್ನು ಕಾಣಲು ಸಾಧ್ಯ. ಅವೇ ನೂರಕ್ಕೇ ಎರಡು ಯಶಸ್ವೀ ರಚನೆಗಳು. ಆದರೆ ಬಹು ಪಾಲು ಉಪದೇಶಾತ್ಮಕವಾದ ವಚನಗಳೇ ಹೆಚ್ಚು. ಕಾದಂಬರಿ ಪ್ರಕಾರವೇ ಹೆಚ್ಚು ಸೂಕ್ತವೇನೋ ವಾಣಿಯವರಿಗೆ.

ಸವಾಲು : ವೇಣುಗೋಪಾಲ ಸೊರಬ

ಕನ್ನಡ ಕಾವ್ಯಲೋಕಕ್ಕೆ ಪರಿಚಿತ ಹೆಸರಾದ ವೇಣುಗೋಪಾಲ ಸೊರಬರ ಈ ಕೃತಿಯಲ್ಲಿ ದೀರ್ಘಕವನಗಳೇ ಹೆಚ್ಚು. ಆದರೆ, ಗಾತ್ರ ಮತ್ತು ಗುಣ ಎರಡೂ ಒಟ್ಟಿಗೆ ಹೋಗಲೇಬೇಕು ಎಂಬ ನಿಯಮವಿಲ್ಲವಾದ್ದರಿಂದ, ಬಹುಪಾಲು ಕವನಗಳು ತಮ್ಮ ಭಾರದಿಂದ ತಾವೇ ಕುಸಿಯುತ್ತವೆ.

ರಾಗಗಳ ತೀವ್ರತೆಯ ಕೊರತೆಯ ಕಾರಣಕ್ಕಾಗಿ ಇಲ್ಲಿಯ ಮಹತ್ವಾಕಾಂಕ್ಷೀ ಕವನಗಳು ಕೂಡಾ ದುರ್ಬಲವಾಗುತ್ತಾ ಹೋಗಿವೆ. "ಇತಿವೃತ್ತ", "ಗೋಳ", "ಪಂಚಾಯತನ" ಕವನಗಳು ವಿಫಲವಾಗಿರುವುದು ಮೂಲತಃ ಇದೇ ಕಾರಣಕ್ಕಾಗಿ. ಜೊತೆಗೆ, ಈ ಕವನಗಳ ಅಧ್ಯಯನದಿಂದ ನಮಗೆ ತಿಳಿದು ಬರುವ ಇನ್ನೊಂದು ಸಂಗತಿ ಸೊರಬರ ಕಾವ್ಯ ರಚನಾ ಕ್ರಮಕ್ಕೆ ಸಂಬಂಧಿಸಿದ್ದು. ಅತಿಯಾದ ಆತ್ಮರತಿ, ಹಳಹಳಿಕೆ ಹಬ್ಬಿ ಭಾವಗಳು ಸೂಕ್ತ ಪ್ರತಿಮೆ, ರೂಪಕಗಳನ್ನು ಹುಡುಕಿಕೊಳ್ಳುವ ಕೆಲಸವೇ ಅಸಾಧ್ಯವಾಗಿಬಿಡುತ್ತದೆ. ಜೊತೆಗೆ ಶಬ್ದ ಸಂಗೀತದ ಕಡೆಗೆ ಸೊರಬರು ಗಮನವೇ ಕೊಡುವುದಿಲ್ಲ.

"ಚರಿತ್ರೆ ಮತ್ತು ಪ್ರೇಮ", "ಮಗು" ಈ ಸಂಕಲನದಲ್ಲಿ ಇದ್ದುದರಲ್ಲಿ ಒಳ್ಳೆಯ ರಚನೆಗಳು. ಇಂಥ ಕಡೆಗಳಲ್ಲಿ ಸೊರಬರ ಪ್ರಬುದ್ಧತೆ ಎದ್ದು ಕಾಣುತ್ತದೆ. ಸರಳ ಸಾಮಾಜಿಕ ಆಶಯಗಳನ್ನು ಹೊತ್ತಿರುವ ಕೆಲವು ಕವನಗಳು ತುಂಬ ಸೀಮಿತವಾದ ಯಶಸ್ಸನ್ನು ಸಾಧಿಸುತ್ತವೆ.

"ಹೊಸದೇನನ್ನೊ ಅರ್ಥೈಸುವ ನಿಟ್ಟಿನಲ್ಲಿದ್ದೇನೆ" ಎಂದು ಕವಿ ಹೇಳಿಕೊಂಡರೂ ಅದಕ್ಕೆ ಅಂಥ ಪ್ರಬಲ ಉದಾಹರಣೆಗಳು ಇಲ್ಲಿ ಸಿಗುವದಿಲ್ಲ ಎಂಬುದನ್ನು ವಿಷಾದದಿಂದ ಹೇಳಬೇಕಾಗಿದೆ.

ಪಲ್ಲವಿ : ಕಮಲಾ ಹೆಮ್ಮಿಗೆ

ಈ ವರ್ಷ ಬಂದಿರುವ ಉತ್ತಮ ಸಂಕಲನಗಳಲ್ಲೊಂದು, ಈ ಕಾರಣಕ್ಕಾಗಿಯೇ ಇದರ ಸೂಕ್ಷ್ಮ ಅಧ್ಯಯನ ನಮ್ಮ ಸಮಕಾಲೀನ ಕಾವ್ಯ ಪ್ರಯೋಗದ ಮಿತಿಗಳನ್ನು ಕೂಡಾ ತಿಳಿಸುತ್ತದೆ.

ಇಡೀ ಕೃತಿಯನ್ನು ರೂಪಿಸಿರುವುದು ಒಂದು ಬಗೆಯ ಉಲ್ಲಂಘನೆಯತ್ತ ತುಡಿತ. Ecstasy ಯನ್ನು ಅನುಭವಿಸುವ ಉತ್ಕಟ ಆಕಾಂಕ್ಷೆ. ಈ ಉಲ್ಲಂಘನೆ ಮತ್ತು Ecstasyಗಳ ನಡುವೆಯೇ ಎಲ್ಲ ಕವನಗಳು ಸೃಷ್ಟಿಯಾಗಿವೆ. ಆದರೆ ಈ ಎರಡೂ ಗುಣಗಳು ಅತ್ಯಂತ ದಟ್ಟವಾಗಿ, ವ್ಯಾಪಕವಾಗಿ ಕವನದ ಬಂಧದಲ್ಲಿ ಹಬ್ಬಿದೆ ಎಂದಲ್ಲ. ಆ ರೀತಿಯ ಬಂಧ ಹೆಗ್ಗಾಡಿದ್ದಂತೆ. ಬಂಧದ ಸಾಂದ್ರತೆ ವಸ್ತುವಿನೆಲ್ಲಾ ತೀವ್ರತೆಯನ್ನು ಒಳಗೊಳ್ಳಲು ಯತ್ನಿಸುತ್ತದೆ. ಆದರೆ, ಇಲ್ಲಿಯ ಬಂಧ ಆ ಉಲ್ಲಂಘನೆಯತ್ತ ಒಂದು ಮಾರ್ದವ ತುಡಿತದ ಅಭಿವ್ಯಕ್ತಿ ; ಆ ಭೃಂಗದ ಬೆನ್ನೇರಿ ಕೊಂಚ ದೂರ ಹೋಗುವ ಪ್ರಯತ್ನ.

ಈ ಕಾರಣಕ್ಕಾಗಿಯೇ ಈ ಕವನಗಳ ಬಂಧ ಮಧ್ಯಮವರ್ಗದ ಅನುಭವಗಳ ಪ್ರತಿರೂಪದ ಹಾಗೆ ತೆಳು. ಮೂಲತಃ ಜಾಣ ನವಿರುತನದಲ್ಲೇ ಕೊನೆಗೊಂಡ ಹಾಗೆ. ಈ ಉಲ್ಲಂಘನೆ ಮತ್ತು ಉನ್ಮತ್ತತೆಯ ವಸ್ತುಗಳು ಇಲ್ಲಿ ನಿರೀಕ್ಷೆಯ

ಹಂತದಲ್ಲಿ, ಪವಾಡವೊಂದರ ಆಗುವಿಕೆಯ ಕಲ್ಪನೆಯಲ್ಲಿ ಕೊನೆಗೊಂಡಿದೆ. ಈ ಕಾರಣ ದಿಂದಾಗಿಯೇ ಇಲ್ಲಿಯ ಕವನಗಳು ಒಂದು ಸುಂದರ ಒಳನೋಟ, ಚುರುಕಾದ ದರ್ಶನ ಇಷ್ಟಕ್ಕೆಯೇ ನಿಂತು ಹೋಗುತ್ತವೆ. ಒಂದು ಸಣ್ಣ ಕಲ್ಪನೆಯ ವಿಲಾಸ "ಮರುಭೂಮಿ ಹಾಡಿತು", "ನಿರೀಕ್ಷೆ" "ಕೊರಗು", "ಒಂದು ಅನುಭವ" ಈ ಕವನಗಳನ್ನು ಮೇಲೆ ಹೇಳಿದ ಮಾತುಗಳ ಹಿನ್ನಲೆಯಲ್ಲೇ ನೋಡಬೇಕು.

ಈ ಬಂಧದ ಸೀಮಿತತೆ, ತೆಳುತನವೇ ನಮ್ಮ ಸಮಕಾಲೀನ ಕಾವ್ಯ ಪ್ರಯೋಗದ ಮಿತಿಗಳನ್ನು ಕೂಡಾ ತಿಳಿಸುತ್ತದೆ. ಈ ಗುಣಗಳನ್ನೆ ವಿಮರ್ಶೆ ತನ್ನ ಉದಾರ ಲಹರಿಯಲ್ಲಿದ್ದಾಗ ಸಂಯಮ ಎಂದೂ ಹೇಳುತ್ತದೆ. ಈ ಮಟ್ಟಿಗೆ ವೆಂಕಟೇಶ ಮೂರ್ತಿ ಮತ್ತು ಹೆಮ್ಮಿಗೆಯವರ ಕಾವ್ಯಕ್ಕಿರುವ ಸಾಮ್ಯ ಕುತೂಹಲಕಾರಿ. ವೆಂಕಟೇಶ ಮೂರ್ತಿಯವರ ದೀರ್ಘ ಕವನಗಳನ್ನು ಬಿಟ್ಟರೆ ಉಳಿದ ಚಿಕ್ಕ ಚೊಕ್ಕ ಪದ್ಯಗಳ ಜೊತೆಗೆ ಇವುಗಳನ್ನು ಹೋಲಿಸಬಹುದು. ಈ ಚರ್ಚೆಯಲ್ಲಿ ನಾನು ಮುಖ್ಯವಾಗಿ ಹೇಳಬೇಕೆಂದಿದ್ದುದು ಇಷ್ಟು ; ಈ ಕವನಗಳ ಬಂಧ ನಮ್ಮ ಮಧ್ಯಮವರ್ಗದ ತೆಳು ಅನುಭವ ಲೋಕದ ಸೃಷ್ಟಿ. ಇವು ಇದ್ದುದರಲ್ಲಿ ಕೊಂಚ ಸ್ವಾರಸ್ಯಕರವಾಗಿ ಕಾಣುವುದಕ್ಕೆ ಕಾರಣ ಇವು ಮೇಲುನೋಟಕ್ಕೆ ಪಡೆಯುವ non-conformist ರೂಪಗಳು. ಆದರೆ ಅದು ನಿಜವಾಗಿಯೂ ಅತ್ಯಂತ ಸಾಂದ್ರವಾಗಬೇಕಾದರೆ, ಮಧ್ಯಮವರ್ಗದ ಬೋರ್‌ಡಂನಿಂದ ಕಾವ್ಯವನ್ನು ಮೇಲೆತ್ತಬೇಕಾದರೆ, ಬಹುಮುಖೀ ತಾತ್ವಿಕ ತೀವ್ರತೆ ಕವಿಗಿರಬೇಕು. ಆದರೆ, ಅದು ಹೆಮ್ಮಿಗೆಯವರಲ್ಲಿ ಹಾಗಿಲ್ಲ. ಹೀಗಾ ದಾಗ ಕಾವ್ಯದ ಪ್ರತಿಮಾ ಶರೀರ ಕೂಡಾ ವ್ಯಕ್ತಿ ವಿಶಿಷ್ಟವಾದದ್ದು, ತೀವ್ರತೆಯುಳ್ಳದ್ದೂ ಆಗುತ್ತದೆ. ಆದರೆ, ಕಮಲಾ ಅವರಲ್ಲಿ ಕವನಗಳ ಪ್ರತಿಮಾ ವಾತಾವರಣ ಕೂಡಾ ತತ್‌ಕ್ಷಣಕ್ಕೆ ಹೊಳೆವ atmospheric ಚಿತ್ರಗಳು. (ಸೂರ್ಯ, ಬೆಂಕಿ, ಹಿಮ, ರಾತ್ರಿ, ಆಕಾಶ, ಕಾಡು ಇತ್ಯಾದಿ ಮೂಲವಾದ ಬೇರೆ ಬೇರೆ ಸರಳ ರೂಪಗಳು.) ಇಂಥ ಪ್ರತಿಮಾ ನಿರ್ಮಾಣದಲ್ಲಿ ಬೌದ್ಧಿಕತೆಯ ಅಂಶ ತೀರಾ ತೀರಾ ಕಡಿಮೆ.

ಈ ಕಾರಣಕ್ಕಾಗಿಯೇ ಇಂಥ ಕೃತಿಗಳು ಚುರುಕು ಕವನಗಳಾಗಿ ಮಾತ್ರ ನಿಲ್ಲುತ್ತವೆ.

ಸೂರ್ಯ ಇವನೊಬ್ಬನೇ : ಶಾ. ಬಾಲುರಾವ್

ಈ ಹಿಂದೆಯೇ ಗುರುತಿಸಿದ ಹಾಗೆ ಸಾಂದ್ರ ಹುಡುಕಾಟದ, ದೀರ್ಘ ಏಕಾ ಗ್ರತೆಯ ಕಾವ್ಯಸೃಷ್ಟಿ ನಮ್ಮ ಮಧ್ಯಮವರ್ಗಕ್ಕೆ ಅಸಾಧ್ಯವಾಗಿದೆ. ಹೊಸ ಬಗೆಯ ಒಂದು ಸಣ್ಣ ನೋಟವನ್ನು ಉತ್ಸಾಹದಿಂದ ಸ್ವಾಗತಿಸುವ ಕಾಲ ಬಂದಿದೆ. ಈ ಕೃತಿಯನ್ನು ನೋಡಬೇಕಾದದ್ದು ಈ ಹಿನ್ನಲೆಯಲ್ಲಿಯೇ. ಸ್ವಾರಸ್ಯಕರ ನಲವತ್ತೆಂಟು ಕಲ್ಪನೆಗಳ ಸಂಕಲನ ಈ ಕೃತಿ. ಇದರ ನಾಯಕ ಸೂರ್ಯ.

ಇಲ್ಲಿಯ ಕಲ್ಪನೆಗಿರುವ ಭಾವನಾ ಬಹುಮುಖತೆ ಕುತೂಹಲಕಾರಿಯಾದದ್ದು. ಒಮ್ಮೆ ಆರಾಧನೆಯ ತೀವ್ರತೆ, ಒಮ್ಮೆ ತುಂಟನೊಬ್ಬನ ಹಾಸ್ಯಪ್ರಜ್ಞೆ, ಒಮ್ಮೆ ಪ್ರತಿಭಾವಂತನೊಬ್ಬನ ಕ್ಯಾಮರಾಕಣ್ಣು-ಹೀಗೆ ಬೇರೆ ಬೇರೆ ನೆಲೆಗಳಲ್ಲಿ ಸೂರ್ಯನನ್ನು ಕಾಣಲಾಗಿದೆ. ಆದರೆ ಎಲ್ಲ ಕಡೆಗಳಲ್ಲೂ ಈ ನೋಟಗಳ ಬೇರು ಇರುವುದು ಹಳ್ಳಿಯಲ್ಲಿ. ಬದುಕಿನ ವಿವಿಧ ಪ್ರತಿಮೆಗಳು ಸೂರ್ಯನ ಮೂಲಕ ಪ್ರತೀತವಾಗುತ್ತದೆ. ಈ ದೃಷ್ಟಿಯಿಂದ, 6, 10, 11, 18, 27 ಕಲ್ಪನೆಗಳು ಅತ್ಯಂತ ಸೊಗಸಾದುವುಗಳು. ಒಂದು ಜೀವನ ಕ್ರಮದ ಬಗ್ಗೆ ನೊಸ್ಟಾಲ್ಜಿಯ ನಿಜಕ್ಕೂ ಗಾಢವಾಗುತ್ತದೆ ಇವುಗಳಿಂದ.

ಸ್ಪಟಿಕದ ಶಲಾಕೆಯಂತಹ ಅಭಿವ್ಯಕ್ತಿ ಕ್ರಮ ಅನೇಕ ಕಡೆ ಐಂದ್ರಿಕ ಅನುಭವಗಳನ್ನು ಮೀರಿ ರಿಲಿಜಿಯನ್ ಸೂಚನೆಗಳನ್ನು ಸಣ್ಣಗೆ ನೀಡುತ್ತದೆ. ಅಥವಾ ಮೊದಲ ಕಲ್ಪನೆಯಲ್ಲೇ ದನಿ ಇಂಥ ವಾತಾವರಣವನ್ನು ಸೃಷ್ಟಿಸುತ್ತದೆ. ಆದರೆ, ಒಟ್ಟಾರೆಯಾಗಿ ಇಲ್ಲಿಯ ಎಲ್ಲ ಕಲ್ಪನೆಗಳೂ ಮೋಹಕವಾದುವುಗಳೇ. ಕೆಲವಂತೂ ಅನೇಕ ಕಾಲ ಮನಸ್ಸಿನಲ್ಲಿ ಉಳಿಯುವಂಥವು. ಈ ಮಟ್ಟಿಗೆ ಇದು ನಿಜವಾಗಿಯೂ ಸಾರ್ಥಕ ರಚನೆ.

ತುಂಬ ಸೊಗಸಾದ ಮುದ್ರಣ ಮತ್ತು ಚಿತ್ರಗಳು ಈ ಪುಸ್ತಕದ ಮೌಲ್ಯವನ್ನು ಹೆಚ್ಚಿಸಿವೆ.

## ಆತ್ಮಭಾರತ : ಅರವಿಂದ ನಾಡಕರ್ಣಿ

"ನಗರಾಯಣ"ಕ್ಕಿಂತ ಹೆಚ್ಚು ಖಚಿತವಾದ ಬೆಳವಣಿಗೆಯನ್ನು ಈ ಕೃತಿಯಲ್ಲಿ ಕಾಣುತ್ತೇವೆ. ಎಲ್ಲಕ್ಕಿಂತ ಮುಖ್ಯವಾಗಿ, ಕಾವ್ಯಬಂಧದ ಮಟ್ಟಿಗೆ ಹೆಚ್ಚು ಪರಿಪಕ್ವವಾದ ಪ್ರಯೋಗಗಳನ್ನು ಈ ಕೃತಿಯಲ್ಲಿ ಕಾಣಬಹುದು. ಹಿಂದಿನ ವರ್ಷಗಳ "ಸಾಹಿತ್ಯ ವಾರ್ಷಿಕ"ಗಳಲ್ಲಿ ಇವರ ಕವನಗಳಲ್ಲಿ ಕೆಲವೊಮ್ಮೆ ಅತಿಯಾಗಿ ಬೆಳೆವ ಮಾತುಗಾರಿಕೆಯನ್ನು ಈ ಲೇಖಕ ವಿಮರ್ಶಿಸಿದ್ದುಂಟು. ಆದರೆ ಈ ಸಂಕಲನ ಒಟ್ಟಾರೆಯಾಗಿ ಆ ಅಪಾಯದಿಂದ ಪಾರಾಗಿದೆ. "ದಲಿತ ಶೂದ್ರ ಗದ್ದಲದಲ್ಲಿ ನವ್ಯದ ಸಾರಂಗಿ" ಬಾರಿಸುತ್ತಿರುವ ಶ್ರೀಯುತರು ಹೆಚ್ಚು ನಿರ್ದಿಷ್ಟವಾದ ರಾಗಗಳನ್ನು ಹಾಡತೊಡಗಿದ್ದಾರೆ.

ಈ ಕವನ ಸಂಕಲನದಲ್ಲಿ ಅತ್ಯಂತ ಪ್ರಖರವಾಗಿ ಪ್ರಕಟವಾಗುವ ದ್ವಂದ್ವ ಎಂದರೆ ಹಳ್ಳಿ ಮತ್ತು ನಗರಗಳದು. ನೊಸ್ಟಾಲ್ಜಿಕ್ ಆಗಿ ಹಳ್ಳಿಯ ನೆನಪುಗಳ ಕಡೆಗೇ ಇಲ್ಲಿಯ ಮನಸ್ಸು ಓಡುವುದರಿಂದಲೇ ಪ್ರಜ್ಞೆಯಲ್ಲಿ ನಗರ ಪೂರ್ಣವಾಗಿ ಕರಗಿಲ್ಲ. ಹಾಗೆ ನಗರ ಪ್ರಜ್ಞೆಯ ಒಂದು ಭಾಗವಾಗಿ ಬಿಟ್ಟಾಗ ವರ್ಣನೆಯ ರೂಪದಲ್ಲಿ ಅದನ್ನು ಮುಖಾಮುಖಿಯಾಗುವುದು ಅಸಾಧ್ಯ ಎಂಬುದನ್ನು ವಾಲ್ಟರ್ ಬೆಂಜಮಿನ್ ಬೋದಿಲೇರನ ಕಾವ್ಯವನ್ನು ಕುರಿತು ವಿಶ್ಲೇಷಿಸುವಾಗ ತೋರಿಸಿದ್ದಾನೆ.

ಅಲ್ಲಿ ಕವನದ ಒಟ್ಟು ಅನುಭವದಿಂದಾಗಿ ನಗರ ಆವಾಹನೆಯಾಗುತ್ತದೆ. ಇಲ್ಲ ದಂತಿದ್ದೂ ಅನುಭಾವಿಗೆ ಅರಿವಿಗೆ ದಕ್ಕುವ ದೈವದ ಹಾಗೆ ಅದು. ಆದರೆ ಇಲ್ಲಿ ಬರುವ ನಗರ ಮೂಲತಃ ಹಳ್ಳಿಯ ಪ್ರಜ್ಞೆಯೊಂದು ನಗರವನ್ನು ಕಂಡಾಗ, ಅಲ್ಲೇ ಬದುಕಿ ಹಳ್ಳಿಯ ಕಡೆಗೆ ಮನಸ್ಸು ತಿರುಗಿದಾಗ ಉಂಟಾಗುವ "ಶಾಕ್"ನ ತುಣುಕು ಗಳನ್ನು ಈ ಕೃತಿಯಲ್ಲಿ ಕಾಣುತ್ತೇವೆ. ಹಳ್ಳಿ ತನ್ನ ಹಸ್ತಗಳನ್ನು ಚಾಚಿ ಬೊಂಬಾಯಿ ಯನ್ನು ಹಿಡಿದುಕೊಳ್ಳಲೆತ್ನಿಸಿದೆ.

ಅರವಿಂದ ನಾಡಕರ್ಣಿಯವರ ಈ ವಸ್ತುವಿನ ಅತ್ಯಂತ ತೀವ್ರ ಶೋಧನೆಗೆ "ನವ್ಯದ ಸಾರಂಗಿ" ತಕ್ಕದಲ್ಲವೇನೊ ಎಂಬ ಅನುಮಾನ ಈ ಲೇಖಕನಿಗಿದೆ. ಛಿದ್ರೀ ಕರಣವಾಗಿ ತೇಲಿಹೋಗುವ ನಗರದ ಜಗತ್ತನ್ನು, ಅದನ್ನು ಮೀರಿ ಒಂದು ಬಗೆಯ ಐಕ್ಯತೆಯನ್ನು ಪಡೆಯಲು ಸರ್ರಿಯಲಿಸಂ ಮಾರ್ಗ ಅತ್ಯಂತ ಪರಿಣಾಮಕಾರಿಯಾದದ್ದು. ಬೋದಿರೇರ್, ಮಾಲಾರ್ಮರ ಕಾವ್ಯ ಕನ್ನಡ ನವ್ಯದ ತಾರ್ಕಿಕ ಬೆಳವಣಿಗೆಯನ್ನು ವಾದವನ್ನು, ತನ್ನ ಕೇಂದ್ರ ವಿಕಾಸ ಕ್ರಮವಾಗಿಟ್ಟುಕೊಂಡೇ ಇಲ್ಲ. ಈ ದೃಷ್ಟಿಯಿಂದ ಹೇಳುವುದಾದರೆ, ಅರವಿಂದ ನಾಡಕರ್ಣಿಯವರ ವಸ್ತು ಮತ್ತು ಅಭಿವ್ಯಕ್ತಿ ವಿಧಾನಗಳ ನಡುವೆ ತೊಡಕಿದ್ದು, ಅದು ಆಳದಲ್ಲಿ ಕವಿಯ ಕಾವ್ಯಶಿಲ್ಪದ ಹುಡುಕಾಟವನ್ನು ನಿಯಂತ್ರಿಸಿದೆ.

ಈ ನಡುವೆಯೂ ಈ ಕೃತಿಯ ಯಶಸ್ಸಿರುವುದು "ಸೌಧ", "ಇಲ್ಲೇ ಸರಿ", "ವಿರಹ" ಕವನಗಳಲ್ಲಿ. ಇಂಥ ಕಡೆಗೆ ಅರವಿಂದ ನಾಡಕರ್ಣಿಯವರ ಕಾವ್ಯದ ಅತ್ಯುತ್ತಮ ಪ್ರಯತ್ನವಿದೆ. ಅದರಲ್ಲಿಯೂ, "ಸೌಧ" ಮತ್ತು "ಇಲ್ಲೇ ಸರಿ" ಕವನಗಳಲ್ಲಿ ವಿಷಾದವನ್ನು ಒಮ್ಮೆಗೆ ಧುಮ್ಮೆಂದು ಹೊತ್ತು ಹಾಕದೆ, ನಿಧಾನಕ್ಕೆ ಅದನ್ನು ಹರಡುತ್ತಾ ಹೋಗುವ, ಆ ಮೂಲಕ ಅತಿ ಭಾವುಕತೆಯನ್ನು ನಿಯಂತ್ರಿಸುವ ಕ್ರಮ ಪರಿಣಾಮಕಾರಿಯಾಗಿದೆ.

ಬೀಸಿ ಬಂದ ಗಾಳಿ : ರಾಘವ

ಎಂ. ವಿ. ಸೀತಾರಾಮಯ್ಯನವರ ಈ ಸಂಕಲನದಲ್ಲಿ 57 ಕವನಗಳಿವೆ. ನವೋದಯ ಕಾವ್ಯ ಮಾರ್ಗದಲ್ಲಿ ಪಳಗಿರುವ ಶ್ರೀಯುತರು ಆ ನಂತರದ ಅಭಿವ್ಯಕ್ತಿ ಕ್ರಮಕ್ಕೂ ಪ್ರತಿಕ್ರಿಯಿಸಿರುವ ಸೂಚನೆಗಳು ಈ ಕವನದಲ್ಲಿ ಸಾಕಷ್ಟಿವೆ.

ಭಾಷೆಯ ಲಲಿತ ಮುಖದ ಬಳಕೆಯೇ ಹೆಚ್ಚು ರಾಘವರಲ್ಲಿ. ಇಲ್ಲಿಯ ಬಹು ಪಾಲು ಕವನಗಳಲ್ಲಿ ಭಾವಗೀತಾತ್ಮಕತೆಯ ಸ್ಪರ್ಶ ಇರುವುದು ಇದೇ ಕಾರಣಕ್ಕೆ. ಮೂಲತಃ ಇದು ಜೀವನ ದರ್ಶನಕ್ಕೆ ಸಂಬಂಧಿಸಿದ ಅಂಶವೂ ಹೌದು. ಇಡೀ ಸಂಕಲನದ ಮುಖ್ಯ ಅನುಭವ ಎಂದರೆ ಜೀವನದ ಸಾತ್ವಿಕ ದರ್ಶನ. ಜೀವನದಲ್ಲಿ

ಸಾಂಪ್ರದಾಯಿಕವಾಗಿ ಪವಿತ್ರವಾದ ಮುಖ್ಯವಾದ ಸಂಗತಿಗಳ ಆರಾಧನೆ. ಪ್ರಕೃತಿ, ನಾಡ ಅಭಿಮಾನ, ದೈವೀ ಅನುಭವ–ಈ ವಸ್ತುಗಳ ಚೌಕಟ್ಟಿನಲ್ಲಿ ಮೇಲಿನ ದರ್ಶನ ಅಭಿವ್ಯಕ್ತವಾಗಿದೆ. ಜೀವನದಲ್ಲಿ ಬಂದ ಒಂದು ಸಣ್ಣ ಸಂತೋಷ, ಇದ್ದಕ್ಕಿದ್ದ ಹಾಗೆ ಆಸೆಯೊಂದು ಸಂಕೇತವಾಗಿ ಪರಿಣಮಿಸುವ ಅನುಭವ–ಇವೆಲ್ಲವನ್ನು ರಾಘವರು ತಮ್ಮ ಕವನಗಳಲ್ಲಿ ಹೇಳಿದ್ದಾರೆ.

"ಪಾರಿಜಾತ", "ಬಯಲ ಭಾಮಿನಿ", "ಸೊನ್ನೆ", "ಗಜೇಂದ್ರ", ಮೋಕ್ಷ" "ಪು.ತಿ.ನ. ಗೆ" ನನ್ನ ಮಟ್ಟಿಗೆ ಇಡೀ ಸಂಕಲನದ ಅತ್ಯುತ್ತಮ ಕವನಗಳು. ಎಂ.ವಿ. ಸೀತಾರಾಮಯ್ಯನವರ ಕಾವ್ಯಶಕ್ತಿಯ ಪ್ರಾತಿನಿಧಿಕ ರಚನೆಗಳು ಎಲ್ಲ ಕಡೆಗೂ ಆಗುವಂತೆ ಸೂಕ್ಷ್ಮ ಅಧ್ಯಯನ ನಡೆಸಿದರೆ ಅವರ ಮಿತಿಗಳ ಹೇಳಿಕೆಯೂ ಹೌದು ಅವುಗಳು.

ಇಲ್ಲಿಯ ಬಹುಪಾಲು ಕವನಗಳು ಎಪ್ಪತ್ತರ ದಶಕದಲ್ಲಿ ರಚಿತವಾಗಿದ್ದರೂ, ಈ ದಶಕದ ಗಾಢ ಅಲ್ಲೋಲ ಕಲ್ಲೋಲಗಳ ಸ್ಪರ್ಶವೇ ಇದಕ್ಕಿಲ್ಲ ಎಂಬುದು ಗಮ ನಾರ್ಹ. ಆದರೆ, ಎಲ್ಲ ಸಾಮಾಜಿಕ ವಸ್ತುಗಳಿಗೂ ಬೆನ್ನು ತಿರುಗಿಸಿ ಹಠದಿಂದ ವೈಯಕ್ತಿಕ ಜಗತ್ತೊಂದನ್ನು ಕಟ್ಟಿಕೊಳ್ಳುವ ರೀತಿಯೂ ಅವರದಲ್ಲ. ಏಕೆಂದರೆ, ಈ ಸಂಕಲನದಲ್ಲೇ ಸಾಕಷ್ಟು ಸಾಮಾಜಿಕ ವಸ್ತುಗಳಿವೆ. ಅವು ಮುಖ್ಯವಾಗಿ ನಾಡ ಅಭಿಮಾನದವು. ಈ ಅಂಶ ನಿಜವಾಗಿಯೂ ಕುತೂಹಲಕಾರಿಯಾದದ್ದೆ.

ಖನನೋದ್ಯಮ : ಆನಂದ ಝುಂಜರವಾಡ

ಕಾವ್ಯಶಿಲ್ಪ ಮತ್ತು ವೈಚಾರಿಕತೆಗಳ ನುಡುವಣ ಸಂಬಂಧದ ಬಗ್ಗೆ ಈ ಕೃತಿಯಲ್ಲಿ ಸಾಕಷ್ಟು ಗೊಂದಲ ಕಾಣುತ್ತದೆ. ಪದಗಳ ಒಡ್ಡೆಯಿಂದ ಕವನಗಳು ಕಷ್ಟ ಪಡುತ್ತವೆ. ಅದೂ ಅತಿಯಾದ ಬೌದ್ಧಿಕತೆಯ ಭಾರವಾದ ಶೈಲಿ. "ಖನನೋದ್ಯಮ" ಕವನ ವನ್ನು ಓದಿದರೆ ಈ ಮಾತು ಸ್ಪಷ್ಟವಾಗುತ್ತದೆ. ಅಡಿಗರು ತಮ್ಮ ಅತ್ಯುತ್ತಮ ಕವನಗಳಲ್ಲಿ ವಿಚಾರಗಳನ್ನು ಹರಳುಗಟ್ಟಿಸಿ ತಂದ ತೀವ್ರತೆಯ ಛಾಯೆ ಇಲ್ಲಿ ಸುಳಿ ದಾಡುತ್ತದೆ. ಆದರೆ, ಅಡಿಗರಿಗೊಂದು ಕೇಂದ್ರ ದರ್ಶನವಿದ್ದುದರಿಂದ ಆ ಪ್ರಕ್ರಿಯೆ ಗೊಂದು ವಿಶಿಷ್ಟ ಶಕ್ತಿ ಒದಗಿ ಬರುತ್ತಿತ್ತು. ಇಲ್ಲಿ ಬರೀ ದಣಿವು, ನಿರುತ್ಸಾಹ ಮಾತ್ರ ಸುಳಿಯುತ್ತದೆ.

ಆನಂದ ಝುಂಜರವಾಡರು ತಮ್ಮ ಅತ್ಯುತ್ತಮ ಘಟ್ಟಗಳಲ್ಲಿ ಶೈಲಿಗೆ ಗಾಂಭೀರ್ಯ ವನ್ನು ತರುವುದರಲ್ಲಿ ಯಶಸ್ವಿಯಾಗುತ್ತಾರೆ. ಮೇಲಿನ ದಣಿವು ಮತ್ತು ನಿರುತ್ಸಾಹ ಗಳೇ ಕಾವ್ಯ ಬಂಧದಲ್ಲಿ ಅರ್ಥಪೂರ್ಣವಾಗಿ ಭಾಷಾಂತರವಾಗಲು ಇಂಥ ಕಡೆಗಳಲ್ಲಿ ಪ್ರಯತ್ನಿಸುತ್ತವೆ. "ಮಧ್ಯರಾತ್ರಿಯ ಮಾತುಗಳು", "ಬದುಕು ಮತ್ತು ಕಲೆ" ಈ ದೃಷ್ಟಿಯಿಂದ ಇಡೀ ಸಂಕಲನದ ಶ್ರೇಷ್ಠ ಕವನಗಳು. ಎರಡನೆಯ ಕವನದ ಬೌದ್ಧಿಕ

ನಿಲುವಿನಲ್ಲಿ ನೇತ್ಯಾತ್ಮಕ ಅಸ್ಪಷ್ಟತೆಯಿದ್ದರೂ, ಕವನದ ಒಟ್ಟಾರೆ ಧ್ವನಿ ನಿರ್ವಹಣಾ ಕ್ರಮ ಮೆಚ್ಚುಗೆ ತರಿಸುವಂಥದು. "ಒಂದು ರಾತ್ರಿಯ ಕೆಟ್ಟ ನೆನಪು" ಕವನ ಸಾಕಷ್ಟು ಕುತೂಹಲಕಾರಿಯಾಗಿದ್ದರೂ, ಈ ವಸ್ತು ನಿತ್ಯ ಕಥೆಗಳಲ್ಲಿ ಅತ್ಯಂತ ಮಾರ್ಮಿಕ ವಾಗಿ ಪ್ರಕಟವಾಗಿರುವಂಥದು. (ಉದಾ: ಕೆ. ಸದಾಶಿವ).

ಕಾವ್ಯ ಪರಂಪರೆಯೊಂದರಲ್ಲಿ ಬೇರಿದ್ದೂ ಅದರಿಂದ ಭಗ್ನವಾಗಲೆತ್ನಿಸುವ ಪ್ರಯತ್ನ ಶ್ರೀಯುತರಲ್ಲಿ ಕಡಿಮೆ. ಹೀಗಾಗಿ ಇಲ್ಲಿ ಅನೇಕ ಕಡೆಗಳಲ್ಲಿ ಬೇರೆ ಕವನಗಳ ನೆರಳು ಥಟ್ಟನೆ ಕಾಣುತ್ತದೆ. ಈ "ಖನನೋದ್ಯಮ" ಎಂಬ ಆಶಯವೇ ಅಡಿಗರದು. ("ಭೂತ" ಕವನದಲ್ಲಿ ಬರುವ ಆಶಯ). ಜೊತೆಗೆ ಪದವಿನ್ಯಾಸದಲ್ಲೂ ಅಡಿಗರ ಪ್ರಭಾವ ಕಾಣುತ್ತದೆ. "ಹೊಂಡ" ಕವನದಲ್ಲಿ ಕಂಬಾರರ "ಗಂಗಾಮಾಯಿ" ಕಾಣಿಸಿ ಕೊಳ್ಳುತ್ತದೆ. ತಮ್ಮ ವೈಯಕ್ತಿಕ ಬದುಕಿನ ಅನುಭವಲೋಕ ಮತ್ತು ಕಾವ್ಯ ಪರಂಪರೆಗಳ ನಡುವಣ ಸಂಬಂಧದ ವಿವಿಧ ಮುಖಗಳನ್ನು ಶ್ರೀಯುತರು ಶೋಧಿ ಸಲು ಯತ್ನಿಸಿಲ್ಲ. ಬೌದ್ಧಿಕ ಸಿದ್ಧತೆಯ ದೃಷ್ಟಿಯಿಂದ ಒಬ್ಬ ಸಾಹಿತ್ಯದ ಅಧ್ಯಾಪಕ ನಂತೆಯೇ ಕಾಣುತ್ತಾರೆ. ಆದ್ದರಿಂದಲೇ, ಇಂಥ ಕೃತಿಯನ್ನು ಕುರಿತು ಹೇಳುವಾಗ "ಕೋರ್ಟಿನ ಅಮೀನ" ಬರೆದದ್ದು ಎಂದು ವಿಶೇಷವಾಗಿ ಹೇಳಲೆತ್ನಿಸುವುದು ಅಪ್ರಾಮಾಣಿಕ. ನವ್ಯಕಾವ್ಯ ಮಾರ್ಗದ ಒಂದು ಸಾಧಾರಣ ಕೃತಿ ಇದು ಎಂದು ಹೇಳಬಹುದು.

ಹೇಳದೆ ಉಳಿದದ್ದು : ಬನ್ನಂಜೆ ಗೋವಿಂದಾಚಾರ್ಯ

ಇದನ್ನು ಬರೆಯುವಂತೆ ಮಾಡಿದ್ದು "ಹೆಣ್ಣು ಮತ್ತು ಈ ನೆಲದ ಮಣ್ಣು" ಎಂದು ಈ ಕೃತಿಯ ಅರ್ಪಣಾ ವಾಕ್ಯದಲ್ಲಿ ಬನ್ನಂಜೆಯವರು ಹೇಳಿದ್ದಾರೆ. ಹೆಣ್ಣಂತೂ ಇಡೀ ಸಂಕಲನದಲ್ಲಿ ತುಂಬಿಹೋಗಿದೆ. ಮಣ್ಣಿಗೆ ಜಾಗವೇ ಇಲ್ಲ.

ಬನ್ನಂಜೆ ಕಾಮದ ವಸ್ತುವನ್ನು ನಿರ್ವಹಿಸಿರುವ ಪರಿ ಕಲ್ಪೂತನದಿಂದ ಕೂಡಿ ರುವಂಥದು. ತಾರುಣ್ಯದ ತುಂಬು ಹೊಳೆ ಮೈಗೆ ಬಂದು ಸೇರಿದ ಹೊಸದರಲ್ಲಿ ಕಾಣುವ ಶಕ್ತಿ–ಆಲನಹಳ್ಳಿಯವರ ಕವನಗಳು—ಸಂಭ್ರಮ ಇಲ್ಲಿಲ್ಲ. ಅಥವಾ ಕಂಬಾರರ ಹಾಗೆ ಕಾಮವೇ ಮಾಧ್ಯಮವಾಗಿ ಉಳಿದ ಸೂಕ್ಷ್ಮ ಅನುಭವಗಳನ್ನು ಅದರ ಮೂಲಕ ಹುಡುಕುವ ಪ್ರಯತ್ನವೂ ಇಲ್ಲಿಲ್ಲ. ಹೀಗಾಗಿ, ಕಾಮದ ಮಸ್ತು ಇಲ್ಲೊಂದು ಅಬ್ಸೆಷನ್ ಹಂತದಲ್ಲಿ ಮಾತ್ರ ಉಳಿದುಬಿಟ್ಟಿದೆ.

"ನಾನು", "ಪ್ರಶ್ನೆ" "ವಯಸ್ಕರಿಗೆ ಮಾತ್ರ," "ಹೆಣ್ಣು ಮತ್ತು ವೇದಾಂತ" ಕವನಗಳನ್ನು ಓದಿದರೆ ನಾನು ಅಬ್ಸೆಷನ್ ಪದವನ್ನು ಬಳಸಿದ್ದರ ಕಾರಣ ತಿಳಿಯುತ್ತದೆ. ಸೂಕ್ತ ವಸ್ತು ಪ್ರತಿರೂಪಗಳ ಮೂಲಕ ಈ ವಸ್ತು ಹೊರರೂಪ ತಾಳುವುದೇ ಇಲ್ಲ. ಸುಮ್ಮನೆ ಮಾತು, ಮಾತು. ಮನಸ್ಸಿನ ಯೋಚನೆ ಮತ್ತು ಕಾವ್ಯ ಬಂಧದ ನಡುವೆ

ಯಾವ ಮಧ್ಯಾಂತರ ಕ್ರಿಯಾ ವ್ಯಾಪಾರವೇ ಇಲ್ಲ. ಅಂದರೆ ಕಾವ್ಯಶಿಲ್ಪದ ಪ್ರಜ್ಞೆ ಪೂರ್ಣವಾಗಿ ನಾಪತ್ತೆಯಾಗಿದೆ, ಈ ಮಾತು ಇಡೀ ಸಂಕಲನಕ್ಕೆ ಸಲ್ಲುತ್ತದೆ. ಒಂದು ವಾಕ್ಯಕ್ಕೂ ಇನ್ನೊಂದು ವಾಕ್ಯಕ್ಕೂ ತಾರ್ಕಿಕ ಸಂಬಂಧ ಇರಲೇಬೇಕೆಂಬ ಅಪ್ರಜ್ಞಾ ಪೂರ್ವಕ ಹಠ ಕಾವ್ಯಶಿಲ್ಪದ ಹುಡುಕಾಟಕ್ಕೆ ಮಾರಕವಾಗಿ ಪರಿಣಮಿಸಿದೆ. ಈ ರೀತಿಯಲ್ಲದಿದ್ದರೆ "ಶಕುಂತಲಾ", "ಋಷ್ಯಶೃಂಗ" ದಂಥ ಕವನಗಳಲ್ಲಿ ಸರಳ, ಛಂದೋ ಬದ್ಧತೆಗೆ ಪ್ರಯತ್ನಿಸಿದ್ದಾರೆ. ಯಾವ ದರ್ಶನವೂ ಈ ಎರಡು ಕವನಗಳಲ್ಲಿಲ್ಲ.

ಆದರಲ್ಲೂ ಮಧ್ಯಮವರ್ಗದ ಸಂಕೋಚ, ಕಟ್ಟುಗಳ ನಡುವೆಯೇ ಇಲ್ಲಿಯ ಕವನಗಳನ್ನು ಬರೆಯಲಾಗಿದೆ. ಹೆಣ್ಣೆಂದರೆ ಬರೀ ಕಾಮ ಎಂಬ ಅಸಹ್ಯನೀಯ ದೃಷ್ಟಿ ಕೋನ ಭಾರತೀಯ ಸಂಸ್ಕೃತಿಯಲ್ಲಿ ಮೊದಲಿನಿಂದ ಹರಿದು ಬಂದಿರುವ ಲೈಂಗಿಕ ಗೋಸುಂಬೆ (ಹಿಪಾಕ್ರಸಿ) ತನದ ಆಧುನಿಕ ರೂಪ ಇರಬಹುದಲ್ಲವೆ ಇದು ಎಂಬ ಅನುಮಾನ ನನ್ನನ್ನು ಸಂಕಲನದುದ್ದಕ್ಕೂ ಕಾಡಿತ್ತು. ಇದನ್ನು ಬಿಟ್ಟು ಉಳಿದ ಕವನಗಳ ಬಗೆಗೂ ಹೆಚ್ಚಿಗೆ ಹೇಳುವಂಥದಿಲ್ಲ, ಹರಟೆಗಳ ರೀತಿ ಕಾಣುತ್ತದೆ.

ಒಡಲಾಳ : ಸತೀಶ ಕುಲಕರ್ಣಿ

ರಾಜಕೀಯ ಮತ್ತು ಕಾವ್ಯದ ಬಂಧ ಇವೆರಡರ ನಡುವೆ ಇರುವ ಸಂಬಂಧದ ಬಗ್ಗೆ ಕವನಗಳಲ್ಲಿ ವಿವಿಧ ರೀತಿಯ ಪ್ರಯೋಗ ಪ್ರಜ್ಞೆ ತೋರಿಸದೆ ಇದ್ದಲ್ಲಿ, ಅಂಥ ಕಾವ್ಯದ ಓದು ಬೇಗ ಬೇಸರವನ್ನು ಹುಟ್ಟಿಸಿಬಿಡುತ್ತದೆ. ಬೀದಿಬದಿಯ ಭಾಷಣ ಗಳಿಗಿಂತ ಭಿನ್ನವಾದ ರೂಪವನ್ನು ಮುಗ್ಧ ಯುವಕನೊಬ್ಬನ ರಾಜಕೀಯ ಸಿಟ್ಟಿನ ಡೈರಿ ಬರವಣಿಗೆಗಳಿಗಿಂತ ಭಿನ್ನವಾದ ಕಟ್ಟುವಿಕೆಯ ಕ್ರಮವನ್ನು ಕವನಗಳು ಹೊಂದಿರ ಬೇಕು. ಇಲ್ಲದಿದ್ದರೆ, ಅಂತಿಮವಾಗಿ ಅದು ಓದುಗನ ಪ್ರಜ್ಞೆಗೆ ಏನನ್ನೂ ಸೇರಿಸಲಾರದೆ ಹೋಗುತ್ತದೆ. "ಒಡಲಾಳ" ಕೃತಿಯ ಓದು ಬೇಸರ ತರಿಸುವುದಕ್ಕೆ ಕಾರಣ ಇದೇ

ಇಲ್ಲಿಯ "ವರ್ತಮಾನದ ಒತ್ತಡದಲ್ಲಿ" ಕವನವನ್ನು ವಿಶ್ಲೇಷಿಸಿದರೆ ಈ ಕಾವ್ಯದ ಮಿತಿಗಳ ನಿಯಂತ್ರಕ ಶಕ್ತಿ ಎಲ್ಲಿಯದು ಎಂಬುದು ತಿಳಿಯುತ್ತದೆ. ವರ್ತಮಾನದ ಒತ್ತಡಗಳಿಗೆ ಪ್ರತಿಸ್ಪಂದಿಸಬೇಕಾದ ಅನಿವಾರ್ಯತೆಯನ್ನು ಕುರಿತ ಕವನ ಇದು. ಆದರೆ, ಆಧುನಿಕ ಬಂಡವಾಳಶಾಹೀ ಯುಗದ ಪ್ರಮುಖ ಒತ್ತಾಯವೇ ವರ್ತಮಾನದಲ್ಲಿ ಅವಿಮರ್ಶಾತ್ಮಕವಾಗಿ ಪ್ರಜ್ಞೆಯನ್ನು ಸಿಕ್ಕಿಸುವುದು. ಈ ವರ್ತಮಾನದ ಒತ್ತಡವೇ ಸಹಜ ಶಾಶ್ವತ ಎಂಬಂತೆ ಕಂಡು ಇದು ಚಾರಿತ್ರಿಕ ಬದುಕು, ಬಿಡುಗಡೆ ಅಸಾಧ್ಯ ಎಂಬಂಥ ವಾತಾವರಣವನ್ನು ನಿರ್ಮಿಸುತ್ತದೆ. ಆದ್ದರಿಂದ, ವಿಮೋಚನಾ ಚಿಂತನೆ, ಸಾಹಿತ್ಯ ಯಾವಾಗಲೂ ವರ್ತಮಾನದ ಈ "ಸುದ್ದಿ"ಗಳನ್ನು ಮೀರಿ, ಹೊಸ ಕ್ರಮ ವೊಂದನ್ನು ನಿರ್ಮಿಸುತ್ತದೆ. ಕಾವ್ಯದಲ್ಲಂತೂ ಭಾಷೆ, ಬಂಧದ ವಿನ್ಯಾಸ ಪೂರಾ ಬೇರೆ ಯಾಗುತ್ತದೆ. ಈ ಕವನದಲ್ಲಿ ಕೂಡಾ "ಸುದ್ದಿ"ಗಳದೇ ಪ್ರಾಧಾನ್ಯ ಎಂಬುದು ಮುಖ್ಯ.

ಹೀಗಾಗಿ, ಕವನದ ಬಂಧದಲ್ಲಿ ಈ ವಿಮೋಚನಾ ಪ್ರಜ್ಞೆ ಮೂಡುವುದಿಲ್ಲವಾದ್ದರಿಂದ ಈ ಕವನ ಬೀದಿ ಬದಿಯ ಭಾಷಣವಾಗಿ ಕೊನೆಯಾಗುತ್ತದೆ.

ಮೇಲಿನ ವಿಶ್ಲೇಷಣೆ ಎಲ್ಲ ಕವನಗಳ ಮಟ್ಟಿಗೂ ಸಲ್ಲುತ್ತದೆ. ಈಗಿನ ಸಮಾಜದ ಭ್ರಷ್ಟತೆ, ಅಸ್ತವ್ಯಸ್ತತೆಗಳ ಬಗ್ಗೆ ಸಿಟ್ಟು ಸುಲಭವಾಗಿ ಬಲಪಂಥೀಯರದೂ ಆಗಬಹುದು. ಹಿಟ್ಲರನ "ರಾಷ್ಟ್ರೀಯ ಸಮಾಜವಾದೀ" ಪಕ್ಷ ಅಧಿಕಾರಕ್ಕೆ ಬಂದದ್ದಾದರೂ ಹೇಗೆ ? ಆದ್ದರಿಂದ, ವಾಮಪಂಥೀಯ ಕಾವ್ಯ ನಿಜವಾಗಿ ಬೇರೆ ಆಗುವುದು ಜಗತ್ತನ್ನು ವಿಶ್ಲೇಷಿಸುವ ಕ್ರಮದಲ್ಲಿ ; ಅದನ್ನು ಕಾವ್ಯ ಬಂಧಕ್ಕೆ ವರ್ಗಾಯಿಸುವ ರೀತಿಯಲ್ಲಿ.

ಉಪನ್ಯಾಸ ರೂಪದ ಕವನಗಳನ್ನು ಬಿಟ್ಟು ಇನ್ನಷ್ಟು ಆಳದ ಅಭಿವ್ಯಕ್ತಿ ಕ್ರಮಗಳಿಗೆ ಸತೀಶ ಕುಲಕರ್ಣಿಯವರು ಗಮನ ಕೊಡಲೆಂದು ಈ ಲೇಖಕನ ನಮ್ರ ಪ್ರಾರ್ಥನೆ.

ನನ್ನವರ ಹಾಡು : ಬಸವರಾಜ ಸಬರದ

ಈ ಕವನ ಸಂಕಲನದ ಮುಖ್ಯ ಸತ್ಯ ಎಂದರೆ ಬಸವರಾಜ ಸಬರದರ ಸಾಮಾಜಿಕ ಕ್ರೋಧ. ಹೊಸಕಾವ್ಯ ಮಾರ್ಗದ ಎಲ್ಲಾ ಎಡಕವಿಗಳ ಹಾಗೆ ಈ ಕವಿಗಳು ಕೂಡಾ ಆಕ್ರೋಶದ ಕಾವ್ಯ ಬರೆಯಲು ಯತ್ನಿಸುತ್ತಾರೆ. ಈ ಆಕ್ರೋಶ ಮತ್ತು ಕಾವ್ಯದ ಆಕೃತಿ ನಡುವೆ ಇರುವ ಅಂತರದಿಂದಾಗಿ, ಅವರ ಮೂಲ ಸಿಟ್ಟಿನ ರಾಗಿಕಾಳಿನಷ್ಟು ಮಾತ್ರ ವ್ಯಕ್ತವಾಗುತ್ತದೆ. ಕವನದೊಳಗೆ ತಂತ್ರ, ಕಟ್ಟಡ ನಿರ್ಮಾಣ ಕೌಶಲ ಮಾತ್ರವೇ ನಿಜವಾಗಿಯೂ ಪರಿಣಾಮಕಾರಿಯಾದ ರಾಜಕೀಯ ಕಾವ್ಯವೊಂದನ್ನು ನಿರ್ಮಿಸಲು ಶಕ್ತವಾಗುವುದು.

ಬಸವರಾಜ ಸಬರದರ ಕವನಗಳಿಗೆ ಯುಗಟು ಹೊಡೆಯುವಷ್ಟು ಏಕತಾನತೆ ಇದೆ. ಅವರ ಕಾವ್ಯದ ಪ್ರಾತಿನಿಧಿಕ ನಿರ್ಮಾಣಕ್ರಮ ಎಂದರೆ ವಸ್ತುವೊಂದರ ಸುತ್ತ ಸಾಮಾಜಿಕ, ರಾಜಕೀಯ ಪ್ರತಿಕ್ರಿಯೆಗಳನ್ನು ಪೇರಿಸುತ್ತಾ ಹೋಗುವುದು. ಜೊತೆಗೆ ಒಂದು ಸಾಲಿಗೂ ಇನ್ನೊಂದು ಸಾಲಿಗೂ ಗದ್ಯಾತ್ಮಕ ತಾರ್ಕಿಕತೆಯ ಸಂಬಂಧ ಇರಬೇಕೆಂಬ ಹಠ. ಕವನಗಳ ಶಿಲ್ಪದ ಬಗ್ಗೆ ಕಲ್ಪನೆಯೇ ಇಲ್ಲದಂತಾಗಿ ಬೆಳೆಯುತ್ತಾ ಹೋಗಿ ಕೊನೆಗೆ ರಾಜಕೀಯ ಮೊನಚನ್ನೆ ಇಲ್ಲವಾಗಿಸಿವೆ. "ಕೊನೇ ಎಚ್ಚರಿಕೆ", "ರೂಢಿಸಿ ಕೊಂಡವರ", "ಅಸ್ತಿತ್ವ", "ಸೋಗು ಮತ್ತು ಸಂಸ್ಕೃತಿ", "ಅಲ್ಲಿ-ಇಲ್ಲಿ", "ಮುಖ ವಾಡಗಳು" ಕವನಗಳು ಇದಕ್ಕೆ ಉದಾಹರಣೆಗಳನ್ನಾಗಿ ನೋಡಬಹುದು.

ತಮ್ಮ ದೇಸಿನುಡಿಯಲ್ಲಿ ಒಂದಷ್ಟು ಕವನಗಳನ್ನು ಶ್ರೀಯುತರು ರಚಿಸಿದ್ದಾರೆ. ಜಾನಪದ ತ್ರಿಪದಿಗಳ ರೂಪದಲ್ಲೂ ಕೆಲವಿದೆ. ಕೆಲವು ಕಡೆಯಂತೂ ಸಿದ್ಧಲಿಂಗಯ್ಯನವರ ಪ್ರಭಾವ ಎದ್ದು ಕಾಣುತ್ತದೆ (ನನ್ನವರು). "ರಕ್ತ ಮಾಂಸದ ಹಾಡು"

ಕವನ ಇಂಥ ಕವನಗಳಲ್ಲಿ ಕುತೂಹಲಕಾರಿಯಾದದ್ದು. ಆದರೆ ಸಾಮಾಜಿಕ ಬದಲಾವಣೆಯ ಬಗ್ಗೆ ಕವಿಗೆ ತುಂಬ ಮುಗ್ಧ ಕಲ್ಪನೆ ಇರುವುದು ಕಾಣುತ್ತದೆ. ರಕ್ತ ಹರಿಯದೇ ಇದ್ದ ಕಡೆ ರಕುತದ ಕಾಲೀವಿ ಹರಿದಾವೊ ಎಂದು ಹೇಳುವುದು ಫ್ಯಾಂಟಸಿಗೆ ಹತ್ತಿರ. ಆದರೆ, ಈ ಫ್ಯಾಂಟಸಿಯಾದರೂ ಅತ್ಯಂತ ಎಚ್ಚರದಿಂದ ಬಳಕೆಯಾದರೂ (ಕುವೆಂಪು, ಮಯಕೋವಸ್ಕಿ ಬಳಸಿಕೊಂಡಂತೆ) ಅತ್ಯಂತ ಉಪಯುಕ್ತ ತಂತ್ರವಾಗಲು ಸಾಧ್ಯ. ಆದರೆ ಇಂಥ ಯಶಸ್ಸು ಸಾಧ್ಯವಾಗುವುದು ತಂತ್ರದ ಕಡೆಗೆ ಗಮನವಿದ್ದಾಗ ಮಾತ್ರ. ವಸ್ತು ಮತ್ತು ಆಕೃತಿಯ ನಡುವೆ ಇರುವ ಅಭಿನ್ನ ಸಂಬಂಧದ ಕಲ್ಪನೆ ನಮ್ಮ ಗೆಳೆಯರಿಗೆ ಬಂದರೆ ಕನ್ನಡ ಕಾವ್ಯದ ಆಕೃತಿ ಚರಿತ್ರೆಯಲ್ಲಿ ಹೊಸ ಅಧ್ಯಾಯ ಮೂಡಲು ಸಾಧ್ಯ.

ನೀ ವಸಂತ ನಾ ಕೋಗಿಲೆ : ಭುವನಮಿತ್ರ

ಕವನ ಸಂಕಲನದ ಹೆಸರೇ ಸೂಚಿಸುವ ಹಾಗೆ ರಮ್ಯ ವಾತಾವರಣವೊಂದನ್ನು ಭುವನಮಿತ್ರರು ತಮ್ಮ ಕವನಗಳಲ್ಲಿ ಸೃಷ್ಟಿಸಲು ಯತ್ನಿಸಿದ್ದಾರೆ. ಆದರೆ ಈ ರಮ್ಯತೆಯ ಕಲ್ಪನೆ ಜೀವನದ ಘರ್ಷಣೆಗಳಿಗೆ ಪ್ರತಿಯಾಗಿ ಬಂದದ್ದಲ್ಲ ಎಂಬುದಕ್ಕೆ ಈ ಸಂಶೋಧಕ ಎಲ್ಲ ಕವನಗಳೂ ಸಾಕ್ಷಿ ಹೇಳುತ್ತವೆ. ಹೀಗಾಗಿ, ಇಲ್ಲಿ ನಿರ್ಮಾಣವಾಗುವ ಸನ್ನಿವೇಶ ಹಾಗೂ ಪ್ರತಿಮೆಗಳು ತೆಳುವಾದ ಲಾಲಿತ್ಯವನ್ನು ಹೊಂದಿವೆ. ಸಲೀಸಾದ ಹುಟ್ಟನ್ನು ಪಡೆದಿವೆ.

ಪ್ರಕೃತಿಯನ್ನು ಕುರಿತ ಕವನಗಳು, ಬೇರೆ ಕವನಗಳಲ್ಲಿ ಪ್ರಕೃತಿ ಬರುವ ರೀತಿ ಎರಡನ್ನೂ ಕೊಂಚ ಸೂಕ್ಷ್ಮವಾಗಿ ನೋಡಿದರೆ ಮೇಲಿನ ಮಾತುಗಳು ಸ್ಪಷ್ಟವಾಗುತ್ತವೆ. ಪ್ರತಿಭೆಯ ಕೆಲಸ ಇಲ್ಲಿ ತೀರಾ ಕಡಿಮೆ. ಭಿನ್ನವಾಗಿ ಕಾಣುವ ಎರಡು ಸಂಗತಿಗಳನ್ನು ಬೆಸೆಯುವ ಕ್ರಮದಲ್ಲಿ ಹುಟ್ಟುವ ಬೆಳಕು ಮತ್ತು ಬೆಂಕಿಗಳ ಅನುಭವ ಇಲ್ಲಿ ಆಗದೆ ಇರುವುದು ಈ ಕಾರಣಕ್ಕೆ. ಮೇಲ್ಪದರಗಳ ಕಸಬುಗಾರಿಕೆ ಇಲ್ಲಿ ಪ್ರಧಾನವಾಗಿರುವುದರಿಂದ ಭುವನಮಿತ್ರರ ಗಾಂಭೀರ್ಯ, ಶ್ರದ್ಧೆಯ ಬಗ್ಗೆ ಮೆಚ್ಚುಗೆ ಮೂಡಿದರು, ಅಂತಿಮವಾಗಿ ಕವನಗಳು ಮನಸ್ಸಿನಲ್ಲಿ ಉಳಿಯುವುದಿಲ್ಲ. "ನೀವಸಂತನಾ ಕೋಗಿಲೆ", "ಪ್ರಿಯತಮೆ", "ರಾಜಕುಮಾರಿ ! ರಾಜಕುಮಾರಿ", "ಜೀವಸ್ಮೃತಿ" ಕವನಗಳಲ್ಲಿ ಕೆಲವು ಒಳ್ಳೆಯ ಭಾಗಗಳಿದ್ದರೂ, ಅವು ಅನವಶ್ಯಕವಾಗಿ ಉದ್ದವಾಗಿ ಬೆಳೆದಿವೆ ಎನಿಸುತ್ತದೆ. ಇದೇ ಭಾಗದಲ್ಲಿ ಸಮೀಕ್ಷಿಸಲಾಗಿದ್ದ ಅವರ ಹಿಂದಿನ ಕೃತಿಗಳಿಗಿಂತ ಇದು ಹೆಚ್ಚು ಪ್ರಬುದ್ಧವಾದದ್ದು ಎಂಬುದರಲ್ಲಿ ಸಂದೇಹವಿಲ್ಲ. ಸ್ವಂತಿಕೆಯ ಪ್ರಯತ್ನ ಇದರಲ್ಲಿ ಹೆಚ್ಚು ಸ್ಪಷ್ಟವಾಗಿದೆ.

ಉಸಿರುಗಳ ಬೀದಿಯಲಿ : ಸುಂದರ ನಾಡಕರ್ಣಿ

ಅಭಿವ್ಯಕ್ತಿಯ ನಿರ್ದಿಷ್ಟತೆ, ಮತ್ತು ಸಂಯಮದ ಅಭಿವ್ಯಕ್ತಿಯ ಕಡೆಗೆ ಕವಿ ಸಾಕಷ್ಟು ಗಮನ ನೀಡಿರುವುದನ್ನು ಕಾಣಬಹುದು. "ವಿದೂಷಕರು", "ಕಾಂಜಂಗ್" "ಟ್ಯಾರಿಟೀಸ್", "ಬಯಲಾಟ" ಕವನಗಳನ್ನು ಹೊರತುಪಡಿಸಿದರೆ, ಇನ್ನುಳಿದ ಎಲ್ಲ ಕವನಗಳಿಗೂ ಈ ಮಾತು ಸಲ್ಲುತ್ತದೆ. ಅನೇಕರ ಹಾಗೆ ತಮ್ಮ ಸಿದ್ಧತೆಗೆ ಮೀರಿದ ಮಹತ್ವಾಕಾಂಕ್ಷೆಯನ್ನು ನಾಡಕರ್ಣಿಯವರು ಪ್ರಕಟಿಸುವುದಿಲ್ಲ ಎಂಬು ದೊಂದು ಸಮಾಧಾನದ ಸಂಗತಿ.

ನವ್ಯ ಸಂವೇದನೆಗೆ ಸಾಕಷ್ಟು ಸುಲಭವಾದ ಕೆಲವು ಕವನಗಳನ್ನು ಕಂಡು ಹಲವೆಡೆ ಕವಿಯ ಕಾವ್ಯಾಭ್ಯಾಸದ ಶ್ರದ್ಧೆಯ ಬಗ್ಗೆ ಅನುಮಾನ ಬರುತ್ತದೆ. (ಉದಾ: "ನಾನು"). ಆದರೆ ಕೆಲವು ಕವನಗಳಲ್ಲಿ ನಾಡಕರ್ಣಿಯವರು ತೋರಿಸುವ ಜಾಣತನ ಸರಳವಾದದ್ದಾದರೂ ಯಶಸ್ವಿಯಾಗಿ ಪ್ರಕಟವಾಗಿದೆ. "ನನ್ನ ಈ ಲೋಕ", "ಈ ಕಾಡಿನಲ್ಲಿ", "ಬಣ್ಣಗಳು", "ಶಬ್ದ ಸಮಾಧಿ" ಕವನಗಳು ಈ ದೃಷ್ಟಿಯಿಂದ ಇಡೀ ಸಂಕಲನದ ಯಶಸ್ವೀ ಕವನಗಳು.

ಸುಂದರ ನಾಡಕರ್ಣಿಯವರು ಹೊರನಾಡಿನಲ್ಲಿರುವ ಕಾರಣಕ್ಕೆ ಏನೊ, ಅವರ ಕಾವ್ಯದ ಭಾಷೆಗೆ ಹೆಚ್ಚು ಪುಸ್ತಕೀಯವಾದದ್ದು ಅನಿಸುತ್ತದೆ. ಎಲ್ಲಿಯೂ ಅದು ಆಡುನುಡಿಯ ಸಂಗೀತದ ಗುಂಗನ್ನು ಪಡೆದುಕೊಳ್ಳುವುದೇ ಇಲ್ಲ. ಈಚಿನ ಎಲ್ಲ ನವ್ಯ ಕವಿಗಳ ಹಾಗೆ ಭಾಷಾಸಂಪತ್ತಿನ ಸಮೃದ್ಧ ಬಳಕೆಗೆ ಇಲ್ಲಿಯೂ ಅವಕಾಶವಿಲ್ಲ. ಈ ಒಟ್ಟಾರೆಯಾಗಿ, ಈ ಕವನ ಸಂಕಲನದ ಮಿತಿಗಳು ಇವೇ.

ಉಂಬರ : ಎಸ್. ವಿ. ಪರಮೇಶ್ವರ ಭಟ್ಟ

ಶ್ರೀಯುತರ ಮೂರನೆ ವಚನ ಸಂಕಲನ ಇದು. ವಚನವೆಂಬ ಪ್ರಕಾರದಲ್ಲಿ ಹೊಸ ಪ್ರಯೋಗಗಳನ್ನೇನೂ ಕವಿ ನಡೆಸಿಲ್ಲವಾದರೂ, ತಮ್ಮ ಜೀವನದ ಹಲವು ಹತ್ತು ಅನುಭವಗಳ ಮೇಲೆ ಪ್ರತಿಕ್ರಿಯಿಸಿದ್ದಾರೆ. ಈ ದೃಷ್ಟಿಯಿಂದ ವಚನ ಪ್ರಕಾರದ ಮುಖ್ಯ ಗುಣವಾದ ವೈಯಕ್ತಿಕತೆಯನ್ನು ಇಲ್ಲಿಯೂ ಉಳಿಸಿಕೊಂಡು ಬರಲು ಯತ್ನಿಸಿದ್ದಾರೆ.

ಜೀವನದ ಎಲ್ಲ ಕ್ಷೇತ್ರಗಳ ಮೇಲೆ ಪರಮೇಶ್ವರ ಭಟ್ಟರು ಪ್ರತಿಕ್ರಯಿಸಿದ್ದಾರೆ, ರಾಜಕಾರಣ, ಸಾಮಾಜಿಕ ಜೀವನದಲ್ಲಿ ನೈತಿಕ ಮೌಲ್ಯಗಳ ಅಧಃಪತನಗಳ ಬಗ್ಗೆ ನಿರೀಕ್ಷಿತ ಪ್ರತಿಕ್ರಿಯೆಯನ್ನು ಇಲ್ಲಿ ನಾವು ಕಾಣುತ್ತೇವೆ. ಆದರೆ, ಇಂಥ ದಿನನಿತ್ಯ ವಾಸ್ತವವನ್ನು ಕೊಂಚ ಬಿಟ್ಟು ದೂರ ಹೋಗಲು ಯತ್ನಿಸಿದಾಗ ಎಸ್. ವಿ. ಅವರ ಮಾತಿಗೆ ಚುರುಕು ಬರುತ್ತದೆ. ದೈವ, ಅಂತರಂಗ, ನಿಗೂಢತೆಯ ಕಡೆಗೆ ಕಣ್ಣು

ಹಾಯಿಸಿದಾಗ, ಅವು ಉಳಿದ ರಾಜಕೀಯ ಸಾಮಾಜಿಕ ವಚನಗಳಿಗಿಂತ ಖಂಡಿತವಾಗಿ ಸುಂದರವಾಗಿ ಕಾಣುತ್ತವೆ. ಇಂಥ ಕಡೆಗಳಲ್ಲಿ ಅನ್ಯೋಕ್ತಿಯ, ಪ್ರತಿಮೆಯ, ಹೋಲಿಕೆಯ ನೆರವು ತೆಗೆದುಕೊಳ್ಳುತ್ತಾರೆ. ಆದರೆ ಎಸ್.ವಿ.ಪಿ.ಯವರ ಪಾಂಡಿತ್ಯ ಸಾಹಿತ್ಯದ ಓದು ಇದರಲ್ಲಿ ಅಷ್ಟಾಗಿ ಬಂದೇ ಇಲ್ಲ ಎಂಬುದು ಮಾತ್ರ ಆಶ್ಚರ್ಯದ ಸಂಗತಿ. ಇದನ್ನು ಅವರೇ ವಿವರಿಸುತ್ತಾರೆ. "ನನ್ನ ವ್ಯುತ್ಪತ್ತಿ ಒಕ್ಕಾಲು, ನೀನಿತ್ತ ಪ್ರತಿಭೆ ಮುಕ್ಕಾಲು" ಎಂದು ಆದರೆ ಇಂಥ ವಚನಗಳಿಗೆ ಪಾಂಡಿತ್ಯದ ರಸಸ್ಪರ್ಶ ಇದ್ದರೆ ಶೋಭಿಸುತ್ತದೆಂದು ಈ ಲೇಖಕನ ಅಂದಾಜು.

ಈ ಕೃತಿಯ ಒಂದು ವಿಶೇಷವೆಂದರೆ ಎಸ್.ವಿ.ಪಿ. ಅವರ ವ್ಯಕ್ತಿತ್ವದ ಬಹುಪಾಲು ಮೂಲೆಗಳು ಇಲ್ಲಿ ಪರಿಚಯವಾಗುತ್ತದೆ ಎಂಬುದು. ಇದೇ ತಮ್ಮ ಕಡೆಯ ವಚನ ಸಂಕಲನವೆಂದು ಕವಿ ಹೇಳಿಕೊಂಡಿದ್ದಾರೆ. ವಚನದಂಥ ಪ್ರಕಾರದಲ್ಲಿ ಬರೆಯುತ್ತಿದ್ದ ಒಬ್ಬ ಲೇಖಕರ ಈ ತೀರ್ಮಾನ ದುಃಖದ ಸಂಗತಿ.

ಮೌನದುಡಿಯ ಧ್ವನಿ : ಶ್ರೀಧರ ಆರಾಧ್ಯ

ನವ್ಯಕಾವ್ಯ ಮಾರ್ಗದ ಚೌಕಟ್ಟಿನಲ್ಲಿ ತಮ್ಮ ಕಾವ್ಯವನ್ನು ರೂಪಿಸಿಕೊಳ್ಳಲು ಶ್ರೀಧರ ಆರಾಧ್ಯರು ಯತ್ನಿಸಿದ್ದಾರೆ. ಈ ಯತ್ನದಲ್ಲಿ ಕವಿ ಯಶಸ್ಸುಗಳಿಸಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ನವ್ಯಕಾವ್ಯ ಮಾರ್ಗದ ಚೌಕಟ್ಟಿನಲ್ಲಿ ಕಾವ್ಯರಚನೆ ಪ್ರಾರಂಭಿಸುವ ಕವಿಗಳಿಗೆ, ಅದರಲ್ಲೂ ಸಾಹಿತ್ಯದ ವೃತ್ತಿ ವಿದ್ಯಾರ್ಥಿಗಳಿಗೆ ಸುಲಭವಾಗಿ ಸಿದ್ಧಿಸುವ ಕೆಲವು ಸಂಗತಿಗಳು ಆರಾಧ್ಯರಿಗೂ ಸಲೀಸಾಗಿ ಲಭಿಸಿದೆ. ಸ್ವ-ಕೇಂದ್ರಿತತೆ, ಖಾಲಿತನದ ಅನುಭವ, ರಾಜಕೀಯ ಅಥವಾ ಧರ್ಮದ ನೆರವಿನಿಂದ ಬರುವ ಶ್ರದ್ಧೆಯ ಗೈರು ಹಾಜರಿ ಇವೆಲ್ಲ ತೀರಾ ಸುಲಭದ ನಿಲುವುಗಳಾಗಿ ಕೊನೆಯಾಗಿ ಬಿಡುತ್ತವೆ. ಈ ಎಲ್ಲ ಸಂಗತಿಗಳನ್ನು ಒಂದಲ್ಲ ಒಂದು ರೂಪದಲ್ಲಿ ಈ ಸಂಕಲನದಲ್ಲಿ ಕಾಣಬಹುದು. "ಭಾವಸ್ಖಲನ", "ನರಸತ್ತ ಅಂತರಂಗ ಹಾಡಿದ್ದು" ಮುಂತಾದುವುಗಳನ್ನು ವಿಶ್ಲೇಷಿಸಿದರೆ, ಇಲ್ಲಿಯ ನಿಲುವುಗಳಿಗೆ ಇಡೀ ಸಂಕಲನವನ್ನು ರೂಪಿಸಿರುವ ತಾತ್ವಿಕ ನೆಲೆ ಸ್ಪಷ್ಟವಾಗುತ್ತದೆ. ಜೊತೆಗೆ, ರಾಜಕೀಯ ಬಗೆಗೆ, ಸುತ್ತಲಿನ ಬದುಕಿನ ಬಗೆಗೆ ನಮ್ಮ ವಿದ್ಯೆಯ ಮಾರ್ಗಗಳಿಗೆ ಸಹಜವಾದ ಅನುಮಾನ, ವ್ಯಂಗ್ಯ. ಅದೂ ಕೂಡಾ ಇಲ್ಲಿಯ ಕವನಗಳಲ್ಲಿ ವ್ಯಕ್ತವಾಗಿರುವ ರೀತಿ ತೀರಾ ಗದ್ಯಾತ್ಮಕವಾಗಿದ್ದು, ಕಾವ್ಯಾಭ್ಯಾಸಕ್ಕೆ ಹೊಸದೇನೂ ಅನುಭವವಾಗುವುದಿಲ್ಲ.

ಎಲ್ಲಕ್ಕಿಂತ ಹೆಚ್ಚಾಗಿ ಈ ಸಂಕಲನದ ದೋಷ ಪ್ರತಿಪುಟದಲ್ಲೂ ನನಗೆ ರಾಚಿದ್ದು ಶ್ರೀಯುತರಿಗೆ ಇರುವ ಭಾಷಾ ಕಲ್ಪನೆ. ರಾಮಾನುಜರ ಕೆಟ್ಟ ಅನುಕರಣೆಯನ್ನು ನೀವಿಲ್ಲಿ ಪ್ರತಿ ಪುಟದಲ್ಲೂ ಕಾಣುತ್ತೀರಿ ; ಅದೂ ಪದಗಳನ್ನು ಅಸಂಬದ್ಧವಾಗಿ ಒಡೆವ ರೀತಿಯಲ್ಲಿ. ಈ ಸಂಕಲನದ ಒಂದು ಕವನ—"ನಿನ್ನಲ್ಲಿಗೇ ಬರುತ್ತೇನೆ"—ಮಾತ್ರ ಆರಾಧ್ಯರನ್ನು ಕಾಪಾಡುತ್ತದೆ. ಅದು ಕೂಡಾ Contrived ಅನ್ನಿಸಿದರೂ, ಕಡೇ

ಪಕ್ಷ ಅಂಥದನ್ನಾದರೂ ಸಾಧಿಸಲು ಯತ್ನಿಸುತ್ತಾರಲ್ಲ ಎಂಬುದು ಸಂತೋಷದ ಸಂಗತಿ.

ಈ ವರ್ಷದಲ್ಲೇ ಇರುವ ವೆಂಕಟೇಶಮೂರ್ತಿ, ಕಮಲಾ ಹೆಮ್ಮಿಗೆಯವರನ್ನು ಸೂಕ್ಷ್ಮವಾಗಿ ಓದಿದರೆ, ಒಂದೇ ಕಾವ್ಯಮಾರ್ಗದಲ್ಲಿ ಬರೆದರೂ ಆರಾಧ್ಯರ ದೌರ್ಬಲ್ಯ ತಿಳಿಯುತ್ತದೆ.

ನನ್ನ ಜನ ನನ್ನ ಮನ : ಶಿವರಾಮು

ಹಾಗೆ ನೋಡಿದರೆ, ಈ ಕವನ ಸಂಕಲನವನ್ನು ಇದರ ತಾತ್ವಿಕತೆಯ ಕಾರಣಕ್ಕಾಗಿ ತಿರಸ್ಕರಿಸುವುದು ಹುಂಬತನ ಎಂದು ಈ ಲೇಖಕನಿಗೆ ತೀವ್ರವಾಗಿ ಅನ್ನಿಸಿದೆ. ಏಕೆಂದರೆ, ಇದು ಕವನವೇ ಆಗದಿದ್ದರೆ ಇದು ಹೇಳುವ ವಿಚಾರಗಳ ಆಧಾರಗಳ ಮೇಲೆ ಇಂಥ ಕೃತಿಯನ್ನು ತಿರಸ್ಕರಿಸುವುದು ಅನಿವಾರ್ಯವಾಗಿ ವಿಚಾರಗಳ ಬಯಲಿಗೆ ಇಳಿದ ಹಾಗೆ. ರಾಜಕಾರಣವನ್ನು ಪೊಳ್ಳು ರೀತಿಯಲ್ಲಿ ಸೌಂದರ್ಯೀಕರಿಸುವ ಪ್ರಯತ್ನ ಈ ಕವನಗಳಲ್ಲಿದೆ. ಆದರೆ ಇಲ್ಲಿ ಈ ರಾಜಕಾರಣಕ್ಕೆ ದೇಶಭಕ್ತಿ ಎಂಬ ರೂಪಿನಲ್ಲಿ ವ್ಯಕ್ತವಾಗಿದೆ. ಇಡೀ ಸಂಕಲನದ ಹಿನ್ನೆಲೆಯಲ್ಲಿ ಹರಿಯುತ್ತಿರುವ ರಕ್ತಪಿಪಾಸೆ ಅಸಹ್ಯ ಹುಟ್ಟಿಸುವಂಥದು. ಉದಾಹರಣೆಗಾಗಿ ಈ 4 ಸಾಲುಗಳನ್ನು ನೋಡ ಬಹುದು.

ಸಂದರು ದುರ್ಗಾಷ್ಟಮಿ ಮಾನವಮಿ
ಬಂದಿರಲಿಂದಿಗೆ ವಿಜಯದ ದಶಮಿ
ಎಂದಿಗೆ ಓ ಇನ್ನೆಂದಿಗೆ ಮುಗಿವುದು ಹೂಹಣ್ಣಿನ ಬಡಹಾರುವಸೇವೆ?
ಶಸ್ತ್ರಾಸ್ತ್ರವು ಸೊರಗುತ್ತಿದೆ ಬೇಸತ್ತಿದೆ, ರುಧಿರಾರ್ಚನೆಗಿನ್ನು ತಡೆವೆ?

ವಿಕೃತ ಹಾಗೂ ಸುಳ್ಳು ಆದರ್ಶಗಳಿಗೆ ಹೀಗೆ ಕೊಲ್ಲಬಯಸುವ ಜನರಿಗೆ ಕೆ.ಎಸ್.ನ ತಮ್ಮ "ನನ್ನ ಕವನ"ದಲ್ಲಿ ಉತ್ತರ ನೀಡಿದ್ದಾರೆ : ಕೊಲುವ ಹಕ್ಕು ನಿಮಗಿಲ್ಲ ಸ್ನೇಹಿತರೆ ಅಸ್ತ್ರವೇನೇ ಇರಲಿ. ಶಸ್ತ್ರಾಸ್ತ್ರವು ಸೊರಗಿದರೆ ಸೊರಗಲಿ. ಶಿವರಾಮು ಅವರು ಒಳ್ಳೆಯ ಪದ್ಯ ಬರೆಯುವುದು ಕಲಿತರೆ ಸಾಕು. ಇಲ್ಲದಿದ್ದರೆ ಹೀಗೆ ಕಾವ್ಯ ಸೊರಗುವುದನ್ನು ನೋಡುವುದು ಕಷ್ಟ.

ಕಾಡಿನ ಹೂಗಳು : ಶಿವಮೂರ್ತಿ

ಶಿವಮೂರ್ತಿಯವರ ಈ ಸಂಕಲನ ಮನಸ್ಸಿನಲ್ಲಿ ಉಳಿಯುವಂಥ ಕವನಗಳನ್ನು ಕೊಟ್ಟಿಲ್ಲ. ಕಾವ್ಯ ಪರಂಪರೆಯೊಂದರಲ್ಲಿ ಕಲಿತು, ಪಳಗಿ ರಚಿಸಿದ ಕವನಗಳಲ ಇವು. ಆದರೂ ಬಹುಪಾಲು ನವೋದಯದ ಸರಳ ಗೀತ ಪ್ರಕಾರದ ಚೌಕಟ್ಟಿನಲ್ಲೇ ಎಲ್ಲ ಕವನಗಳೂ ಹುಟ್ಟಿವೆ.

ಆದರೆ ಅಷ್ಟೇನೂ ಹುಂಬ ರಚನೆಗಳಲ್ಲದಿರುವ ಕವಿತೆಗಳೂ ಇಲ್ಲಿ ಕೆಲವಿವೆ ; "ಸೀಮಾಂತ ಸ್ಥಿತಿ" "ತಾಯ್ತನದ ಬಯಕೆ" "ಆಸ್ಪತ್ರೆ" ಅಂಥ ಕವಿತೆಗಳು. ಈ ಕೃತಿಯನ್ನು ಕಾಪಾಡುವ ರಚನೆಗಳೆಂದರೆ ಇವೇ. ಪ್ರಕೃತಿಯ ಮೇಲೆ ಇರುವ ಕವನ ಗಳಲ್ಲಿ ನೋಟಕ್ಕೆ ಹೊಸತನವಿಲ್ಲದಿರುವುದರಿಂದ, ಅಮೂರ್ತ ಹೇಳಿಕೆಗಳಾಗಿಯೇ ಕೊನೆಗೊಂಡಿವೆ. ಪ್ರಕೃತಿಯ ವಿವರಗಳನ್ನು ತಕ್ಷಣ ಪರಿವರ್ತಿಸುವುದು ನವೋದಯದ ಸಾಮಾನ್ಯ ರೀತಿಯಾದ್ದರಿಂದ ಅದನ್ನು ಇಲ್ಲಿ ಕವಿ ಅಷ್ಟೇನೂ ಶ್ರಮವಿಲ್ಲದೆ ಬಳಸಿ ಕೊಂಡಿದ್ದಾರೆ. ದೈವೀ ಅನುಭವವನ್ನು ಕುರಿತ ಕವನಗಳಿಗೆ ಕೂಡಾ ಇದೇ ಮಾತು ಸಲ್ಲುತ್ತದೆ.

ಇಂಥ ಕಡೆಗಳಲ್ಲೆಲ್ಲಾ ಕಾವ್ಯವೆಂಬುದು ಒಂದು ಗಂಭೀರ ಉದ್ಯೋಗ ಗಾಢ ಶ್ರದ್ಧೆ, ನಿರಂತರ ಶ್ರಮ, ಇದ್ದರೆ ಮಾತ್ರ ಅದು ತನ್ನ ಗುಟ್ಟುಗಳನ್ನು ಬಿಟ್ಟು, ಕೊಡುತ್ತದೆ ಎಂಬ ಮಾತು ಸ್ಪಷ್ಟವಾಗುತ್ತದೆ.

ನಾನೂ ಬರೆಯುತ್ತೇನೆ :- ಬಿ. ಜೆ. ರುದ್ರಮುನಿ

ಈ ಸಂಕಲನದಲ್ಲಿ ವಿಚಿತ್ರವೆಂದರೆ ಎರಡು ಬಗೆಯ ಕವನಗಳಿವೆ. ಒಂದು ಗುಂಪಿನ ಕವನಗಳನ್ನು "ಹೋಪ್‌ಲೆಸ್" ಎಂದು ಬಿಸಾಡುವಷ್ಟರಲ್ಲಿ, ಅವಷ್ಟೇ ಅಲ್ಲ ನಾವೂ ಇದ್ದೇವೆ ಎಂದು ಚುರುಕಾದ ಕವನಗಳ ಗುಂಪು ತೇಲಿ ಬರುತ್ತವೆ. ಮೊದಲ ನೆಯದರಲ್ಲಿ ಅಸಾಧ್ಯ ಹುಂಬತನ. ಆದರೆ ಸಂತೋಷದ ಸಂಗತಿಯೆಂದರೆ ಅನೇಕರಲ್ಲಿ ಆಗುವ ಹಾಗೆ ಇದು ಮೈಲಿಗಟ್ಟಲೆ ಹರಿಯುವುದಿಲ್ಲ. ಮೂಲತಃ ಸಂಯಮ ವಿರುವ ಈ ಸಂಕಲನದಲ್ಲಿ ಈ ಗುಣವೊಂದು ವರವೇ ಆಗಿದೆ.

ಚುರುಕಾದ ಗುಂಪಿಗೆ "ಬೀಸಿ ಬಂದ ಗಾಳಿಗುಂಟ" "ಹಸಿ" "ಚೆಲುವ-ಚೆಲುವೆ" ಕವನಗಳು ಸೇರುತ್ತವೆ. ಇನ್ನುಳಿದ ಕವನಗಳ ಬಗ್ಗೆ ಹೇಳುವ ಅಗತ್ಯವಿಲ್ಲ. "ಆಳ ವಾದ ಅಭ್ಯಾಸ, ಸತತ ಪರಿಶ್ರಮ ಮತ್ತು ಯೋಗದರ್ಶನ"ದ ಅಗತ್ಯತೆಯ ಬಗ್ಗೆ ಈ ಸಂಕಲನದಲ್ಲಿ ಬಿ. ಆರ್. ಲಕ್ಷ್ಮಣರಾಯರು ಮಾತನಾಡಿದ್ದಾರೆ. ಕವಿ ಅದರ ಕಡೆಗೆ ಗಮನ ಕೊಡಲಿ ಎಂದು ನಾವೂ ದನಿಗೂಡಿಸುತ್ತೇವೆ.

ಎಂಜಿನಿಯರಿಂಗ್ ಗೀತೆಗಳು : ಕೆ. ಚಿದಾನಂದ

ಆಧುನಿಕ ಬಂಡವಾಳಶಾಹಿ ಯುಗದ ಮುಖ್ಯ ಲಕ್ಷಣವೇ ಕಾವ್ಯ ವಿರೋಧಿ ಯಾದ ಬದುಕು ಎಂದು ಹೆಗಲ್ ತನ್ನ ಚಿಂತನೆಯಲ್ಲಿ ಸ್ಪಷ್ಟವಾಗಿ ಹೇಳಿದ್ದ. ಆಧುನಿಕ ಯುಗದಲ್ಲಿ ಕವಿಗೆ ದೊಡ್ಡ ಸವಾಲಿರುವುದೇ ಇಲ್ಲಿ. ಕಾವ್ಯ ವಿರೋಧಿಯಾದ ವಿವರ ಗಳನ್ನು ಕಾವ್ಯವನ್ನಾಗಿ ಪರಿವರ್ತಿಸುವುದರಲ್ಲಿ. ಚಿದಾನಂದರ "ಎಂಜಿನಿಯರಿಂಗ್ ಗೀತೆಗಳು" ಕೃತಿಯನ್ನು ಓದುವಾಗ ಮನಸ್ಸಿನ ಹಿನ್ನೆಲೆಯಲ್ಲಿ ಈ ಎಲ್ಲ ವಿಚಾರಗಳು ಹಾದು ಹೋದವು. ಈ ಅಕಾವ್ಯಯುಗದ ಕಲ್ಲು, ಮಣ್ಣು, ಕಾಂಕ್ರಿಟ್, ವಿದ್ಯುತ್

ಕಂಬಗಳನ್ನೆ ಅವುಗಳ ಮೂಲ ರೂಪದಲ್ಲಿ ಕಾವ್ಯವನ್ನಾಗಿ ಪರಿವರ್ತಿಸುವುದೆಂದರೆ ನಿಜಕ್ಕೂ ಅಸಾಧ್ಯದ ಕೆಲಸ. ಹೀಗಾಗಿ, ಆ ಮೂಲ ವಸ್ತುವಿನ ಭಾರಗಳೇ ಕವಿಯ ಪ್ರತಿಭೆ ಗರಿಬಿಚ್ಚಿ ಹಾರದಂತೆ ಬಂಧಿಸುತ್ತವೆ.

ಚಿದಾನಂದರು ಅನೇಕ ಕಡೆ ಕುತೂಹಲಕಾರಿ ಕವನಗಳನ್ನು ರಚಿಸಿದ್ದಾರೆ. "ಅಣೋರಣೀಯಾನ್", "ವಾಸ್ತುಶಿಲ್ಪ ಜೇನುಹುಳ", "ಸ್ಥಿರ ಭರ", "ನೀ ತಂತ್ರ ಸಿದ್ಧನಾ ತಂತ್ರ ಮುಗ್ಧ", ಆಯಾಮಗಳು", "ಧರ್ಮಯಂತ್ರ", "ಅವತಾರ" ಕವನಗಳು ಆ ಸಾಲಿಗೆ ಸೇರುತ್ತವೆ. ಆದರೆ ಇಲ್ಲೊಂದು ಸ್ವಾರಸ್ಯಕರ ಅಂಶವೆಂದರೆ, ಈ ವೈಜ್ಞಾನಿಕ ಕವಿತೆಗಳ ಪರಿಭಾಷೆ ಪೂರ್ತಿ ಧಾರ್ಮಿಕವೆಂಬುದು. ಕವಿತೆಯಲ್ಲಿ ಭಾಷಿಕ ಅನುಭವವೇ ಪ್ರಾಧಾನ್ಯವಾದುದರಿಂದ ಇಲ್ಲಿ ಧಾರ್ಮಿಕ ಅನುಭವವನ್ನೆ ಎಂಜಿನಿಯರಿಂಗ್ ವಸ್ತುಗಳ ಮೂಲಕ ಸಾಕ್ಷಾತ್ಕರಿಸಿಕೊಳ್ಳಲೆತ್ನಿಸುವ ದೊಡ್ಡ ವ್ಯಂಗ್ಯದಂತೆ ಇಡೀ ಸಂಕಲನ ಕಾಣುತ್ತದೆ.

ಕವಿ ಸಂವೇದನೆಯಲ್ಲೆ ವಿಜ್ಞಾನ ಬೆರೆತದ್ದಾದರೆ ಹುಟ್ಟುವ ಕಾವ್ಯ ಬೇರೆ ರೀತಿಯದೇ ಆಗುತ್ತದೆ. ಕವಿತೆಯ ಲ್ಯಾಂಡ್‌ಸ್ಕೇಪನ್ನೇ ಗಮನಾರ್ಹವಾಗಿ ಬದಲಾಯಿಸಿದ ಡನ್, ಮೀರೋಸ್ಲಾವ್ ಹೊಲುಬ್‌ರ ಕಾವ್ಯ ಈ ರೀತಿಯದು. ನೋಡುವ, ಕಟ್ಟುವ ಕ್ರಮವೇ ಪೂರ್ತಿ ಬೇರೆ.

ಆದರೆ ಚಿದಾನಂದರು ಆಧ್ಯಾತ್ಮಿಕ ಪರಿಭಾಷೆಯಲ್ಲಿ ವಿಜ್ಞಾನವನ್ನು ಅರ್ಥ ಮಾಡಿಕೊಳ್ಳಲು ಯತ್ನಿಸುವ ಸಾಂಪ್ರದಾಯಿಕತೆಯಿಂದಾಗಿ ಬೆರಗು ಹುಟ್ಟಿಸುವ ಸಾಧ್ಯತೆಗಳನ್ನು ಅವರ ಕಾವ್ಯ ಕಳೆದುಕೊಂಡಿದೆ.

ಅವಳ ನೆನಪು : ಕೆ. ಎ. ಬನ್ನೆಟ್ಟಿ

ಅನುಭವವನ್ನು ವ್ಯಂಗ್ಯದಿಂದ ನೋಡುವುದು ಇಲ್ಲಿಯ ಬಹುಪಾಲು ಕವನಗಳ ಮುಖ್ಯಗುಣ. ನವ್ಯ ಕಾವ್ಯಮಾರ್ಗದಿಂದ ಸುಲಭವಾಗಿ ಈ ದೃಷ್ಟಿಕೋನವನ್ನು ಕವಿಗಳು ತೆಗೆದುಕೊಳ್ಳುತ್ತಾರೆ. ಅನುಭವದ ವಿವಿಧ ಮಹಲುಗಳ ಶೋಧನೆಯಿಂದ ಪಾರಾಗುವ ತಂತ್ರ ಕೂಡಾ ಈ ವ್ಯಂಗ್ಯವಾಗಿರಬಹುದು. ಆದರೆ, ಈ ಕವನ ಸಂಕಲನದ ಬಹುಪಾಲು ಕವನಗಳಲ್ಲಿ ಕಂಡುಬರುವ ತುಂಟತನಕ್ಕೆ ಕಾರಣ, ಇಲ್ಲಿ ಅತಿರಂಜಿತ ಆತ್ಮಭರ್ತ್ಸನೆ ಇಲ್ಲ ಎಂಬುದು. ನವ್ಯಕಾವ್ಯಮಾರ್ಗದ ದುರ್ಬಲ ಅನುಕರಣಗಳಲ್ಲಿ ಈ ಎರಡೂ ಗುಣ ಸೇರಿ ಕವನಗಳನ್ನು ಅಸಹನೀಯ ಏಕತಾನತೆಗೆ ಇಳಿಸಿ ಬಿಡುತ್ತದೆ. ಸದ್ಯ ಬನ್ನೆಟ್ಟಿಯವರಿಗೆ ತಮ್ಮ ಅಸ್ತಿತ್ವದ ಬಗ್ಗೆ ಗಾಢ ಅನುಮಾನಗಳು ಪ್ರಾರಂಭವಾಗಿಲ್ಲ.

ಕವನಗಳಲ್ಲಿ ಸಾಕಷ್ಟು ನಾಟಕೀಯ ಅಂಶವನ್ನು ಶ್ರೀಯುತರು ಬಳಸಿಕೊಳ್ಳುತ್ತಾರೆ. "ಘೊಡಸೆ" ಕವನ ಇಂಥ ಪ್ರಯತ್ನಗಳಲ್ಲೊಂದು. ಈ ಕವನ ತನ್ನ ಅನಾವಶ್ಯಕ ಮಾತುಗಾರಿಕೆಯಿಂದಾಗಿ ಯಶಸ್ವೀ ಕವನ ಎನ್ನಿಸುವುದಿಲ್ಲವಾದರೂ, ಬನ್ನೆಟ್ಟಿಯವರಿ

ಗಿರುವ ಶಕ್ತಿಯ ಸೂಚನೆ ಈ ಸಾಲುಗಳಲ್ಲಿದೆ. "ತಿಪ್ಪಿ" "ಅಹಂಬ್ರಹ್ಮಾಸ್ಮಿ" ಕವನಗಳು ಕೂಡಾ ಸಾಕಷ್ಟು ಲವಲವಿಕೆಯುಳ್ಳ ಕವನಗಳು. ಇಲ್ಲಿಯ ಇನ್ನೊಂದು ಸ್ವಾರಸ್ಯಕರ ಕವನವೆಂದರೆ "ನೆನಪು ಅವಳ ನೆನಪು". ಇಲ್ಲಿ ಕೂಡಾ ಅತಿಯಾದ ಮಾತುಗಾರಿಕೆ ಕವನವನ್ನು ತೆಳ್ಳಗಾಗಿಸಿದೆ. ಸಾಧ್ಯವಾದಷ್ಟು ಕಡಿಮೆ ಜಾಗದಲ್ಲಿ ಅತ್ಯಂತ ಸಾಂದ್ರ ವಾದದ್ದನ್ನು ಹೇಳಬೇಕೆಂಬ ಪ್ರಜ್ಞೆ ಬನ್ನೆಟ್ಟಿಯವರಿಗೆ ಕಡಿಮೆ. ಇಷ್ಟಾದರೂ, ಕವನ ತನ್ನ ಒಳ ವಿಭಾಗಗಳಿಂದಾಗಿ, ಅನೇಕ ಕಡೆ ತನ್ನ ತೀವ್ರತೆಯಿಂದಾಗಿ ಮನ ಮುಟ್ಟುತ್ತದೆ.

ಕಾವ್ಯ ಚರಿತ್ರೆಯ ವಿಶಾಲಪಥದಲ್ಲಿ ನಿಲ್ಲಬಲ್ಲಂಥ ಕವನಗಳನ್ನು ಬನ್ನೆಟ್ಟಿಯವರು ರಚಿಸಿಲ್ಲ. ಕಾವ್ಯಮಾರ್ಗವೊಂದರ ಸಿದ್ಧ ಶೈಲಿಯನ್ನು ಅವರು ದಾಟಿ ಹೋಗುವುದಕ್ಕೆ ಪ್ರಯತ್ನಿಸಬೇಕಾಗಿದೆ.

ನನಗನ್ನಿಸಿದ್ದು : ಗುಡಿಬಂಡೆ ಪೂರ್ಣಿಮಾ

ಸಾಮಾನ್ಯ ಸಂಕೋಚಗಳ ಬಂಧನವನ್ನು ಮೀರಿನಿಂತ ಒಂದು ಬಗೆಯ ದಿಟ್ಟತನ ಈ ಕವನ ಸಂಕಲನದ ಮುಖ್ಯ ಗುಣ. ಗಂಡು–ಹೆಣ್ಣಿನ ದೈಹಿಕ ಆಯಸ್ಕಾಂತಕ್ಕೆ ಇಲ್ಲಿಯ ಬಹುಪಾಲು ಕವನಗಳು ಅಂಟಿಕೊಂಡಿವೆ. ಮೇಲುನೋಟಕ್ಕೆ ಈ ಕವನಗಳು ತಮ್ಮ ನಿರ್ಭಿಡೆಯ ಕಾರಣಕ್ಕಾಗಿ ತಮ್ಮ ಕುತೂಹಲವನ್ನು ಗಳಿಸುತ್ತವಾದರೂ, ಸ್ವಲ್ಪ ಆಳವಾಗಿ ವಿಶ್ಲೇಷಿಸಿದರೆ ಅವುಗಳ ದೌರ್ಬಲ್ಯ ತಿಳಿಯುತ್ತದೆ. ವಾಚ್ಯವೇ ಸರ್ವಸ್ವವಾದ ಕವನಗಳು ಇಲ್ಲಿವೆ. ವಾಚ್ಯವೇ ಸರ್ವಸ್ವವಾಗಿಬಿಟ್ಟಾಗ ಕವಿತೆಯ ಬಂಧ ಭಾಷೆಯ ಒಳಮುಖಗಳ ಕಡೆಗೆ ಗಮನ ತೀರಾ ಕಡಿಮೆಯಾಗುತ್ತದೆ.

ಲೈಂಗಿಕತೆಯೆಂಬುದು ಇಲ್ಲಿ ಅಮೂರ್ತ ವಿಚಾರದ ಹೇಳಿಕೆಗಳ ಹಂತದಲ್ಲೆ ನಿಲ್ಲುತ್ತದೆ. ಆ ಅನುಭವ ತನಗೆ ತಕ್ಕಂಥ ರೂಪವನ್ನು, ಪ್ರತಿಮೆಯನ್ನು ಪಡೆದು ಕೊಳ್ಳಲೆತ್ನಿಸುವುದಿಲ್ಲ. (ಬೇಂದ್ರೆಯವರ "ಮಾಯಾಕಿನ್ನರಿ" ಕವನದ ಹಾಗೆ) "ವಾದ್ಯ" ಕವನ ಅಪಾರ ತೀವ್ರತೆಯಿದ್ದೂ ಶಕ್ತಿಶಾಲೀ ವಸ್ತು ಪ್ರತಿರೂಪವೊಂದನ್ನು ನಿರ್ಮಿಸಿಕೊಳ್ಳಲಾಗದೆ ಹೋಗುತ್ತದೆ.

ಈ ಸಂಕಲನದಲ್ಲಿ "ಫಲಿತ ಮರ" ಸಾಕಷ್ಟು ಆಕರ್ಷಕವಾದ ಕವನ. ತಮ್ಮ ದಿಟ್ಟತನಕ್ಕೆ ಸಂವಾದಿಯಾಗುವಂಥ ಕಾವ್ಯ ಬಂಧದ ಪ್ರಜ್ಞೆ ಪೂರ್ಣಿಮಾ ಅವರಿಗೆ ಅಗತ್ಯವಿದೆ.

ನನ್ನಫಜೀತಿ : ಕೆ. ಎಸ್. ರಾಜ

ರಾಜರಿಗೆ ಮಾತಿಗೆ ಉತ್ಸಾಹ ತುಂಬ ಹೆಚ್ಚು. ಹೀಗಾಗಿ ಮಾತು ಕವನದಲ್ಲಿ ಸುಮ್ಮನೆ ಬೆಳೆಯುತ್ತಾ ಹೋದರೂ ಕವಿ ಸುಮ್ಮನಿದ್ದುಬಿಡುತ್ತಾರೆ. ಕಾವ್ಯದ

ಸಮಕಾಲೀನ ಕೆಲವು ಕಾಳಜಿಗಳನ್ನು ಶ್ರೀಯುತರು ಒಳಗೊಳ್ಳಲು ಯತ್ನಿಸಿದ್ದಾರೆ. ಆದರೆ, ಇಲ್ಲಿಯ ಎಲ್ಲ ಕವನಗಳೂ ಬಹುಪಾಲು ಭಾಷಣದ ರೂಪದಲ್ಲಿಯೇ ಇವೆ. (ತನ್ನೊಳಗೆ ತಾನು ಜಗಳವಾಡುವುದು ಕಾವ್ಯಎಂಬುದು ಯೇಟ್ಸನ ವ್ಯಾಖ್ಯಾನ). ಸ್ಪಷ್ಟವಾಗಿ ಗೊತ್ತಿರುವುದನ್ನೆ ವಿವರಿಸುವ ಚಟಕ್ಕೆ ಇಲ್ಲಿಯ ಎಲ್ಲ ಕವನಗಳೂ ಬಿದ್ದಿವೆ.

"ಗಾಂಧಾರಿಯ ಕೊನೆಯ ಮಗ ನಾನು, "ಸುವರ್ಣ ಪರ್ವದ ಸಮಯ" ಕವನಗಳು ವಾಚಾಳಿಯಾಗಿದ್ದರೂ ಕೆಲವು ಕಡೆಗಳಲ್ಲಿ ನಿಜವಾಗಿಯೂ ಗಂಭೀರವಾಗುವ ಪ್ರಯತ್ನವನ್ನು ಮಾಡುತ್ತವೆ. ಭಾಷೆಗೆ ಇರುವ ಸಾಂಕೇತಿಕ, ಪ್ರತಿಮಾತ್ಮಕ ಸಾಧ್ಯತೆಗಳನ್ನು ರಾಜ ಅರ್ಥ ಮಾಡಿಕೊಳ್ಳಲು ಯತ್ನಿಸಬೇಕು ಎಂಬುದು ಇಲ್ಲಿಯ ನಮ್ರ ಸೂಚನೆ.

ಮಿಲನ : ಅನಂತೇಶ್ವರಿ ಸುತ

ಕಾವ್ಯದ ಪ್ರಾಥಮಿಕ ಅನುಭವವೂ, ಭಾಷೆಯ ಜೀವಂತಿಕೆ ಕೂಡಾ ಇಲ್ಲದ್ದರಿಂದ ಶ್ರೀಯುತರ ಕವನಗಳ ವಾಚನ ಕಷ್ಟದ ಕೆಲಸವಾಗಿದೆ. ಇಂಥ ಕವನಗಳನ್ನು ಓದಿದಾಗಲೆ ಕಾವ್ಯ ಪರಂಪರೆಯ ಗಾಢ ಅಭ್ಯಾಸ ಕವಿಗೆ ಅವಶ್ಯಕ ಎಂದು ತೀವ್ರವಾಗಿ ಅನ್ನಿಸುತ್ತದೆ. ಆಗ ಕಾವ್ಯದ ಬಗೆಗೆ, ಕಾವ್ಯ ಕೆಲಸ ಮಾಡುವ ಬಗೆಗೆ ಒಂದು ಅಸ್ಪಷ್ಟ ಕಲ್ಪನೆಯಾದರೂ ಕಾವ್ಯಾಭ್ಯಾಸಿಗೆ ಮೂಡುತ್ತದೆ. ಇಲ್ಲಿ ಕವಿಗೆ ಬಹಳ ಕಡೆಗೆ ತಾನು ಬಳಸುತ್ತಿರುವ ಪದಗಳ ಅರ್ಥವಿನ್ಯಾಸದ ಕಲ್ಪನೆಯೂ ಇಲ್ಲ ಎನ್ನಿಸಿ ಬಿಡುತ್ತದೆ.

ಶ್ರೀಯುತರಿಗೆ ಉತ್ಸಾಹವಿದೆ. ಆ ಉತ್ಸಾಹದ ಜೊತೆ ಬೆರೆಯಬೇಕಾದ ಹತ್ತಾರು ಸಂಗತಿಗಳಿವೆ. ಭಾಷೆಯ ಪ್ರಜ್ಞೆ, ಕಾವ್ಯ ಪರಂಪರೆಯ ಅಭ್ಯಾಸ, ಸಾಮಾಜಿಕ, ರಾಜಕೀಯ ಸಂಗತಿಗಳ ಅಧ್ಯಯನ ಹೀಗೆ. ಇಂಥದರ ಕಡೆಗೆ ಅನಂತೇಶ್ವರಿಸುತರು ಗಮನ ನೀಡುವುದೊಳ್ಳೆಯದು.

ಕಲ್ಪವೃಕ್ಷ : ದಿಗಂಬರ ಜೋಶಿ

ಭಾಷೆ ಮತ್ತು ಸಂವೇದನೆ ಎರಡರ ದೃಷ್ಟಿಯಿಂದಲೂ ಈ ಸಂಕಲನ ಸುಮಾರು 50 ವರ್ಷ ಹಿಂದಿದೆ. ಕನ್ನಡ ಕಾವ್ಯದ ಜಗತ್ತಿನಲ್ಲಿ ಏನೇನು ನಡೆಯುತ್ತಿದೆ, ನಡೆದಿದೆ ಎಂಬುದರ ಬಗ್ಗೆ ಗಮನವೇ ಈ ಕವಿಗೆ ಇರುವ ಹಾಗಿಲ್ಲ. ಸಾಂಪ್ರದಾಯಕ ರಚನೆ ಎಂದರೆ ಕನ್ನಡ ಕಾವ್ಯ ಪರಂಪರೆಯ ಹಳೆಯ ಛಂದೋಪ್ರಕಾರಗಳು ಗೊತ್ತಿವೆ ಎಂದಲ್ಲ. ಅವು ದಕ್ಕುವುದು ಕೂಡಾ ಮಹಾಹಠವಂತರಿಗೆ ಮಾತ್ರ. ಎಲ್ಲ ಕಾವ್ಯ ಚಳುವಳಿಯ ನಂತರವೂ ಉಳಿದುಬಿಡುವ ಗಸಿ ರೂಪದ ದುರ್ಬಲ ಅನುಕರಣೆ ಈ ಪದ್ಯಗಳು.

ಶ್ರೀಯುತರ ಸಾಮಾಜಿಕ ಧೋರಣೆಯೂ ಕೂಡಾ ಬ್ರಾಹ್ಮಣವರ್ಗದ ಪರ ವಾದದ್ದೆ. (ಕಾವ್ಯದಲ್ಲಿ ಅದು ವೈತಳೆಯದೆ ಇರುವಾಗ ಅದು ಅಷ್ಟು ಮುಖ್ಯ ದ್ದೇನಲ್ಲ) "ಬ್ರಾಹ್ಮಣರಿಗೇಕೆ ಹೆದರುವೆ" "ಬ್ರಾಹ್ಮಣರಿಗೇಕೆ ಹೆದರಿಕೆ" ಎಂಬ ಎರಡು ಕವನಗಳು ಈ ದೃಷ್ಟಿಯಿಂದ ಸ್ವಾರಸ್ಯಕರವಾದವುಗಳು. ಬ್ರಾಹ್ಮಣರ ಪರವಾಗಿ ಹೀಗೆ ಆಲೋಚಿಸುವ ಸಾವಿರಾರು ಜನ ನಾಡಿನಲ್ಲಿದ್ದಾರೆ. ಸಾಮಾಜಿಕವಾಗಿ ಈ ನೋಟ ಅನೇಕ ಕುತೂಹಲಕಾರಿ ಸಂಗತಿಗಳ ಕಡೆಗೆ ಕೈ ತೋರಿಸುತ್ತದೆ.

"ಈ ಕವಿ ಬದಲಾಗಲಿ" ಎಂಬ ಆಶಯವನ್ನು ಪ್ರಕಾಶಕರು ವ್ಯಕ್ತಪಡಿಸಿದ್ದಾರೆ. ತಾತ್ವಿಕತೆಯ ವಿಚಾರ ಆಮೇಲೆ, ಮೊದಲು ಕಾವ್ಯ ರಚನೆಯಲ್ಲಿ ಈ ಲೇಖಕರು ಬದಲಾಗಲಿ ಎಂದು ನಮ್ಮ ಆಶಯ.

ಮುರಿದ ವೀಣೆ : ಮಹದೇವ ಸ್ವಾಮಿ

ಪತ್ನಿಯನ್ನು ಕಳೆದುಕೊಂಡ ತೀವ್ರ ಆಘಾತ ಇಡೀ ಸಂಕಲನಕ್ಕೆ ಒಂದು ಬಗೆಯ ಕರುಣಾ ಶೃತಿಯನ್ನು ನೀಡಿದೆ. ಯಾವುದೇ ರೀತಿಯಲ್ಲಿ ಈ ಕವನಗಳಲ್ಲಿ ಹೊಸತನವಿಲ್ಲ ವಾದರೂ. ಭಾವನೆಯ ಹಸಿತನದಿಂದಾಗಿ ಕೆಲವು ಕವನಗಳು ಓದಿಸಿಕೊಳ್ಳುತ್ತವೆ. "ಮಕ್ಕಳಿಗೆ" "ಬಯಕೆ" "ಕೊನೆಯ ಕ್ಷಣದಲ್ಲಿ" "ಅಭಿನಯ" ಕವನಗಳು ಈ ದೃಷ್ಟಿಯಿಂದ ಇಡೀ ಸಂಕಲನದ ಅತ್ಯುತ್ತಮ ರಚನೆಗಳು, ಅದರಲ್ಲೂ "ಅಭಿನಯ" ಕವನ ತನ್ನ ದುಃಖ ಅಭಿವ್ಯಕ್ತಿಯ ಸಂಯಮ ಇವೆರಡರ ಸಮತೋಲನದಿಂದಾಗಿ ಈ ಕೃತಿಯ ಶ್ರೇಷ್ಠ ಕವನವಾಗಿದೆ.

ಇಡೀ ಕೃತಿ ತನ್ನ ಅಗಲಿದ ಪತ್ನಿಯ ಪುಣ್ಯ ಸ್ಮರಣೆ ಎಂಬುದು ನಿಜಕ್ಕೂ ವಿಶಿಷ್ಟ ಸಂಗತಿ.

ಅರಳು : ವೇದವ್ಯಾಸ ಜೋಶಿ

ಅನುಭವಗಳ ಕಡೆಗೆ ಗಮನವೇ ಇರದೆ ಈಗಾಗಲೆ ಲಕ್ಷ ಸಲ ಕೇಳಿರುವ ವಿಚಾರ ಗಳನ್ನೆ ಮತ್ತೆ ವೇದವ್ಯಾಸ ಜೋಶಿಯವರ ಬಹುಪಾಲು ಕವನಗಳು ಹೇಳ ಬಯಸಿವೆ. ಅನುಭವದ ಮೂರ್ತೀಕರಣದ ಕಡೆಗೆ, ತಕ್ಕ ವಸ್ತು ಪ್ರತಿರೂಪದ ಕಡೆಗೆ, ತಕ್ಕ ಮೂರ್ತ ರೂಪಗಳನ್ನು ಹುಡುಕಾಡದೆ ನೇರವಾಗಿ ವಿಚಾರಗಳನ್ನೆ ಬರೆದು ಬಿಟ್ಟಿದ್ದಾರೆ. "ಸಾರ್ಥಯಜ್ಞ" "ಕೇಡಿನ ಕಹಳೆ", "ಗಾಂಧೀಟೋಪಿ", "ಮಾನವ ಪೀಳಿಗೆ", "ಭಾರತ" "ಬಾಪೂಜಿ" ಕವನಗಳು ಇಂಥವುಗಳು. ಇವುಗಳನ್ನು ಸೇರದಂತೆ, ಒಟ್ಟಾರೆಯಾಗಿ ಈ ಸಂಕಲನದ ಮುಖ್ಯ ಕೊರತೆ ನೋಟದಲ್ಲಿ ಹೊಸತನದ ಕೊರತೆ. ಪ್ರಕೃತಿಯನ್ನು ಕುರಿತ ಕವನಗಳಲ್ಲಂತೂ ಇದು ಎದ್ದು ಕಾಣುತ್ತದೆ. "ಬೆಳಗು" "ನಿಶೆಯ ಮಧ್ಯದಲ್ಲಿ" "ಎಂಥ ಹುಚ್ಚಿ ಈ ನಿಶೆ", "ಪ್ರಕೃತಿ ನಕ್ಕಳು" ಕವನಗಳು ಕೂಡಾ ತೀರಾ ಪೇಲವವಾಗಿ ಕಾಣುವುದು ಈ ಕಾರಣಕ್ಕಾಗಿಯೇ.

ಕಾವ್ಯದ ರಚನೆಯೆಂಬುದು ಅತ್ಯಂತ ತೀಕ್ಷ್ಣವಾದ ಬೌದ್ಧಿಕ ಚಟುವಟಿಕೆ ಆದರೆ, ಆ ತೀಕ್ಷ್ಣತೆ ತನಗೆ ಸಿಕ್ಕ ಹೊಸ ಹೊಸ ರೂಪಗಳಲ್ಲಿ ಪ್ರಕಟವಾಗಬೇಕು. ಇದು ಎರಡು ಆಯಾಮಗಳ ಕೆಲಸ. ಈ ರೀತಿಯ ಸಂಕಲನಗಳನ್ನು ನೋಡಿದಾಗ ಈ ದೃಷ್ಟಿಕೋನ ಮತ್ತೆ ತನ್ನ ಅರ್ಥ ಪೂರ್ಣತೆಯನ್ನು ತೀವ್ರವಾಗಿ ಪ್ರಕಟಿಸುತ್ತದೆ.

ಕರ್ಣಾಟಕ ಶ್ರೀ ಶಿವಲೀಲಾ ವಿನೋದಂ : ಶ್ರೀಬಾಲಕೃಷ್ಣ

ಸಮಕಾಲೀನ ಕಾವ್ಯಕ್ಷೇತ್ರದ ಕವಿಗಳಲ್ಲಿ ಕಾವ್ಯಪರಂಪರೆಯ ಛಂದೋಪ್ರಕಾರಗಳ ಬಗ್ಗೆ ಅರಿವೇ ಮಾಯವಾಗುತ್ತಿರುವಾಗ ಈ ಸಂದರ್ಭದಲ್ಲಿ ಈ ರೀತಿಯ ಕೃತಿಗಳು ನಿಜಕ್ಕೂ ಅಚ್ಚರಿ ಹುಟ್ಟಿಸುತ್ತವೆ. ಕನ್ನಡ ಕಾವ್ಯದಲ್ಲಿ ಮಹತ್ವದ ಸ್ಥಾನವಿರುವ ಭಾಮಿನೀ ಷಟ್ಪದಿಯಲ್ಲಿ ಈ ಕೃತಿಯನ್ನು ರಚಿಸಲಾಗಿದೆ. ಪ್ರೇಮ, ಸಾವು ಇವುಗಳ ಕಥೆಯನ್ನೆ ಪುಣ್ಯ ಕಥೆಯ ಚೌಕಟ್ಟಿನಲ್ಲಿ ಕವಿ ಹೇಳಿದ್ದಾರೆ. ಆದರೆ, ದುಃಖದ ಸಂಗತಿ ಎಂದರೆ ಆ ಎರಡೂ ವಸ್ತುಗಳು ಅಲ್ಲಿವೆ ಎಂಬುದೇ ಕವಿಗೆ ತಿಳಿದಿಲ್ಲ. ಬರೀ ಕಥೆಯೇ ಮುಖ್ಯವಾಗಿ ಬಿಟ್ಟಿದೆ. ಎಲ್ಲಿಯೂ ಅಂಥ ಮಹತ್ವದ ಪ್ರತಿಭೆಯ ಸ್ಪರ್ಶವಾಗುವುದಿಲ್ಲ. ಇಂಥ ಕಡೆಗಳಲ್ಲಿ ಮುಖ್ಯವಾಗಿ ಬೇಕಾದದ್ದು ಕಾವ್ಯಪರಂಪರೆಯ ಕಲ್ಪನೆ. ಈ ಅಂಶದ ಬಗ್ಗೆ ಗಮನವೇ ಇಲ್ಲದೆ ಶತಮಾನಗಳ ಹಿಂದೆ ಕೂತು ಬರೆದಂತೆ ಬರೆದರೆ ಕಾವ್ಯಾನುಭವ ಓದುಗನನ್ನು ಸ್ಪರ್ಶಿಸುವುದೇ ಇಲ್ಲ. ಶಿಸ್ತಿನ ಬಗ್ಗೆ ಮೆಚ್ಚಿಗೆ ಬಂದರೂ ಅಂತಿಮವಾಗಿ ನಿರಾಸೆಯಾಗುವುದೂ ಇದೆಕ್ಕೆ ಕಾರಣ.

ಗಾಲ್ಫ್ ಉಬ್ಬಿನ ಮೇಲೆ : ಎಸ್. ಜಿ. ಸಿದ್ದರಾಮಯ್ಯ

"ಲೇಖನಿ ಖಡ್ಗಕ್ಕಿಂತ ಹರಿತ" ಎಂಬ ಉಕ್ತಿಯಲ್ಲಿ ನನಗೆ ನಂಬಿಕೆ ಇಲ್ಲ ಎಂದಿರುವ ಶ್ರೀಯುತರು ಮತ್ತೆ ಮತ್ತೆ ಪ್ರತಿಕ್ರಿಯಿಸುವುದು ಅದೇ ಉದ್ದೇಶದ ಸಾಮಾಜಿಕ, ರಾಜಕೀಯ ವಸ್ತುಗಳಿಗೆ ಇಂಥ ವಸ್ತುಗಳನ್ನು ಪ್ರಜ್ಞಾಪೂರ್ವಕವಾಗಿ ಮೀರಿ ಅರ್ಥ ಪೂರ್ಣ ಕಾವ್ಯ ರಚಿಸುವ ಹೊಣೆಯನ್ನು ನಿರ್ವಹಿಸಲು ಸಿದ್ದರಾಮಯ್ಯನವರಿಗೆ ಸಾಧ್ಯವಾಗಿಲ್ಲ.

ಸಿದ್ದರಾಮಯ್ಯನವರ ಬಹುಪಾಲು ಕವನಗಳು ಸಂಪಾದಕೀಯದ ಶೈಲಿಯಲ್ಲಿವೆ. ಪ್ರತಿಕ್ರಿಯೆಗಳು ಹಬ್ಬುತ್ತಾ ಹೋಗುತ್ತವೆ. "ಗಾಲ್ಫ್ ಉಬ್ಬಿನ ಮೇಲೆ", "ಕೊಡ್ಲಿ ಕುಡ್ಲಾದರಿಗೆ", "ಕರಿಮೂಗ" ಕವನಗಳನ್ನು ಇವಕ್ಕೆ ಉದಾಹರಣೆಯಾಗಿ ಎತ್ತಿ ತೋರಿಸಬಹುದು. ನವ್ಯಕಾವ್ಯಮಾರ್ಗದ ಅಭಿವ್ಯಕ್ತಿ ವಿಧಾನದಲ್ಲಿ ಬೇರಿರುವ ಸಿದ್ದರಾಮಯ್ಯನವರ ಒಂದು ರೀತಿಯ ಕವನಗಳು ಇವುಗಳಾದರೆ, ಇನ್ನೊಂದು ರೀತಿಯ ವೈಯಕ್ತಿಕ ಒಳತೋಟಿಯ ಕವನಗಳೂ ಇಲ್ಲಿವೆ. ಈ ಎಲ್ಲ ಒಳತೋಟಿಯ, ಅಂತರ್‌ಪರಿವೀಕ್ಷಣೆಯ ಕೊನೆಯ ಫಲ ಎಂದರೆ ಆತ್ಮಭರ್ತ್ಸನೆ ಮತ್ತು ಆತ್ಮಮರುಕ. ಅಥವಾ ಕವನದ ಮೊದಲಿನಿಂದಲೇ ಈ ನಿಲುವು ಕವನದ ಅರ್ಥಪೂರ್ಣ ಬೆಳವಣಿಗೆಯನ್ನು ಅಸಾಧ್ಯವನ್ನಾಗಿ ಮಾಡುತ್ತದೆ. ಈ ರೀತಿಯ ಕವನಗಳಂತೂ ಬರೀ

"ವೈಚಾರಿಕ" ಹೇಳಿಕೆಗಳ ಮೊತ್ತ. ಕವನ ಬೆಳೆಯುತ್ತಿರುವುದರ ಅನುಭವವೇ ಆಗುವುದಿಲ್ಲ.

ಬೆಳಕಿಗಾಗಿ : ಕೆ. ಕೇಶವಶರ್ಮ

ಬಿ.ಎ. ವಿದ್ಯಾರ್ಥಿಯಾಗಿರುವ ಕೇಶವ ಶರ್ಮರ ಕವನಗಳಲ್ಲಿ ಸಹಜವಾಗಿ ನಿರೀಕ್ಷಿಸಬಹುದಾದ ತುಂಟುತನ, ಸಂಭ್ರಮ, ಲೈಂಗಿಕತೆ ಇವ್ಯಾವುದೂ ಇಲ್ಲ. ಹುಬ್ಬು ಗಂಟಿಕ್ಕಿ ತುಂಬು ಗಂಭೀರವಾಗಿರುವ ಕವಿಯೊಬ್ಬನನ್ನು ನೋಡುತ್ತೇವೆ. ಎಲ್ಲವನ್ನು ವಿಚಾರದ ಚೌಕಟ್ಟುಗಳಿಗೆ ಹಚ್ಚಗೆ ಕೊಯ್ವ ಆಸೆ. (ಕಾಮದ ಮೇಲೆ ಇರುವ ಈ "ಕಾಮ"ದಲ್ಲೂ ಅದನ್ನು ವಿಶ್ಲೇಷಿಸುವ ತವಕ) ಕೆಲವುಕಡೆ ಆ ಪ್ರಯತ್ನ ನಿರ್ದಿಷ್ಟ ವಾಗಿದ್ದಾಗ ಕವನಗಳು ಸಾಕಷ್ಟು ಗಾಂಭೀರ್ಯವನ್ನು ತಳೆಯುತ್ತವೆ. (ಹೊಸ ತಂತ್ರಕ್ಕೆ, ಸಹಜವಾದ್ದು) ಆದರೆ ಇಲ್ಲಿ ಕೂಡಾ ಒಳಗಿನ ಸೂಕ್ಷ್ಮ ವಿಶ್ಲೇಷಣೆಗಳಿಗೆ ಇಳಿದರೆ ಅರ್ಥದ ಸಂಧಿಗ್ಧತೆ ಕವನವನ್ನು ಹಾಳು ಮಾಡಿರುವ ಪ್ರಸಂಗಗಳು ಸಾಕಷ್ಟಿವೆ.

ಆದರೆ ಈ ವರ್ಷ ಬಂದಿರುವ ಅನೇಕ ಕವಿಗಳ ಪ್ರಥಮ ಸಂಕಲನವನ್ನು ಗಮನಿಸಿ ದಾಗ ಈ ಕವಿಗಿರುವ ಕಾಮ ಪ್ರಬುದ್ಧತೆ ಗಮನಾರ್ಹವಾದದ್ದೆ.

ಎರಡು ಮುಖ : ಅಶೋಕ ಹಾಸ್ಯಗಾರ

ಈ ಕೃತಿಯಲ್ಲಿ ಅಶೋಕ ಹಾಸ್ಯಗಾರರಿಗೆ ಭಾಷೆಯನ್ನು ಕಂಡರೆ ಅತಿಮೋಹ. ಹೀಗಾಗಿ ಅದು ತೊಂಡುದನವಂತೆ ಎಲ್ಲೆಂದರಲ್ಲಿ ನುಗ್ಗಿ ಬಿಡುತ್ತದೆ. ಅಶೋಕ ಹಾಸ್ಯಗಾರರು ಇದರಿಂದಾಗಿ ಅನೇಕ ಕಡೆ ಗಾಯಗೊಂಡಿದ್ದಾರೆ.

"ಮನುಚಕ್ರ" "ಒಂದು ಶೂನ್ಯ ಸಿದ್ಧಾಂತ", "ಮಂಚದ ಮೇಲೆ" ಕವನಗಳನ್ನು ಓದುತ್ತಾ ಹೋದಂತೆ ಒಂದು ಬಗೆಯ ತೀವ್ರತೆಯ ಅನುಭವವಾದರೂ, ಅದನ್ನು ಸ್ವಲ್ಪ ಎಚ್ಚರದಿಂದ ಓದಿದರೆ ನಿರಾಸೆ ಹುಟ್ಟಿಸುತ್ತದೆ. ತಾರ್ಕಿಕವಾಗಿಯೇ ಅನುಭವ ಗಳನ್ನು ತುಣುಕು ತುಣುಕಾಗಿಯೇ ಜೋಡಿಸುತ್ತಾ ಹೋಗುವುದಿಲ್ಲವಾದರೂ, ಒಟ್ಟಾರೆಯಾಗಿಯೇ ಅಸ್ಪಷ್ಟತೆ ಕವನವನ್ನು ಚೂರು ಮಾಡಿಬಿಡುತ್ತದೆ. ರಾಜ್ಯ ಯುವಜನ ಸೇವಾ ನಿರ್ದೇಶನಾಲಯ ನಡೆಸಿದ ಕವನ ಸ್ಪರ್ಧೆಯಲ್ಲಿ ಪ್ರಥಮ ಬಹು ಮಾನ ಪಡೆದ "ರಸ್ತೆಗಳು" ಕವನ ಈ ದೃಷ್ಟಿಯಿಂದ ನೇರ ಅರ್ಥವನ್ನು ಕಟ್ಟುತ್ತಾ ಹೋಗುತ್ತವೆ. ಈ ಕಾರಣದಿಂದಾಗಿಯೇ ಕವನ ಸೊರಗಿಯೂ ಹೋಗಿದೆ.

ಪದಗಳ ಜೊತೆಗೆ ಎಚ್ಚರದಿಂದ ಆಟವಾಡುವುದು ಅವುಗಳನ್ನು ಪ್ರಜ್ಞಾ ಪೂರ್ವಕವಾಗಿ ಬಳಸುವುದು ಅಶೋಕ ಹಾಸ್ಯಗಾರರಿಗೆ ಸಾಧ್ಯವಾಗಲಿ ಎಂದು ಹಾರೈಸಬಹುದು.

ಕೋಲ್ಮಿಂಚು : ದತ್ತಾತ್ರೇಯರಾವ್ ಹೇರೂರ

ಹೈದರಾಬಾದ್ ಕರ್ನಾಟಕದ ಕಡೆ ಕನ್ನಡದ ಕೆಲಸವನ್ನು ಸಾಕಷ್ಟು ಉತ್ಸಾಹ ದಿಂದ ಮಾಡಿದ ವ್ಯಕ್ತಿಗಳಲ್ಲಿ ಹೇರೂರ ಮಾಸ್ತರರೂ ಒಬ್ಬರೆಂಬುದು ವಸಂತ ಕುಷ್ಟಗಿ ಅವರು ಬರೆದಿರುವ ಕವಿ ಪರಿಚಯದಿಂದ ತಿಳಿಯುತ್ತದೆ. ಕನ್ನಡದ ಆದರ್ಶ ಶಿಕ್ಷಕ ರಾಗಿ ಆ ಭಾಗಗಳಲ್ಲಿ ಕೆಲಸ ಮಾಡಿದ ಶ್ರೀಯುತರ ಸಂಕಲನ ಇದು.

ಸುಮಾರು 3 ದಶಕಗಳ ಕಾವ್ಯ ಸೇವೆಯನ್ನು ಈ ಕೃತಿಯಲ್ಲಿ ಕಾಣಬಹುದು. ನವೋದಯ ಕಾವ್ಯಮಾರ್ಗದ ವಿಶಾಲ ಚೌಕಟ್ಟಿನಲ್ಲಿ ತಮ್ಮ ಕಾವ್ಯ ಜೀವನವನ್ನು ಶ್ರೀಯುತರು ನಡೆಸಿದ್ದಾರೆ. ಆದ್ದರಿಂದ ಈ ಮಾರ್ಗಕ್ಕೆ ಅನುಗುಣವಾಗಿ ಅನೇಕ ವಸ್ತುಗಳ ಮೇಲೆ ಇಲ್ಲಿ ಕವನಗಳನ್ನು ರಚಿಸಲಾಗಿದೆ. "ಬಣ್ಣದ ಬೀಸಣಿಕೆ" "ಅಕ್ಕೂಗೆ ತಕ್ಕವ" "ಪರಿಣಾಮವೇನೊ" "ನಲಿವ ಒಂದಾಗಿ" ಕವನಗಳು ಈ ಕೃತಿಯ ಅತ್ಯುತ್ತಮ ರಚನೆಗಳು. ಶ್ರೀಯುತರು ಸಾಹಿತ್ಯಕ ಜೀವನದ ಆ ಪರಿಸರದಲ್ಲಿ ಕಾವ್ಯವೆಂದರೆ ಹಾಡುವುದು ಎಂಬರ್ಥ ಬಂದದ್ದು ತೀರಾ ಸಹಜ. ಸಾಕಷ್ಟು ಕವನಗಳು ಹಾಡುಗಳ ರೂಪದಲ್ಲಿರುವುದು ಬಹುಶಃ ಈ ಕಾರಣಕ್ಕಾಗಿಯೇ. ಅನೇಕ ಸಾಂಧರ್ಬಿಕ ಕವನಗಳು ಕೂಡಾ ಇಲ್ಲಿವೆ.

ಗೀಜಗ : ಕಟಾವೀರನಹಳ್ಳಿ ಜನ್ನಪ್ಪ

ಜನ್ನಪ್ಪನವರು ತಮ್ಮ ಮೊದಲ ಸಂಕಲನದಲ್ಲಿ ಬಹುಪಾಲು ಗಂಡು-ಹೆಣ್ಣಿನ ಸಂಬಂಧದ ಬಗ್ಗೆಯೇ ಗಮನ ಹರಿಸಿದ್ದಾರೆ. ಹರೆಯದ ತಳಮಳ, ತುಂಟತನ, ಆಕರ್ಷಣೆ, ಇಲ್ಲಿ ಕಾಣುವುದಿಲ್ಲ. ಬದಲಾಗಿ ಒಂದು ಬಗೆಯ ಉದ್ವಿಗ್ನತೆ ಎದ್ದು ಕಾಣುತ್ತದೆ. ಅನುಭವ ಮತ್ತು ಕಲೆ ಎರಡರ ನಡುವಿನ ಸೂಕ್ಷ್ಮ ಸಂಬಂಧಗಳ ಗ್ರಹಿಕೆಯ ಅಭಾವದಿಂದಾಗಿ ಹೀಗಾಗಿದೆ ಎನಿಸುತ್ತದೆ. ಜನ್ನಪ್ಪನವರ ಕಾವ್ಯದ ಸಮಸ್ಯೆಗಳ ಬೇರು ಇರುವುದು ಇಲ್ಲಿಯೇ. ಸಮರ್ಥ ರೂಪಕ, ಪ್ರತಿಮೆಗಳಿಗಾಗಿ ಹುಡುಕುವುದಕ್ಕಿಂತ ಹೆಚ್ಚಾಗಿ ತೀರಾ ತೆಳುವಾದ ತರ್ಕದ, ಬೌದ್ಧಿಕತೆಯ ಪರಿಭಾಷೆಯಲ್ಲಿ ಅನುಭವವನ್ನು ವಿವರಿಸಿಕೊಳ್ಳಲೆತ್ನಿಸುತ್ತಾರೆ. ಹೀಗಾಗಿ, ಕವನದ ಶಿಲ್ಪ ಕೈಗೆ ಸಿಕ್ಕದೆ ಜಾರುತ್ತಾ ಹೋಗುತ್ತದೆ. ಆದರೆ, ಈ ನಡುವೆಯೂ "ಗೀಜಗ" ಈ ಸಂಕಲನದ ಅತ್ಯುತ್ತಮ ಕವನ. ಸಂಬಂಧದ ಸ್ವರೂಪಕ್ಕೆ ಸಮರ್ಥ ಪ್ರತಿಮೆಯೊಂದನ್ನು ಕಟ್ಟಿದ್ದಾರೆ. ಬೇರೆ ಕವನಗಳಲ್ಲಿ ಕಾಣುವ ಗೋಜಲು ಕಾಣದೆ ಈ ಕವನ ಸರಳವಾಗಿದೆ, ಶುಭ್ರವಾಗಿದೆ.

"ನನ್ನಂತರಗಂಗೆ," "ಸ್ಮರಣೆಗೊಂದು ಅವಕಾಶ", "ಸುಖದತಿವಿತ" ಕವನಗಳು ಮತ್ತೆ ಲಂಬಿಸುತ್ತಾ ಹೋಗುವ ತಾರ್ಕಿಕತೆಗೆ ಸಿಕ್ಕಿಬಿದ್ದು ಶಿಥಿಲವಾಗಿವೆ. ಅವು ಸೂಚಿಸುವ ಅನುಭವ ಪರಿಧಿಯನ್ನು ಹಿಡಿಯುವ ಪ್ರಯತ್ನವನ್ನು ಜನ್ನಪ್ಪ ಇನ್ನಷ್ಟು

ಹಠದಿಂದ ಮಾಡಬೇಕಿತ್ತು. ಅನುಭವ ಮತ್ತು ಕಾವ್ಯ ಪ್ರಯೋಗಗಳ ನಡುವಣ ಸೂಕ್ಷ್ಮ ಸಂಬಂಧಿಗಳನ್ನು ಕವಿ ತೀವ್ರ ಶ್ರದ್ಧೆಯ ನೆರವಿನಿಂದ ಅರಿಯಬೇಕಾದ ಅಗತ್ಯ ಎದ್ದು ಕಾಣುತ್ತದೆ.

ಶಬ್ದ ನಿಶ್ಯಬ್ದ : ಚೊಕ್ಕಮೂರ್ತಿ ಪಾಟೀಲ

ಹೆಸರು ಸೂಚಿಸುವ ಅನುಭವ ವಲಯವನ್ನು, ಧ್ವನಿ ಸಾಧ್ಯತೆಯನ್ನು ಈ ಕೃತಿ ಪ್ರಕಟಿಸುವುದಿಲ್ಲ ಎಂಬುದನ್ನು ಮೊದಲಿಗೆಯೇ ಹೇಳಬೇಕಾಗಿದೆ. ಇಲ್ಲಿ ಬರೀ ಶಬ್ದವೇ ಹೆಚ್ಚು. ಒಂದು ಪ್ರಬಂಧಕ್ಕೂ ಮತ್ತು ಕಾವ್ಯಕ್ಕೂ ಇರುವ ಜೀವ ಪ್ರಭೇದ ವ್ಯತ್ಯಾಸದ ಅರಿವು ಈ ಕೃತಿಯಲ್ಲಿ ವಿಷಾದಕರ ರೀತಿಯಲ್ಲಿ ಗೈರು ಹಾಜರಾಗಿದೆ. ಸಾಧಾರಣ ಸಂಗತಿಗಳನ್ನು ಸಾಧಾರಣ ರೀತಿಯಲ್ಲಿ ಹೇಳು ವುದು ಕಾವ್ಯವಲ್ಲ. ಕಾವ್ಯವನ್ನು ರಾಜಕೀಕರಿಸುವ ಪ್ರಯತ್ನದ ಸೂಚನೆಯನ್ನು ಕವಿ ತೋರಿಸಿದ್ದಾರಾದರೂ, ಅದು ಬರೀ ತೆಳು ಪ್ರತಿಕ್ರಿಯೆಯ ಹಂತದಲ್ಲಿ ಉಳಿದು ಹೋಗಿದೆ. "ನಾವು ಮತ್ತು ಮಹಾತ್ಮ", "ನೀ, ಹೋದಾವ ಗೆದ್ದಿ", "ಉರಿಗೆ ಬೀಳದಿರಲಿ ಅವನ ಕನಸು" ಮುಂತಾದ ದೊಡ್ಡ ಕವನಗಳನ್ನೂ ವಿಶ್ಲೇಷಣೆ ಮಾಡಿದರೆ ಅವರ ದೌರ್ಬಲ್ಯ ಸ್ಪಷ್ಟವಾಗುತ್ತದೆ. ವೃತ್ತ ಪತ್ರಿಕೆಯ ಸಂಪಾದಕೀಯಕ್ಕೂ ಅವಕ್ಕೂ ವ್ಯತ್ಯಾಸವೇ ಇಲ್ಲ, ಕೆಲವೊಮ್ಮೆ ವ್ಯಂಗ್ಯವನ್ನು ಬಿಟ್ಟರೆ. ಇಂಥವನ್ನು ಓದಿದಾಗ ಇಲ್ಲ, ಇದು ರಾಜಕೀಯ ಕಾವ್ಯ ಎಂದು ತೀವ್ರವಾಗಿ ಹೇಳುವ ಅನಿವಾರ್ಯತೆ ಉಂಟಾಗುತ್ತದೆ.

ಇದ್ದುದರಲ್ಲಿ ಈ ಕವನ ಸಂಕಲನದ ಮಟ್ಟಿಗೆ ಹನಿಗವನಗಳು ಮೇಲು. ಜೊತೆಗೆ "ಪ್ರೀತಿ ಮತ್ತು ಮತ್ತು" ಎಂಬ ಕವನ. ಆದರೆ, ಹೆಣ್ಣಿನ ಬಗ್ಗೆ ಇರುವ ಕವನಗಳ ನಿಲುವಂತೂ ಅಸಹನೀಯವಾದವು. ಅತ್ಯಂತ ಪ್ರತಿಗಾಮೀ ಆಲೋಚನೆಗಳನ್ನು ಇದು ಹೇಳುತ್ತದೆ. ಕವಿಯ ಇಡೀ ವ್ಯಕ್ತಿತ್ವದಲ್ಲಿ ಬಂಡಾಯ ಧೋರಣೆ ಇಳಿದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. "ಕಲ್ಲಿದ್ದಿಲಿನ ಕೆಂಡ" ಈ ಕೃತಿಯ ಒಳ್ಳೆಯ ರಚನೆ.

ಈ ಸಂಕಲನದ ಹಿನ್ನೆಯಲ್ಲಿರುವ ಸಿದ್ಧತೆ, ಪ್ರಯೋಗ, ಪ್ರತಿಭೆಗಳ ಕೊರತೆ ಯನ್ನು ಕವಿ ತುಂಬಿಕೊಳ್ಳಲೆತ್ನಿಸುವುದು ಒಳ್ಳೆಯದು ಎಂದು ಈ ಲೇಖಕನಿಗೆ ಅನ್ನಿಸಿದೆ.

ಬಳ್ಳಿಮೊಗ್ಗು : ಸಿ. ಎಂ. ಚೆನ್ನಬಸಪ್ಪ

ಎಷ್ಟೇ ಸಹಾನುಭೂತಿಯಿಂದ ನೋಡಹೊರಟರೂ ಇಲ್ಲಿಯ ಕವನಗಳು ನುಣುಚಿಕೊಂಡು ಹೋಗುತ್ತವೆ. ಶ್ರೀಯುತರಿಗೆ ತುಂಬ ಉತ್ಸಾಹವಿದೆ ಎಂಬುದು

ಇಲ್ಲಿಯ ಕವನಗಳಿಂದ ಸ್ಪಷ್ಟವಾದರೂ, ಜೊತೆಗೆ ಕಾವ್ಯ ಪ್ರಯೋಗದಲ್ಲಿ ಶಿಕ್ಷಣದ ಕೊರತೆಯೂ ಸ್ಪಷ್ಟವಾಗುತ್ತದೆ. ವಸ್ತು, ಭಾಷೆಗಳ ಹಂತದಲ್ಲಿ ಕವಿಗೆ ಸ್ವಂತಿಕೆ ಇಲ್ಲದಿರುವುದೊಂದು ದೊಡ್ಡ ಕೊರತೆ. ಕಾಲಕ್ಕೆ ತಕ್ಕಂತೆ ಈ ದಿನದ ಸಾಮಾಜಿಕ ಕಾಳಜಿಯನ್ನು ಕೂಡಾ ಕವಿ ಒಳಗೊಳ್ಳಲು ಯತ್ನಿಸಿದ್ದಾರೆ. ಉಳಿದ ಕವನಗಳಿಗೆ ಹೋಲಿಸಿದರೆ ಇವು ಮೇಲು. ಅದರಲ್ಲೂ, "ನೀವು-ನಾವು" ಕವನ ಕವಿ ಸೂಕ್ಷ್ಮವಾಗಿ ಕವನ ಬರೆಯಬಲ್ಲರು ಎಂಬುದಕ್ಕೆ ಸಾಕ್ಷಿ.

ಇಡೀ ಸಂಕಲನಕ್ಕೆ ಈ ಕವನವೊಂದೇ ಶ್ರೀರಕ್ಷೆ.

ವರ್ತಮಾನ : ಲತಾಗುತ್ತಿ

ಸುಮಾರಾಗಿ ಬುದ್ಧಿವಂತರಾಗಿರುವ ಕನ್ನಡ ಎಂ. ಎ. ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಲಭಿಸುವ ಶೈಲಿಯ ಸರಾಗ ಲತಾಗುತ್ತಿಯವರಿಗೆ ಇದೆ. ಇದು ಅವರ ಪ್ರಮುಖ ದೌರ್ಬಲ್ಯ ಕೂಡಾ ಹೌದು ಸಿದ್ಧಶೈಲಿಯಲ್ಲೇ ಕವಯಿತ್ರಿ ತಮ್ಮ ಕವನಗಳನ್ನು ರಚಿಸಿರುವುದರಿಂದ ಎಲ್ಲಿಯೂ ವೈವಿಧ್ಯದ ಪರಿಚಯ ಆಗುವುದಿಲ್ಲ. ಇಲ್ಲಿಯ ವಸ್ತು ಕೂಡಾ ನಿರೀಕ್ಷಿತವಾದದ್ದೆ. ಸಹಜವಾಗಿ ಪ್ರೇಮದ, ಮದುವೆಯ ಚೌಕಟ್ಟಿನಲ್ಲಿ ಅರಳುವ ಪ್ರೇಮದ ಆರಾಧನೆ ಇಲ್ಲಿಯ ಬಹುಪಾಲು ಕವನಗಳಲ್ಲಿದೆ. ಇದರ ಜೊತೆಗೆ ಅಲ್ಲಲ್ಲಿ ರಾಜಕಾರಣದ ಬಗ್ಗೆ ಮಧ್ಯಮವರ್ಗದ ಸಾಮಾನ್ಯ ಪ್ರತಿಕ್ರಿಯೆಯ ಅಲಂಕಾರ ಏದೆ.

ಕವಯಿತ್ರಿಯ ಕಾವ್ಯದ ಕಲ್ಪನೆ ಕೂಡಾ ಸೀಮಿತವಾದದ್ದೆ. "ಕಲ್ಪನೆಗಳನ್ನೆಲ್ಲ ಹಿಡಿದು ಸುಂದರ ಚಿತ್ರ ಮೂಡಿಸುವುದೇ ತಮ್ಮ ಉದ್ದೇಶ" ಎಂಬುದನ್ನು ತಮ್ಮ "ಕವನ"ದಲ್ಲಿ ಅವರು ಹೇಳಿದ್ದಾರೆ.

ಏಳು ಧನ್ಯಳೆ : ಶ್ರೀನಿವಾಸ ತೋಫಖಾನ

ಈ ಕವನ ಸಂಕಲನ ಓದುತ್ತಿದ್ದ ಹಾಗೆ ಕನ್ನಡ ನವೋದಯದ ಸವಕಲು ರೂಪವನ್ನು ಓದುತ್ತಿದ್ದ ಹಾಗೆ ಭಾಸವಾಗುತ್ತದೆ. ಪ್ರಸಿದ್ಧ ಕವಿಗಳ ಸಾಲೂ ವೇಷ ಮರೆಸಿಕೊಂಡು ಬಂದಿರುವುದು ತಿಳಿಯುತ್ತದೆ. ಇಲ್ಲಿರುವ ಸಾಕಷ್ಟು "ಕವನಗಳನ್ನು" ಯಾವುದಾದರೂ ದೇವಾಲಯದಲ್ಲಿ ಭಜನೆಗೆ ಬಳಸಿಕೊಳ್ಳಬಹುದು. ಇಂಥ ದೈವೀ ಭಜನೆಗಳ ಜೊತೆಗೆ ವೆರೈಟಿಗೆ ಎಂಬಂತೆ ಪ್ರೇಮ, ದೇಶಭಕ್ತಿ, ಇತ್ಯಾದಿ ವಸ್ತುಗಳನ್ನು ಕುರಿತ ರಚನೆಗಳೂ ಇವೆ. ವಸ್ತು ಯಾವುದೇ ಇರಲಿ ಪದ್ಯ ಬರೆಯುವುದು ತೋಫಖಾನೆಯವರಿಗೆ ಸಲೀಸಾಗಿ ಬಿಟ್ಟಿದೆ. 83 ಪುಟಗಳ ಈ ಸಂಕಲನದಲ್ಲಿ ಎಲ್ಲಿಯೂ ನಿಮಗೆ ಮನಮುಟ್ಟುವ ಎರಡು ಸಾಲು ಕೂಡಾ ಸಿಗುವುದಿಲ್ಲ.

ಈ ಕನ್ನಡ ಸಂಕಲನದಲ್ಲಿ "ಶಿವಸ್ತುತಿ" ಎಂಬ ರಚನೆಯಿದೆ. ಅಲ್ಲಿ ಕನ್ನಡ ಗಂಧವೇ ಇಲ್ಲವೆಂಬುದೊಂದು ವಿಶೇಷ.

ಸುವರ್ಣ ಸಂಪುಟ : (ಸಂ) ಪು.ತಿ.ನ–ದೇಜಗೌ–ಚೆನ್ನವೀರಕಣವಿ-ಹಾಮಾನಾ–ಪ್ರಭುಶಂಕರ

"ಗೋಲ್ಡನ್ ಟ್ರೆಜರಿ" ಸಂಕಲನದ ಮಾದರಿಯಲ್ಲಿ ಈ ಸಂಕಲನವನ್ನು ಕಲ್ಪಿಸಿಕೊಳ್ಳಲಾಗಿದೆ. ಆದರೂ ಕಾವ್ಯಾಭಿಮಾನಿಗಳು ಈ ಸಂಕಲನದ ಬಗ್ಗೆ ಅಷ್ಟೊಂದು ಉತ್ಸುಕರಾಗಲು ಸಾಧ್ಯವಿಲ್ಲ. ಏಕೆಂದರೆ, ಎತ್ತರದ ವಿಮರ್ಶಾ ಪ್ರಜ್ಞೆಯ ಕೊರತೆ ಈ ಸಂಕಲನದ ಕವಿಗಳ ಆಯ್ಕೆಯಲ್ಲಿ ಕಾಣುತ್ತದೆ. ಕನ್ನಡದ ಸಮರ್ಥಕವಿ, ವಿಮರ್ಶಕರುಗಳ ನೇತೃತ್ವದಲ್ಲಿ ಈ ಕೆಲಸವಾಗಿದ್ದರೂ ಇಲ್ಲಿಯ ಏರುಪೇರುಗಳು ನಿಜಕ್ಕೂ ಆಶ್ಚರ್ಯವನ್ನು ಹುಟ್ಟಿಸುತ್ತವೆ. ಇದರ ಉದ್ದೇಶವೇ ಅಂಥ ಸೀಮಿತ ಆ್ಯಂಥಾಲಜಿಯನ್ನು ಸಿದ್ಧಪಡಿಸುವುದಲ್ಲ ಎಂದು ಹೇಳಿ ಪಾರಾಗಬಹುದಾದರೂ, ಆಗ ಇದರ ಮೂಲಕತೆ ಮಾತ್ರ ಪ್ರಶ್ನಾರ್ಥಕವಾಗಿಯೇ ಉಳಿಯುತ್ತದೆ.

ಒಟ್ಟಾರೆಯಾಗಿ, ಒಂದು ಚಾರಿತ್ರಿಕ ನೋಟವನ್ನು ಈ ಸಂಕಲನ ನೀಡುತ್ತದೆ. ಕನ್ನಡ ನವೋದಯದಿಂದ ಪ್ರಾರಂಭವಾಗಿ ನವ್ಯಕಾವ್ಯದ ತನಕ ಒಂದು ವಿಶಾಲ ನೋಟವನ್ನು ಇದು ನೀಡುತ್ತದೆ. ಸಮಾಜಶಾಸ್ತ್ರೀಯ ಅಧ್ಯಯನ ಮತ್ತು ವಿಮರ್ಶೆಯ ಒಳ ಸೂಕ್ಷ್ಮಗಳ ನಡುವೆ ಇರುವ ವ್ಯತ್ಯಾಸಗಳು ವ್ಯಕ್ತವಾಗುವುದಾದರೂ ಇಲ್ಲಿಯೇ. ಈ ಎರಡೂ ಮಾರ್ಗಗಳ ಶಕ್ತಿ ಮತ್ತು ಮಿತಿಗಳೆರಡೂ ಇಲ್ಲಿ ಪ್ರಕಟವಾಗುತ್ತವೆ. ದುರ್ಬಲ ಅನುಕರಣಕಾರರು ಆ ಕಾವ್ಯ ಮಾರ್ಗಗಳ ಅಣಕವನ್ನು ಮಾಡಿದ್ದಾರೆ. ಮತ್ತು ಈ ಎರಡೂ ಕಾವ್ಯ ಮಾರ್ಗಗಳ ಮಧ್ಯೆ ನಿಂತು ರಚಿಸುತ್ತಿದ್ದ ಅನೇಕ ಜನ ಕವಿಗಳೂ ಇಲ್ಲಿದ್ದಾರೆ.

ಕನ್ನಡದ ನವೋದಯ ತನ್ನ ಕಾವ್ಯಕೃತಿ, ಮಾನವ ಕೇಂದ್ರಿತ ನಿಲುವು, ಸೌಂದರ್ಯಾರಾಧನೆಯನ್ನು ಮೊದಲ ಹಂತದ ಎಲ್ಲ ಕವಿಗಳಲ್ಲೂ ತುಂಬಿದ್ದರೂ ಸಾಮಾಜಿಕವಾಗಿ ಕ್ರಾಂತಿಕಾರೀ ನಿಲುವುಗಳು ವ್ಯಕ್ತವಾದದ್ದು ಕುವೆಂಪು ಅವರಲ್ಲಿ ಮಾತ್ರ. ಜೊತೆಗೆ, ಮೈಸೂರು ಸಂಸ್ಥಾನದಲ್ಲಿ ಆರಂಭವಾದ ನವೋದಯ ಚಳುವಳಿ ಬಹುಪಾಲು ಈಸ್ಥೆಟಿಕ್ ಆದ ನಿಲುವುಗಳಲ್ಲೇ ಪ್ರಾರಂಭವಾಗಿದ್ದರೂ, ಕುವೆಂಪು ನವೋದಯವನ್ನು ಅದರ ತಾರ್ಕಿಕ ನೆಲೆಗೆ ತಂದು ಮುಟ್ಟಿಸಿದರು. ಆ ಮಟ್ಟಿಗೆ ಕನ್ನಡ ನವೋದಯದ ಮೊದಲ ಪ್ರಯೋಗಕಾರರಾಗಿದ್ದ ಹಳೆಮೈಸೂರಿನ ಬಿ.ಎಂ.ಶ್ರೀ, ಡಿ.ವಿ.ಜಿ.ಯವರ ಕಾವ್ಯಕ್ಕೂ ಕುವೆಂಪು ಅವರ ಕಾವ್ಯಕ್ಕೂ ಇರುವ ವ್ಯತ್ಯಾಸ ಈ ದೃಷ್ಟಿಯಿಂದ ಕುತೂಹಲಕಾರಿ. ಜೊತೆಗೆ ಉತ್ತರ ಕರ್ನಾಟಕದಲ್ಲಿ ನವೋದಯ ರೂಪುಗೊಂಡ ರೀತಿಯೂ ಹಳೆಮೈಸೂರಿಗಿಂತ ಭಿನ್ನ. ಇಲ್ಲಿ ಆಳವಾದ ಸಾಮಾಜಿಕ ರಾಜಕೀಯ ದೃಷ್ಟಿಕೋನವನ್ನು ಸೂಕ್ಷ್ಮವಾಗಿ ಕಾಣಬಹುದು. ಕನ್ನಡ

ನವೋದಯುದ ಹಿನ್ನೆಲೆಯಲ್ಲಿ ಉತ್ತರ ಕರ್ಣಾಟಕದಿಂದ ಹರಿದು ಬಂದ ಧಾರೆ ಬೇರೆ ರೀತಿಯದು ಎಂಬ ಸೂಚನೆಯನ್ನು ಇದು ನೀಡುತ್ತದೆ.

ಮೌಲ್ಯಗಳ ಹಂತದಲ್ಲಿ ಕನ್ನಡ ನವೋದಯ ಎಂದರೇನೇ ನಿರ್ದಿಷ್ಟ ಸಾಂಪ್ರದಾಯಿಕ ಮೌಲ್ಯಗಳನ್ನು ಕಾವ್ಯ ಬಿಟ್ಟುಕೊಟ್ಟ ಸ್ಥಿತಿ ಎಂದು ಈ ಸಂಕಲನದ ಅಧ್ಯಯನದಿಂದ ತಿಳಿಯುತ್ತದೆ. ಕೆಳಸಂಸ್ಕೃತಿಗಳ ಬಗೆಗೆ ಆ ಮೌಲ್ಯಗಳ ಫಲವಾಗಿ ಬಂದ ನಿರ್ಲಕ್ಷತೆ ನವ್ಯಕಾವ್ಯದಲ್ಲೂ (ಕಂಬಾರರನ್ನು ಹೊರತು) ಪ್ರಧಾನವಾಗಿ ಮುಂದುವರಿದದ್ದನ್ನು ನಾವು ಕಾಣುತ್ತೇವೆ. ಅದರ ಪರಿಣಾಮವನ್ನು ನವ್ಯಕಾವ್ಯದ ಅವನತಿಯಲ್ಲಿ ನಾವೀಗ ಅನುಭವಿಸುತ್ತಿದ್ದೇವೆ. ನವ್ಯಕಾವ್ಯ ಮಾರ್ಗ ಮೂಲತಃ ವೈಚಾರಿಕ ನಿಲುವಿನ ಮಟ್ಟಿಗೆ ನವೋದಯುದ ಮುಂದುವರಿಕೆ ಎಂಬ ಸಂಗತಿಯನ್ನೂ ನಾವಿಲ್ಲಿ ಕಾಣುತ್ತೇವೆ. ವೈಚಾರಿಕ ನಿಲುವು, ವೈಜ್ಞಾನಿಕತೆ, ತಾರ್ಕಿಕತೆ, ಮುಂತಾದುವುಗಳಲ್ಲಿ ಅಂತರ್ಗತ ಶ್ರದ್ಧೆ ಎರಡಕ್ಕೂ ಸಮಾನವಾದದ್ದು. ಎರಡೂ ಕಾವ್ಯ ಪರಂಪರೆಯ ಮೂಲಭೂತ ನಂಬಿಕೆಗಳು ಅವು. ಇವಿಷ್ಟು ಈ ಸಂಕಲನದಿಂದ ಹೊರಡುವ ಚಾರಿತ್ರಿಕ ನೋಟದ ಬಗ್ಗೆ ಕೆಲವು ಸ್ಥೂಲ ಚಿಂತನೆಗಳು.

ಕವಿ ಕವನಗಳ ಆಯ್ಕೆಯಲ್ಲಿರುವ ಏರುಪೇರುಗಳನ್ನು ಕುರಿತ ಅನೇಕ ತಕರಾರುಗಳನ್ನೆತ್ತಬಹುದು. ಕನ್ನಡ ಕಾವ್ಯ ಚರಿತ್ರೆಯಲ್ಲಿ ಒಂದು ಉತ್ತಮ ಕವನವನ್ನು ನೀಡದೆ ಹೋದ ಕವಿಗಳಿಗೆ ಅತಿರೇಕದ ಪ್ರಾಧಾನ್ಯ ನೀಡಲಾಗಿದೆ. ಆದರೆ, ನವ್ಯ ಕಾವ್ಯದ ಒಂದು ಮಹತ್ವದ ಹೆಸರಾದ ಲಂಕೇಶರಿಗೆ ಅಲ್ಪ ಪ್ರಾಧಾನ್ಯ. ಇದೊಂದು ಸಣ್ಣ ತುಣುಕು. ಹೀಗೆ ಪಟ್ಟಿ ಮಾಡುತ್ತಾ ಹೋಗಬಹುದು.

ಸುಭದ್ರ ವಿಮರ್ಶಾತ್ಮಕ ನೆಲೆಗಟ್ಟಿನಿಂದ ಕನ್ನಡದ ಅತ್ಯುತ್ತಮ ಆ್ಯಂಥಾಲಜಿಯ ಅಗತ್ಯತೆ ಇನ್ನೂ ಇದೆ ಎಂಬುದು ಈ ಕೃತಿಯಿಂದ ಸ್ಪಷ್ಟವಾಗುತ್ತದೆ. ಇದರರ್ಥ, ಇಲ್ಲಿಯ ಸಂಪಾದಕರುಗಳ ಪ್ರತಿಭೆಯನ್ನು ಪ್ರಶ್ನಿಸುವುದಿಲ್ಲ. ಇಂಥ ವಿಶಾಲ ಉದ್ದೇಶವನ್ನಿಟ್ಟುಕೊಂಡು ಹೋದಾಗ ಆಗುವುದೇ ಹೀಗೆ. ಬಹುಶಃ ಈ ಕೃತಿಯ ಮಿತಿ ಇರುವುದು ಇಲ್ಲಿಯೇ.

ಕಾವ್ಯ ನವರಾತ್ರಿ : (ಸಂ.) ಹಾ. ಮಾ. ನಾಯಕ

ಹಳೆ ಮೈಸೂರಿನ ಸಂಭ್ರಮದ ಉತ್ಸವಗಳಲ್ಲೊಂದಾದ ದಸರಾ ಆಚರಣೆಯ ಸಂದರ್ಭದಲ್ಲಿ ನಡೆಸಿದ ಕವಿ ಸಮ್ಮೇಳನದಲ್ಲಿ ಓದಲಾದ ಕವನಗಳ ಸಂಕಲನ ಇದು. ಕನ್ನಡವೇ ಅಲ್ಲದೆ ಉಳಿದ ಕೆಲವು ಸೋದರ ಭಾಷೆಗಳ ಕವನಗಳೂ ಇಲ್ಲಿವೆ.

ಎಲ್ಲ ತಲೆಮಾರಿನ, ಎಲ್ಲ ಕಾವ್ಯ ಮಾರ್ಗಗಳ ಕವಿಗಳೂ ಇಲ್ಲಿದ್ದಾರೆ. ಈ ಕಾರಣಕ್ಕಾಗಿ ಅಲ್ಲಿ ಕೇಳಲು ಸೇರಿದ ಜನಸ್ತೋಮಕ್ಕೆ ಬೇಜಾರಾಗಿರುವ ಸಾಧ್ಯತೆ ಕಡಿಮೆ ಎಂದು ಊಹಿಸಬಹುದು. ಇಲ್ಲಿಯ ಅತ್ಯುತ್ತಮ ಕವನವೆಂದರೆ ನನ್ನ

ದೃಷ್ಟಿಯಲ್ಲಿ, ಕಣವಿ, ಕಂಬಾರರ ಕವನಗಳು. ಕಣವಿ ಮತ್ತು ಕಂಬಾರರ ಅತ್ಯುತ್ತಮ ಕವನಗಳು ಇಲ್ಲಿವೆ. "ಹಲ್ಲಿ" ಮತ್ತು "ಸಾಧನೆ" ಎರಡೂ ಕಣವಿಯವರ ಕಾವ್ಯ ಪ್ರತಿಭೆಯ ಎರಡು ಪ್ರಾತಿನಿಧಿಕ ಮುಖಗಳನ್ನು ತೋರಿಸುತ್ತದೆ. ಮೊದಲನೆಯದು, ವ್ಯಂಗ್ಯದ ಮೂಲಕ ಛೇಡಿಸುತ್ತಾ ವಾಸ್ತವವನ್ನು ಸಂಕೇತಿಸುತ್ತದೆ. ಎರಡನೆಯದು, ವ್ಯಂಗ್ಯದ ನೆರವಿಲ್ಲದೆ ಮೊದಲ ಕವನದಲ್ಲಿ ಅಸಹನೀಯವಾಗಿರುವ ಸಮಾಜವನ್ನು ಕಟ್ಟುವ ಶ್ರದ್ಧೆಯನ್ನು ಸಂಕೇತಿಸುತ್ತದೆ. ಎರಡೂ ಕವನಗಳ ಶೈಲಿಯಲ್ಲಿ ಆಕರ್ಷಕ ವಾದ ಭಿನ್ನತೆ ಇದೆ. ಕಂಬಾರರ "ನಮಗೆ ಸ್ವಾತಂತ್ರ್ಯವೇ ಇಲ್ಲ" ಕವನ ಜೀವ ಚೈತನ್ಯವನ್ನು ಇಲ್ಲವಾಗಿಸುವ, ಜೀವದ ಚಿಂತೆಯನ್ನು ಮಸುಕಾಗಿಸುವ ಕಾಲ ಪುರುಷನನ್ನು ಕುರಿತದ್ದು. ಅತ್ಯಂತ ಮಾರ್ಮಿಕವಾಗಿ ವ್ಯಕ್ತವಾಗುವುದು ಗಂಡು-ಹೆಣ್ಣಿನ ಸಂಬಂಧದಲ್ಲಿ. ಕವನವನ್ನು ವ್ಯಕ್ತಪಡಿಸುವ ರೀತಿ ಓದುಗನ ಮೆಚ್ಚುಗೆಯನ್ನು ಗಳಿಸುತ್ತದೆ.

ಕೆ.ಎಸ್. ನಿಸಾರ್, ಎಕ್ಕುಂಡಿ, ಲಕ್ಷ್ಮಣರಾಯರ ಕವನಗಳು ಈ ಸಂಕಲನದ ಇನ್ನುಳಿದ ಯಶಸ್ವೀ ಕವನಗಳು. ತೆಲುಗಿನ ಟಿ.ವಿ. ಸುಬ್ಬರಾಯರ ಕವನ "ಮಂದಾರ ಹಾರಂ" ಸಿದ್ದಲಿಂಗಯ್ಯನವರ ಕವನವೊಂದನ್ನು ತಕ್ಷಣ ನೆನಪಿಸುತ್ತದೆ. ಅಧ್ಯಕ್ಷತೆ ವಹಿಸಿದ್ದ ಕಣವಿಯವರ ಪುಟ್ಟಭಾಷಣವೂ ಸೇರಿದೆ ಇದರಲ್ಲಿ.

ಐದ್ಹತ್ತು : ಐದು ಜನ ಕವಿಗಳು

ವಸಂತ ಕುಷ್ಟಗಿ, ಸುಮನಯಜುರ್ವೇದಿ, ನಾರಾಯಣ ಕುಲಕರ್ಣಿ, ರತ್ನಾಕರ ವೈದ್ಯ, ಮಹಾವೀರ ಲಕ್ಮಾತುರ – ಈ ಐದುಜನ ಕವಿಗಳ ಸಂಕಲನ ಇದು. ಆದರೆ ಈ ಐವರಲ್ಲಿ ಓದಬಹುದಾದ ಕವನಗಳೆಂದರೆ ವಸಂತ ಕುಷ್ಟಗಿಯವರದೇ. ಎರಡನೆಯ ಜಾಗದಲ್ಲಿ ಸುಮನಯಜುರ್ವೇದಿಯವರು ಕಷ್ಟ ಬಿದ್ದು ನಿಲ್ಲುತ್ತಾರೆ.

ಕುಷ್ಟಗಿಯವರ ಕವನಗಳು ಕೂಡಾ ಹೇಳಿಕೊಳ್ಳುವ ಸೌಷ್ಟವನ್ನೇನು ಪಡೆದಿಲ್ಲ. ಅವರ ಸಾಹಿತ್ಯಕ ಅನುಭವದ ಹಿನ್ನಲೆ ನೋಡಿದಾಗ ಇದಕ್ಕಿಂತ ಹೆಚ್ಚು ಉತ್ತಮ ಕವನಗಳನ್ನು ನಿರೀಕ್ಷಿಸುವುದು ಸಹಜ. "ಗಾಂಧಾರಿಗೆ", "ಬದುಕು ಮತ್ತು ಬ್ರಹ್ಮ", "ಮಗು" ಕವನಗಳು ಪರವಾಗಿಲ್ಲ. ಸುಮನಯಜುರ್ವೇದಿಯವರ ಕವನಗಳ ಪೈಕಿ "ಸಾಥಿ" ''ಮುಗ್ಗರಿಸಿದ ಕುರಿ" ಪರವಾಗಿಲ್ಲ. ಆದರೂ ಉಳಿದ ಕವನಗಳು ತುಂಬುವ ಕತ್ತಲೆಯನ್ನು ಹೊಡೆದೋಡಿಸಲು ಇದಕ್ಕೆ ಶಕ್ತಿಯಿಲ್ಲವೆಂದೇ ಹೇಳಬೇಕು. ಇನ್ನುಳಿದ ಮೂರುಜನ ಕವಿಗಳಂತೂ ಇನ್ನೂ ಹಿಂದೆ ಇದ್ದಾರೆ. ಮೆಚ್ಚಿ ಹೇಳುವಂಥ ಒಂದು ಕವನವೂ ಇವರಲ್ಲಿಲ್ಲವೆಂದು ದುಃಖದಿಂದ ಹೇಳಬೇಕಾಗಿದೆ.

ಹೂ ಬುಟ್ಟಿ : (ಸಂ) ಶರಣಪ್ಪ ತೋಟದ

ಉತ್ತರ ಕರ್ನಾಟಕದ ಕೆಲವು ಕವಿಗಳ ಸಂಕಲನ ಇದು. ಇಲ್ಲಿ ಪ್ರಕಟವಾಗಿರುವ ಕವಿಗಳು ಕಾವ್ಯ ಜೀವನದ ಅನೇಕ ಹಂತಗಳಲ್ಲಿದ್ದಾರೆ. ಹಾಗೇ ಅನೇಕ ಸಾಹಿತ್ಯಕ ಮಾರ್ಗಗಳ ಜೊತೆಗೆ ಈ ಕವಿಗಳಿಗೆ ಸಂಬಂಧವಿದೆ.

ತೀರಾ ತೀರಾ ಪ್ರಾಥಮಿಕ ಹಂತದ, ಬಾಲಿಶದರಂಚಿಗೆ ಮುಟ್ಟಿರುವ ಕೆಲವು ಕವಿತೆಗಳನ್ನು ಬಿಟ್ಟರೆ, ಇನ್ನು ಬಹುಪಾಲು ಕವನಗಳಲ್ಲಿ ಕವನದ ರೂಪದ ಬಗ್ಗೆ ಸಾಕಷ್ಟು ಎಚ್ಚರವಿರುವುದನ್ನು ಕಾಣಬಹುದು. ಸಿದ್ಧಲಿಂಗ ಪಟ್ಟಣಶೆಟ್ಟಿ, ಶೈಲಜಾ ಉಡುಚಣ, ಬಸವರಾಜ ಸಬರದ, ಜಂಬಣ್ಣ ಅಮರಚಿಂತ್ರ, ಸ್ವಾಮೀಜಿ ಗುಲಬರ್ಗಾ, ಕೆ. ಶರೀಫಾ ರವರ ಕವನಗಳು ಈ ದೃಷ್ಟಿಯಿಂದ ಸಂಕಲನವನ್ನು ಬಚಾವು ಮಾಡಿವೆ. ಸಿದ್ಧಲಿಂಗ ಪಟ್ಟಣಶೆಟ್ಟರ "ಮತ್ತೆ ಬಂದಿದ್ದಾಳೆ" ಕವನ ಈ ಕೃತಿಯ ಉತ್ತಮ ರಚನೆಗಳಲ್ಲೊಂದು. ಸಿ.ಪ. ರವರ ಕಾವ್ಯದಲ್ಲಿ ಮೊದಲಿನಿಂದಲೂ ಇದ್ದ ಭಾವಗೀತಾತ್ಮ ಕತೆಯ ಅಂಶ ಈ ಕವನದಲ್ಲಿ ಸಮೃದ್ಧವಾಗಿ ಹರಿದಿದೆ. ಇನ್ನು ಬಸವರಾಜ ಸಬರದ, ಕೆ. ಶರೀಫಾ ಅವರ ಕವನಗಳಿಗೆ ಬಂಡಾಯ ಕಾವ್ಯಮಾರ್ಗಕ್ಕೆ ಇರುವ ಎಲ್ಲ ಸಮಸ್ಯೆಗಳೂ ಕಾಡಿವೆ. ಈ ಸಂಕಲನದ ತುಂಬ ಕುತೂಹಲಕಾರಿ ಕವನವೆಂದರೆ ಸ್ವಾಮೀಜಿ ಗುಲಬರ್ಗಾ ಅವರ "ನಾನೊಬ್ಬ ಸನ್ಯಾಸಿ" ಕವನ. ಸ್ವತಃ ಸನ್ಯಾಸಿಯಾಗಿರುವ ಇವರ ಈ ಕವನ ಆತ್ಮನಿರೀಕ್ಷೆ ನಿಜಕ್ಕೂ ಮೆಚ್ಚುಗೆ ತರಿಸುವಂಥದು. ಜಂಬಣ್ಣರ ಕವನ ಗುಮಾಸ್ತರ ಬದುಕಿನ ಬಗ್ಗೆ ಕ್ಷ ಕಿರಣ ಬೀರುತ್ತದೆ. ಆದರೆ ಸ್ವಭಾವೋಕ್ತಿಯ ದೌರ್ಬಲ್ಯ ಕಾದಿದೆ.

ಇನ್ನುಳಿದ ಕವನಗಳ ಬಗ್ಗೆ ಹೆಚ್ಚಿಗೆ ಹೇಳುವಂಥದ್ದೇನಿಲ್ಲ. ಕವನಕ್ಕೂ ಲಿಖಿತ ಭಾಷಣಕ್ಕೂ ವ್ಯತ್ಯಾಸ ಗೊತ್ತಿಲ್ಲದೆ ಅವು ಹುಟ್ಟಿವೆ.

ತುಂಗಾ ತರಂಗ : (ಪ್ರಧಾನ ಸಂಪಾದಕರು) ಆರ್. ಭರಮಲಿಂಗಪ್ಪ

ಈ ರೀತಿಯ ಸಂಕಲನಗಳನ್ನು ನೋಡಿದಾಗ ಕಾವ್ಯವಿಮರ್ಶಕನ ಕಷ್ಟದ ಬಗ್ಗೆ ಯಾರಿಗಾದರೂ ಸಹಾನುಭೂತಿ ಮೂಡುತ್ತದೆ. ಚರಿತ್ರೆ, ಅರ್ಥಶಾಸ್ತ್ರ, ಭೌತಶಾಸ್ತ್ರ ಮುಂತಾದುವುಗಳಲ್ಲಿ ಈ ಬಗೆಯ ಧೈರ್ಯ ಕಡಿಮೆ. ಯಾವುದೇ ರೀತಿಯ ಸಿದ್ಧತೆ ಗಾಢ ಶ್ರಮ ಇಲ್ಲದೇ ಇಲ್ಲಿಯ ಕವನಗಳು ಹುಟ್ಟುತ್ತವೆ. ಕಾಗದಗಳನ್ನು ಬರೆಯುವುದು ಮಾತ್ರ ಸಂಪಾದಕರ ಕೆಲಸ. ಈ ಮಾತುಗಳು ಕೊಂಚ ಕಟುವೆಂದು ತೋರಿದರೂ, ಇಂಥ ನಿಷ್ಠುರತೆ ಕಾವ್ಯಕ್ಷೇತ್ರದ ಸೌಷ್ಟವವನ್ನು ಕಾಪಾಡಿಕೊಳ್ಳುವುದಕ್ಕೆ ಅನಿವಾರ್ಯ ಎಂದು ನನ್ನ ನಂಬಿಕೆ. ಕವನದ ಬಗ್ಗೆ ಇಲ್ಲಿ ಕವಿಗಳೊಬ್ಬರ ತಿಳುವಳಿಕೆಯನ್ನು ನೋಡಬಹುದು.

ಹಾಳೆಯ ಈ ಕೊನೆಯಿಂದ
ಆ ಕೊನೆಗೂ ಬರೆದರೆ
ಗದ್ಯ
ಅರ್ಧರ್ದ ಬರೆದರೆ
ಪದ್ಯ ! ! !

ಇಡೀ ಸಂಕಲನದ ಮೇಲೆ ಅತ್ಯಂತ ಅರ್ಥಪೂರ್ಣ ಟೀಕೆಯೆಂದರೆ ಈ ಸಾಲುಗಳೇ.

ಭರವಸೆ : ವಿವಿಧ ಕವಿಗಳು

ಸೆಂಟ್ ಜೋಸೆಫ್ ಕಾಮರ್ಸ್ ಕಾಲೇಜಿನ ಸಂಘ ನಡೆಸಿದ ಕವಿತಾ ಸ್ಪರ್ಧೆಯಲ್ಲಿ ಆಯ್ಕೆಗೊಂಡ ಕವಿತೆಗಳ ಸಂಕಲನ ಇದು. ಇಂಥ ಕೃತಿಗಳಲ್ಲಿ ಸಹಜವಾಗಿ ಕಾಣುವ ಅತಿಭಾವುಕತೆ, ಬಂಧದ ಕಡೆಗೆ ನಿರ್ಲಕ್ಷ್ಯ, ದಟ್ಟ ಪ್ರಭಾವಗಳೆಲ್ಲವೂ ಇಲ್ಲಿ ಕೂಡಾ ಕಾಣುತ್ತವೆ.

ಇಡೀ ಕೃತಿಯಲ್ಲಿ ಕೆ.ಸಿ. ಪ್ರದೀಪ್ ಕುಮಾರ್ ಎಂಬ ಕವಿಯ ಕವನಗಳು ಸಾಕಷ್ಟು ಸ್ವಾರಸ್ಯಕರವಾಗಿವೆ. ಈಗಿನ ಕಾಲೇಜು ವಿದ್ಯಾರ್ಥಿಯ ಸಂವೇದನೆಯನ್ನು ಇದು ಹೇಳುತ್ತವೆ. "ಜೆ.ಪಿ". "ಹದಿನಾರು", "ನೆನಪುಗಳು" ಮುಂತಾದ ಕವನಗಳು ಅನೇಕ ಕಡೆ ಕಾವ್ಯದ ಕ್ಲೀಷೆಗಳನ್ನು ಹೊಂದಿದೆಯಾದರೂ ಕವಿ ಕಾವ್ಯಕ್ಕೆ ಹತ್ತಿರವಿದ್ದಾರೆ ಎಂದು ಹೇಳುತ್ತವೆ.

"ಒಂದು ಭಯಂಕರ ಕಾಡು", "ಸುಖಗಳೇ ಹಾಗೆ", "ಧರ್ಮವೃಕ್ಷ", "ಭಾವ ಚಿತ್ರ" ಕವನಗಳ ಕೃತಿಯ ಇತರ ಯಶಸ್ವೀ ಕವನಗಳು. ಇದರ ಕರ್ತೃಗಳ ಕಾವ್ಯ ಗಾಂಭೀರ್ಯ ಮೆಚ್ಚುಗೆ ತರಿಸುವಂಥದು. ಮೌನ–ಎಂಬ ಕವನ ಕೂಡಾ ಸಾಕಷ್ಟು ಜೀವಂತಿಕೆ ಹೊಂದಿದೆ. ಆದರೆ, ಒಟ್ಟಾರೆಯಾಗಿ ಕಾವ್ಯಶಿಲ್ಪಕ್ಕೆ ಸಂಬಂಧಿಸಿದಂತೆ ಇಡೀ ಸಂಕಲನ ತಾರ್ಕಿಕ ಬೆಳವಣಿಗೆಗಳ ನವ್ಯಕಾವ್ಯದ ವಲಯದಲ್ಲೇ ಇದೆ ಎಂಬುದು ಸ್ವಲ್ಪ ಚಿಂತೆ ಹುಟ್ಟಿಸುವ ಸಂಗತಿ.

ಸಿಂಪಿಯೊಡೆದ ಮುತ್ತುಗಳು : (ಸಂ) ಪ್ರಭಾಕರ ಬಿಳೂರ

ಈ ಸಂಕಲನದಲ್ಲಿ ಒಂದಾದರೂ ಒಳ್ಳೆಯ ಕವನವನ್ನು ಹುಡುಕಿ ತೆಗೆಯಲಾಗಲಿಲ್ಲ. ಸಾಹಿತ್ಯಕ ಕೇಂದ್ರಗಳಿಂದ ದೂರವಿರುವ ಸಣ್ಣ ಪುಟ್ಟ ಊರುಗಳಲ್ಲಿ ಕಾವ್ಯದ ಬಗ್ಗೆ ಇರುವ ಈ ಕಲ್ಪನೆ, ಪ್ರಯೋಗಗಳನ್ನು ಯಾರಾದರೂ ಗಂಭೀರವಾಗಿ ಅಧ್ಯಯನ ನಡೆಸಿದರೆ ಒಳ್ಳೆಯ ಸಮಾಜಶಾಸ್ತ್ರೀಯ ವಿಮರ್ಶೆಯಾದೀತು. ಮತ್ತೆ ಕಾವ್ಯ ಪರಂಪರೆಯೊಂದರೆ ಜೊತೆಗಿನ ಸಂಬಂಧದ ಅನಿವಾರ್ಯತೆಯನ್ನು ಈ ಸಂಕಲನ ಕೂಡಾ ಸೂಚಿಸುತ್ತದೆ. ಸಂಸ್ಕೃತಿಯೊಂದು ತನ್ನನ್ನು ಸೃಷ್ಟಿಸಿರುವ ವ್ಯವಸ್ಥೆಯೊಂದನ್ನು

ರಕ್ಷಿಸಲು ನೀಡುವ ಪರಿಕಲ್ಪನೆಗಳನ್ನು ಇಲ್ಲಿಯ ಕವನಗಳು ಅನಾಮತ್ತಾಗಿ ಎತ್ತಿಕೊಂಡಿದೆ. ಹೀಗಾಗಿ, ಈ ಕವನಗಳನ್ನು ಓದುವಾಗ ನಿಮಗೆ ದಿನನಿತ್ಯ ಜೀವನದಲ್ಲಿ, ಎಲ್ಲ ಕಡೆಗೆ ಪರಿಚಿತವಾಗಿರುವ ತಾತ್ವಿಕತೆಯನ್ನು ಕಾಣುತ್ತೀರಿ.

ದಿನನಿತ್ಯದ ಬದುಕಿನ ಈ ಪದರಗಳನ್ನು ಕತ್ತರಿಸಿ ಬೆಳೆದಾಗ ತಾನೇ ಸಾಹಿತ್ಯ ಹುಟ್ಟುವುದು ! ಅದಾಗದಿರುವುದರಿಂದಲೇ ಇವುಗಳನ್ನು ಓದುವುದು ಕಷ್ಟ.

ಕುಟುಂಬ ಗಾನ : ಕುಟುಂಬ ಕಲ್ಯಾಣ ಗೀತೆಗಳ ಸಂಗ್ರಹ

ನಿರ್ದಿಷ್ಟ ಉದ್ದೇಶವೊಂದಕ್ಕೆ, ಸರ್ಕಾರಿ ಉದ್ದೇಶಕ್ಕಾಗಿ ಕೂಡಾ ಕಾವ್ಯ ಬಳಕೆಯಾಗಿರುವುದು ಚರಿತ್ರೆಯಲ್ಲಿ ಹೊಸದೇನಲ್ಲ. (ಜಾಹೀರಾತಿಗಾಗಿಯೇ ಕಾವ್ಯ ಬರೆಯುತ್ತೇನೆ ಎಂದು ಒಮ್ಮೆ ಮಯಕೋವಸ್ಕಿ ಬೆದರಿಕೆ ಹಾಕಿದ್ದ).

ಇಂಥ ಪ್ರಚಾರ ಕವನಗಳು ಸಾಮಾನ್ಯವಾಗಿ ಹಾಡುಗಳ ರೂಪದಲ್ಲೆ ಇರುತ್ತವೆ. ಈ ಕೃತಿಯಲ್ಲಿ ಕೂಡಾ ಸಿಂಪಿಲಿಂಗಣ್ಣ, ರಾಘವ, ಗೌರೀಶ ಕಾಯ್ಕಿಣಿ, ಬಾಳಪ್ಪ ಹುಕ್ಕೇರಿ, ಮಾ. ನಾ. ಚೌಡಪ್ಪ ಮುಂತಾದ ಪ್ರಸಿದ್ಧ ಲೇಖಕರ ಹಾಡುಗಳಿವೆ. ಅದರಲ್ಲೂ ಹುಕ್ಕೇರಿ, ಮಾ. ನಾ. ಚೌಡಪ್ಪ ಅವರ ಹಾಡುಗಳು ಅತ್ಯಂತ ವ್ಯಾಪಕ ಜನಪ್ರಿಯತೆಯನ್ನು ಪಡೆಯಬಲ್ಲ ಅಂಶಗಳನ್ನು ಹೊಂದಿವೆ.

ಕುವೆಂಪು ಅವರ ಒಂದು ಕವನವೂ ಇಲ್ಲಿ ಸೇರಿದೆ.

ಬಂಡಾಯದ ಬಿಸಿಯುಸಿರು : ಬೆ. ಕಾ. ಮೂರ್ತೀಶ್ವರಯ್ಯ, ಎಲ್. ರಂಗನಾಥ

ಸಮಕಾಲೀನ ಸಾಹಿತ್ಯದ ಪ್ರಭಾವಶಾಲೀ ಚಳುವಳಿಯಿಂದ ಬಂಡಾಯ ಸಾಹಿತ್ಯ ಚಳುವಳಿಯ ಚೌಕಟ್ಟಿನಲ್ಲಿ ಬರೆಯುತ್ತಿರುವ ಕವಿಗಳ ಸಂಕಲನ ಇದು. ತೀರಾ ನಿರ್ಲಿಪ್ತತೆಯಿಂದ ಹೇಳಬೇಕೆಂದರೆ, ನಿರಾಸೆ ಹುಟ್ಟಿಸುವ ಕೃತಿ ಇದು. ಇದಕ್ಕೆ ಎರಡು ಕಾರಣ. ಒಂದು ಸೃಜನಶೀಲತೆ ಮತ್ತು ರಾಜಕೀಯಪ್ರಜ್ಞೆ ಇವೆರಡರ ನಡುವಿನ ಸಂಬಂಧವನ್ನು ಡೈಲೆಕ್ಟಿಕಲ್ ಆಗಿ ಬಿಡಿಸಿಕೊಳ್ಳಲಾಗ ಬಹುಪಾಲು ಕವಿಗಳ ಸೀಮಿತತೆ. ಇನ್ನೊಂದು, ಕಾವ್ಯ ಸಂಪ್ರದಾಯ, ರಾಜಕೀಯ ಪ್ರಜ್ಞೆ ಎರಡರ ಬಗ್ಗೆ ತಾತ್ವಿಕ ಸಿದ್ಧತೆ ಇಲ್ಲದೆ ಈ ಕೃತಿ ತಂದಿರುವ ಸಂಪಾದಕರ ಸೀಮಿತತೆ.

ಸಾಮಾನ್ಯ ಗ್ರಹಿಕೆಯ ಅಪಾಯಕಾರೀ ಹಿಡಿತಕ್ಕೆ ಇಲ್ಲಿಯ ಕವಿಗಳು ಸಿಕ್ಕಿ ಬಿದ್ದಿದ್ದಾರೆ. ಆಧುನಿಕ ಸಂಸ್ಕೃತಿ ತನ್ನ ಸಮೂಹ ಮಾಧ್ಯಮಗಳು, ಸಂಸ್ಕೃತಿ ನಿರ್ಮಾಣದ ಪ್ರಕ್ರಿಯೆಯಲ್ಲಿ ಕೆಲವು ತೋರಿಕೆಯ ವಾಸ್ತವವನ್ನು ಮೂಲಭೂತ ವಾಸ್ತವ ಎಂದು ಹೇರುತ್ತಾ ಬರುತ್ತದೆ. ಆದ್ದರಿಂದ ಕ್ರಾಂತೀಕಾರಿ ಅಭಿವ್ಯಕ್ತಿಯ ಮೊದಲ ಕೆಲಸವೆಂದರೆ ಈ ಸಾಮಾನ್ಯ ಗ್ರಹಿಕೆಯ ಆತ್ಮತೃಪ್ತಿ, ಭರವಸೆಯನ್ನು ನಾಶಮಾಡಿ ಹೊಸಬಗೆಯ

ಬೌದ್ಧಿಕ ತೊಡಗುವಿಕೆಗೆ ಪ್ರಜ್ಞೆಯನ್ನು ಅಣಿಗೊಳಿಸುವುದು. ಆದರೆ, ಈ ದೃಷ್ಟಿಯಿಂದ ಈ ಸಂಕಲನದ ಪೊಳ್ಳುತನ ನಿರಾಶೆ ಹುಟ್ಟಿಸುವಂಥದು. ಕಾವ್ಯಬಂಧ ಮತ್ತು ರಾಜಕೀಯ ಪ್ರಜ್ಞೆಗಳ ನಡುವೆ ಯಾವುದೇ ರೀತಿಯ ಮುಖಾಮುಖಿಯನ್ನು ನಡೆಸದೆ ಬಾಲಿಶವಾದ ರೀತಿಯಲ್ಲಿ ಬಹಳ ಕವನಗಳು ಹುಟ್ಟಿವೆ. ಇಲ್ಲಿರುವ ಕವಿಗಳ ಉದ್ದೇಶದ ಬಗ್ಗೆ ಶಂಕಿಸುವ ಮಾತಿಲ್ಲ. ಇದು ಈಗ ನಮ್ಮ ಕೆಳವರ್ಗ, ಮಧ್ಯಮ ವರ್ಗಗಳ ತರುಣರ ಪ್ರಜ್ಞಾವಂತ ಗುಂಪು ಸಹಜವಾಗಿ ಈ ಮೌಲ್ಯಗಳಿಗೆ ಪ್ರತಿಕ್ರಿಯಿಸುತ್ತದೆ, ಪ್ರೀತಿಸುತ್ತದೆ. ಆದರೆ, ಆ ಮೂಲಕ ಚಿಂತನೆ ಮತ್ತು ಸಾಹಿತ್ಯಕ್ಕೆ ಇಳಿಯುವವರ ಕ್ರಿಯೆಗಳ ಅಂತಿಮ ಪರಿಣಾಮ ಬೇರೆ ರೀತಿಯದಾಗಲು ಸಾಧ್ಯವಿದೆ. ಎಲ್ಲ ಮಾರ್ಕ್ಸ್‌ವಾದಿಗಳೂ ಡೈಲೆಕ್ಟಿಕಲ್ ಚಿಂತನೆಯಲ್ಲಿ ಗಮನಕೊಡುವ ಉದ್ದೇಶ ಮತ್ತು ಪರಿಣಾಮಗಳ ನಡುವೆ ಸಂಬಂಧದ ದೃಷ್ಟಿಯಿಂದ ಹೇಳುವುದಾದರೆ ಇಲ್ಲಿಯ ಅಂತಿಮ ಪರಿಣಾಮದ ಬಗ್ಗೆ ಸಮಾಜವಾದಿಗಳು ಅಷ್ಟು ಉತ್ಸುಕರಾಗ ಬೇಕಾದ ಅಗತ್ಯವಿಲ್ಲ.

ಇನ್ನೊಂದು ಮುಖ್ಯ ಅಂಶದ ಬಗ್ಗೆ ಕೂಡಾ ಇಲ್ಲಿ ಸೂಚಿಸಬೇಕಾದ ಅಗತ್ಯವಿದೆ. ಅದು ದುಡಿಯುವವರ್ಗದ ಆಡುನುಡಿಯನ್ನು ಕಾವ್ಯದಲ್ಲಿ ಯಥಾವತ್ತಾಗಿ ಬಳಸಿಕೊಳ್ಳುವ ರೀತಿಯನ್ನು ಕುರಿತದ್ದು. ಇಪ್ಪತ್ತನೆ ಶತಮಾನದಲ್ಲಿ ಮಾರ್ಕ್ಸ್‌ವಾದೀ ಚಿಂತನೆಗೆ ಹೊಸಶಕ್ತಿಯನ್ನು ತಂದ ಅದಾನೊ ತನ್ನ "ಮಿನಿಯಾ ಮೊರಾಲಿಯ" ಕೃತಿಯ ಟಿಪ್ಪಣಿಯೊಂದರಲ್ಲಿ ಈ ಅಂಶವನ್ನು ಮಾರ್ಮಿಕವಾಗಿ ಚರ್ಚಿಸುತ್ತಾನೆ. ಚಾರಿತ್ರಿಕ ಕಾರಣಕ್ಕಾಗಿ ದುಡಿಯುವವರ್ಗ (Working Class)ದ ಭಾಷೆಯ ಮೇಲೆ ಆಳವಾಗಿ ಮುದ್ರೆಯೊತ್ತಿರುವ ಅಂಶವೆಂದರೆ (Domination) ಹೀಗಾಗಿ, ಆ ಭಾಷೆಯ ಗುಣಗಳು ಕ್ರಾಂತೀಕಾರಿ ನಿರ್ವಹಣೆಗೆ ಅಡ್ಡಿಯನ್ನುಂಟು ಮಾಡುವಂಥವೇ. ಆದರೆ, ಸಮಾಜದ ಶಿಷ್ಟಭಾಷೆ ಪ್ರತಿಷ್ಠಿತವರ್ಗದ ಅಗತ್ಯತೆಗಳಲ್ಲಿ ಬೆಳೆದರೂ, ಅಂತಿಮವಾಗಿ ಅದು ಅದಕ್ಕೇ ತಿರುಗಿ ಬೀಳುತ್ತದೆ. ಹೀಗಾಗಿ, ಅದರ ಸ್ವಾತಂತ್ರ್ಯ ಅದರ ಮೂಲಭಲವಾಗುತ್ತದೆ ಎಂಬುದು ಅದಾರ್ನೊ ವ್ಯಾಖ್ಯಾನದ ತಿರುಳು. ಮಾರ್ಕ್ಸ್‌ವಾದೀ ಚಿಂತನೆಗೆ ಈ ನಿಲುವು ಸಹಜವಾದದ್ದು ಕೂಡಾ. ಪ್ರತಿಷ್ಠಿತ ವರ್ಗದ ಅರ್ಥಶಾಸ್ತ್ರ, ತತ್ವಜ್ಞಾನಗಳು ಅಂತಿಮವಾಗಿ ತಿರುಗಿಬಿದ್ದ ಹಾಗೆ. ಈ ದೃಷ್ಟಿಯಿಂದ ಈ ರೀತಿಯ ಕವನಗಳ ಅಂತಿಮ ಪರಿಣಾಮದ ಬಗ್ಗೆ ನಾವು ಮತ್ತಷ್ಟು ಸೂಕ್ಷ್ಮವಾಗಿ ಯೋಚಿಸುವ ಅಗತ್ಯವಿದೆ. ಸಿದ್ಧಲಿಂಗಯ್ಯನವರ ಈ ರೀತಿಯ ಕವನಗಳ ಬಗ್ಗೆ ಪುನರಾಲೋಚಿಸುವ ಅಗತ್ಯವಿದೆ. ಆದರೆ, ಇದರರ್ಥ ಶಿಷ್ಟ ಭಾಷೆಯನ್ನೆ ಕಾವ್ಯದಲ್ಲಿ ಬಳಸಬೇಕಾದ ಹಾಸ್ಯಾಸ್ಪದ ನಿಲುವಲ್ಲ. ಸ್ವಾತಂತ್ರವನ್ನು ಮೂಲಭಲವನ್ನಾಗುಳ್ಳ ಭಾಷೆ ಸಿಟ್ಟನ್ನೂ ಮೂಲಭಲವನ್ನಾಗಿ ಉಳ್ಳ ಒಂದು ಕಾವ್ಯ ಭಾಷೆಯ ಸಿದ್ಧತೆ ಇವೆರಡನ್ನು ಬೆಸೆದು ಹೊಸಕಾವ್ಯ ಭಾಷೆ ನಿರ್ಮಾಣವಾಗಬೇಕಾಗಿದೆ.

ಅಂತಿಮವಾಗಿ, ಬಂಧವೇ ರಾಜಕೀಯವಾದದ್ದು ಎಂಬ ಸರಳ ಸತ್ವದ ಕಡೆಗೆ ಇಲ್ಲಿಯ ಕವಿಗಳಿಗೆ ಗಮನವಿಲ್ಲ. ವೃತ್ತಪತ್ರಿಕೆಯ ಬರವಣಿಗೆಗಳಂತೆ ಕವನಗಳು

ಕಾಣುವುದು ಇದೇ ಕಾರಣಕ್ಕೆ. ಕಾಳೇಗೌಡ ನಾಗವಾರರ ಕವನ "ಕರಾವಳಿಯಲ್ಲಿ ಗಂಗಾಲಗ್ನ" ಈ ದೃಷ್ಟಿಯಿಂದ ಇಡೀ ಕೃತಿಯಲ್ಲಿ ಭಿನ್ನವಾಗಿ, ಚೇತೋಹಾರಿಯಾಗಿ ಕಾಣುತ್ತದೆ. ಆದರೆ, ಒಟ್ಟಾರೆಯಾಗಿ ಆಧುನಿಕ ಕನ್ನಡ ಕಾವ್ಯಪರಂಪರೆಯಲ್ಲಿ ಪು.ತಿ.ನ.ರಿಗಿಂತ ಭಿನ್ನವಾದ ಪ್ರಯೋಗವೇನು ಇದು ಎಂಬ ಪ್ರಶ್ನೆಗೆ ನಾವು ಉತ್ತರ ಹುಡುಕಬೇಕಾಗಿದೆ. ಈ ಚಳುವಳಿಯ ಆಶಯವನ್ನು ಅತ್ಯಂತ ಸಮರ್ಥವಾಗಿ ಅಭಿವ್ಯಕ್ತಿಸಿರುವ ಇನ್ನು ಅನೇಕ ಮಹತ್ವದ ಕವನಗಳೇ ಇಲ್ಲಿಲ್ಲ. ಹೀಗಾಗಿ, ಹುಲಿಕಲ್ ನೆತ್ತಿಯೇ ಇರದೆ ಮಲೆಗಳಲ್ಲಿ "ಮದುಮಗಳು" ಕೃತಿಯನ್ನು ಕುರಿತು ಹೇಳಿದಹಾಗಿದೆ. ಈ ಕೃತಿಗೆ ಮುನ್ನುಡಿಯೊಂದು ಇದೆ. ರಾಮಚಂದ್ರಪ್ಪ ನವರಿಂದ. ತೀರಾ ತೆಳು ಮತ್ತು ಹಾಸ್ಯಾಸ್ಪದ ಹೇಳಿಕೆಗಳಿಂದ ತುಂಬಿರುವ ಈ ಬರವಣಿಗೆ ಸಮಾಜವಾದೀ ಸಾಹಿತ್ಯ ಚಳುವಳಿಗೆ ಗೌರವ ತರುವಂಥದಲ್ಲ. ಕನ್ನಡ ಸಂಸ್ಕೃತಿಯಲ್ಲಿ ಹೊಸ ಅಧ್ಯಾಯವನ್ನು ತೆರೆಯ ಹೊರಟಿರುವ ಎಲ್ಲ ಗೆಳೆಯರೂ ತಮ್ಮ ಜವಾಬ್ದಾರಿಗಳ ಬಗ್ಗೆ ಅಪಾರ ಎಚ್ಚರವನ್ನು, ಸಿದ್ಧತೆಯನ್ನು ಬೆಳೆಸಬೇಕಾದ ಅನಿವಾರ್ಯತೆಯನ್ನು ಈ ಸಂಕಲನ ಸೂಚಿಸುತ್ತದೆ, ಆ ಗುಣಗಳ ಗೈರುಹಾಜರಿ ಯಿಂದಾಗಿ. ಹೀಗಾಗಿ, ಅರ್ಥಪೂರ್ಣ ಬಂಡಾಯ ಕಾವ್ಯ ಸಂಕಲನವೊಂದನ್ನು ತರುವ ಕೆಲಸ ಇನ್ನೂ ಉಳಿದೇ ಇದೆ.

ಈ ವರ್ಷದ ಒಂದು ಗಮನಾರ್ಹ ಕೊರತೆ ಎಂದರೆ ಬೇರೆ ಭಾಷೆಗಳ ಕಾವ್ಯದ ಅನುವಾದ ಒಂದೂ ಬಂದಿಲ್ಲದೇ ಇರುವುದು. ಸಂಖ್ಯೆಯ ದೃಷ್ಟಿಯಿಂದ ಅದನ್ನು ಮರೆಸುವಷ್ಟು ಸಮೃದ್ಧತೆ ಈ ವರ್ಷ ಕೂಡಾ ಕಾಣುತ್ತಿದೆಯಾದರೂ, ಅಂಥ ಶಕ್ತಿ ಹೊಸ ಕವಿಗಳು ಯಾರೂ ಬಂದಿಲ್ಲವೆನ್ನುವುದು ಕಳವಳದ ಸಂಗತಿ. ಎಲ್ಲಕ್ಕಿಂತ ಹೆಚ್ಚಾಗಿ–ವೆಂಕಟೇಶಮೂರ್ತಿಯವರನ್ನು ಹೊರತು–ತರುಣ ಕವಿಗಳು ಕನ್ನಡ ಕಾವ್ಯ ಪರಂಪರೆಯ ವೈವಿಧ್ಯದಿಂದ ಏನನ್ನೂ ಕಲಿಯುತ್ತಿಲ್ಲವೆಂಬುದು.

ಇನನ್ನು ಮುಂದಾದರೂ ಪರಂಪರೆ ಮತ್ತು ಪ್ರಯೋಗಗಳ ಅರ್ಥಪೂರ್ಣ ಮುಖಾಮುಖಿ ಆಗಲೆಂದು ಆಶಿಸೋಣ.

# ನಾಟಕ

**ಕೆ. ಮರುಳಸಿದ್ದಪ್ಪ**

ಈ ಸಮೀಕ್ಷೆಯಲ್ಲಿ ಮುವ್ವತ್ತುಮೂರು ಕೃತಿಗಳನ್ನು ಪರಿಶೀಲಿಸಲಾಗಿದೆ. ಅನುವಾದ ಮತ್ತು ಸ್ವತಂತ್ರ ನಾಟಕಗಳು ಸಮ ಸಮನಾದ ಸಂಖ್ಯೆಯಲ್ಲಿ ಬಂದಿರುವುದು ಇಲ್ಲಿ ಗಮನಿಸಬಹುದಾದ ಒಂದು ಅಂಶ. ಪೂರ್ಣಾವಧಿ ನಾಟಕಗಳಿಗಿಂತ ಏಕಾಂಕಗಳದೇ ಮೇಲುಗೈಯಾಗಿರುವಂತಿದೆ. ಪ್ರಕಟಿತ ನಾಟಕಗಳ ಸಮೃದ್ಧಿಯನ್ನು ಈ ವರ್ಷದ ಕನ್ನಡ ರಂಗಭೂಮಿಯ ಚಟುವಟಿಕೆಯೊಂದಿಗೆ ತಾಳೆಹಾಕಿ ನೋಡಿದಾಗ ಒಂದಕ್ಕೊಂದಕ್ಕೆ ಸಂಬಂಧವೇ ಕಾಣುವುದಿಲ್ಲ. ರಂಗಚಟುವಟಿಕೆಯಲ್ಲಿ ಕಂಡುಬಂದಿರುವ ಉತ್ಸಾಹ ಸಮೃದ್ಧಿಗೆ ಸಮನಾಗಿ ನಾಟಕಗಳು ಬಂದಿಲ್ಲ. ಅನುವಾದಗಳನ್ನು ಹೊರತುಪಡಿಸಿ, ಕೇವಲ ಸ್ವತಂತ್ರ ನಾಟಕಗಳ ದೃಷ್ಟಿಯಿಂದ ಆಲೋಚಿಸಿದರೆ ಈ ಮಾತು ಸ್ಪಷ್ಟವಾಗಿ ಗೋಚರವಾಗುತ್ತಿದೆ. ಭಾರತೀಯ ಭಾಷೆಗಳಿಂದ ಅನುವಾದಗಳು ಈಗೀಗ ಹೆಚ್ಚು ಸಂಖ್ಯೆಯಲ್ಲಿ ಬರುತ್ತಿರುವುದು ಮತ್ತೊಂದು ಗಮನಾರ್ಹ ಸಂಗತಿಯೆನ್ನಬಹುದು. ನಗೆ ನಾಟಕಗಳು ಇಲ್ಲವೇ ಇಲ್ಲವೆನ್ನುವಂತೆ ಕಡಿಮೆಯಾಗಿಬಿಟ್ಟಿರುವುದು ಆಶ್ಚರ್ಯಕರ ವಿಚಾರವಾಗಿದೆ. ವಸ್ತು ದೃಷ್ಟಿಯಿಂದ ಸಾಮಾಜಿಕ ವಸ್ತುವಿಗೆ ಹೆಚ್ಚೀ ಪ್ರಾಶಸ್ತ್ಯ ದೊರೆತಿದೆ. ವರ್ಗ ಸಂಘರ್ಷ, ಜಾತಿ ಸಮಸ್ಯೆಯಂತಹ ಸಮಕಾಲೀನ ವಿಚಾರಗಳ ವಿಶ್ಲೇಷಣೆಗೆ ಮಹತ್ವ ಬಂದಿದೆ. ಅನುವಾದಗಳಲ್ಲಿಯೂ ಈ ಬಗೆಯ ಕೃತಿಗಳೇ ಹೆಚ್ಚು ಸಂಖ್ಯೆಯಲ್ಲಿರುವುದು ಆಕಸ್ಮಿಕವೇನಲ್ಲ. ನಮ್ಮ ಲೇಖಕರ ಚಿಂತನೆಗಳತ್ತ ಇದೊಂದು ಸ್ಪಷ್ಟ ದಿಕ್ಸೂಚಿಯಾಗಿರುವಂತಿದೆ. ಚಂದ್ರಶೇಖರ ಕಂಬಾರರನ್ನು ಬಿಟ್ಟರೆ, ಈ ವರ್ಷ ನಮ್ಮ ಪ್ರಮುಖ ನಾಟಕಕಾರರಾರೂ ಹೊಸ ನಾಟಕಗಳನ್ನು ಪ್ರಕಟಿಸಿಲ್ಲ. ಇಷ್ಟು ಹಿನ್ನಲೆಯೊಂದಿಗೆ ಒಂದೊಂದೂ ನಾಟಕಗಳ ಪ್ರತ್ಯೇಕ ಪರಿಶೀಲನೆಗೆ ತೊಡಗಬಹುದಾಗಿದೆ.

ನಾಯೀಕತೆ : ಚಂದ್ರಶೇಖರ ಕಂಬಾರ

ಗ್ರಾಮೀಣ ಪರಿಸರದ ಬದುಕನ್ನು ವಸ್ತುವಾಗುಳ್ಳ ಈ ನಾಟಕ ಕಂಬಾರರ ದಾಖಲೆಗಳಲ್ಲಿ ವಿಶಿಷ್ಟವಾದುದು. ಬಡವೆಯಾದ ಸುಂದರ ವಾದ ಹುಡುಗಿಯೊಬ್ಬಳು ತನ್ನ ತಾಯಿ ತಂದೆಗಳನ್ನು ಧಿಕ್ಕರಿಸಿ ಹಣದ ಆಮಿಷವನ್ನು ಗೆದ್ದು ಹಳ್ಳಿಯ ಶ್ರೀಮಂತನೊಬ್ಬನ ಸೊಕ್ಕು ಮುರಿಯುವ ಸರಳವಾದ ಕತೆಯನ್ನು ಕಂಬಾರರು ಅತ್ಯಂತ ಚೇತೋಹಾರಿಯಾಗಿ ನಿರೂಪಿಸಿದ್ದಾರೆ.

ಕಥೆಗಾರ ಮತ್ತು ಹಿಮ್ಮೇಳದ ನಡುವೆ ಜಗತ್ತಿನಲ್ಲಿ ಪ್ರೇಮ ದೊಡ್ಡದೇ, ಹಣ ದೊಡ್ಡದೇ-ಎಂಬ ಚರ್ಚೆಯಿಂದ ಆರಂಭವಾಗುವ ನಾಟಕ, ದೃಷ್ಟಾಂತಕ್ಕಾಗಿ ಕತೆಯೊಂದನ್ನು ಅಭಿನಯಿಸಿ, ಪ್ರೇಮವೇ ದೊಡ್ಡದೆಂದು ಸಾಬೀತು ಮಾಡುತ್ತದೆ. ಹಣವೇ ಪ್ರಧಾನವಾದ ಸಮಾಜದ ಅವನತಿಯ ಸ್ವರೂಪವನ್ನು ವಿವರಿಸುವಲ್ಲಿ ಕಂಬಾರರು ಕೆಲವು ಸ್ಪಷ್ಟ ನಿಲುವುಗಳಿಗೆ ಬದ್ಧರಾಗಿದ್ದಾರೆ. ಮೇಲು ನೋಟಕ್ಕೆ ರಂಜಕವಾಗಿ ಕಂಡರೂ ಆಳದಲ್ಲಿ ಕಟುವಾದ ವ್ಯಂಗ್ಯ-ಕಟಕಿಗಳನ್ನು ಹುದುಗಿಸಿ ಕೊಂಡಿರುವ ಮಾತಿನ ತೀವ್ರತೆಯಲ್ಲಿ ಅದನ್ನು ಕಾಣಬಹುದಾಗಿದೆ. ಸ್ನೇಹ, ಪ್ರೀತಿ, ವಿಧೇಯತೆ-ಎಲ್ಲವನ್ನೂ ಕೊಳ್ಳಲು ಸಾಧ್ಯವೆಂದು ನಂಬಿದ್ದ ಈ ನಾಟಕದ ಸಾಹ್ಕಾರ ಸೋಮಣ್ಣ, ಮಾರಲು ತಯಾರಾಗಿದ್ದ ದಾಸ-ಸಾವಂತ್ರಿ, ಇವರಿಗೆ ಪ್ರತಿಯಾಗಿ ನಿಲ್ಲುವ ಶಾರಿ, ನಾಗ, ನಾಯೀಮಗ-ಈ ಎಲ್ಲ ಪಾತ್ರಗಳೂ ಸುಸ್ಪಷ್ಟವಾಗಿ ಜೀವಂತ ವಾಗಿ ಮೂಡಿಬಂದಿವೆ. ಉಲ್ಲಾಸಕಾರಿಯಾದ ಸರಸಮಯ ಸಂಭಾಷಣೆಗಳು ರಂಜನೀಯ ನಾಟಕೀಯ ಸನ್ನಿವೇಶಗಳು, ಭಾವಮಯ ಹಾಡುಗಳು, ಕ್ರಿಯಾಪೂರ್ಣ ವಸ್ತುರಚನೆಯಿಂದಾಗಿ 'ನಾಯೀಕತೆ' ಅತ್ಯಂತ ಯಶಸ್ವಿ ರಂಗನಾಟಕವಾಗುತ್ತದೆ. ನಂಬಲರ್ಹತೆಯ ದೃಷ್ಟಿಯಿಂದ ವಿಚಾರಿಸಿದಾಗ ನಾಟಕದ ಮುಕ್ತಾಯ ಅಸಂಭವನೀಯ ವೆಂಬತ್ತಿದ್ದರೂ ಸಾಮಾಜಿಕ ಆಶಯದ ನೆಲೆಯಲ್ಲಿ ಅದು 'ಕಾವ್ಯನ್ಯಾಯ' ತತ್ವಕ್ಕನು ಸಾರವಾಗಿಯೇ ಇದೆ.

ಸಂಕೇತ, ಧಾರ್ಮಿಕ ವಿಧಿಗಳೇ ಮುಂತಾದ ಗೊಂದಲವಿಲ್ಲದೆ ಜನಪದ ರಂಗ ತಂತ್ರವನ್ನು ಕಥಾನಿರೂಪಣೆ ಮತ್ತು ಪಾತ್ರ ಪರಿಚಯಗಳಿಗೆ ಮಾತ್ರ ಬಳಸಿಕೊಂಡಿರು ವುದರಿಂದ ನಾಟಕದ ಸಾಮಾಜಿಕ ನಿಲುವು ಸ್ಪಷ್ಟಗೊಂಡಿದೆ. ವಸ್ತುರಚನೆ, ಪಾತ್ರ ಪೋಷಣೆ ಅಥವಾ ಸನ್ನಿವೇಶ ನಿರ್ಮಾಣಗಳಲ್ಲಿ ಅಸ್ಪಷ್ಟತೆಗೆ ಅವಕಾಶವಿಲ್ಲದ ಸರಳ ವಾದ ನಿರೂಪಣಾ ವಿಧಾನವನ್ನು ಕಂಬಾರರು ಅನುಸರಿಸಿರುವ ವಿರಳ ಬಗೆಯ ಉತ್ತಮ ನಾಟಕಗಳ ಸಾಲಿಗೆ ಈ ನಾಟಕವೂ ಸೇರುತ್ತದೆ.

ಕಾಡು ಕುದುರೆ : ಚಂದ್ರಶೇಖರ ಕಂಬಾರ

ಜಾನಪದ ಪರಿಸರದಲ್ಲಿಯೇ ರೂಪು ತಾಳಿರುವ ಈ ನಾಟಕ, "ನಾಯೀಕತೆ" ಗಿಂತ ತೀರಾ ಭಿನ್ನವಾದುದು. "ನಾಯೀಕತೆ"ಯಂತೆ ಇಲ್ಲಿಯೂ ಹೆಣ್ಣು-ಗಂಡಿನ ಪ್ರಣಯ ವ್ಯಾಪಾರವನ್ನೇ ವಸ್ತುವಾಗಿಸಿಕೊಂಡಿದ್ದರೂ ಅಲ್ಲಿರುವ ಸುಕುಮಾರತೆ ಇಲ್ಲಿಲ್ಲ. ಎಂತಹ ರೋಚಕ ಪ್ರಣಯ ಕತೆಯನ್ನೂ ಅದರ ಸಾಮಾಜಿಕ ಹಿನ್ನೆಲೆ ಯೊಂದಿಗೇ ನಿರೂಪಿಸಿರುವ ಕಂಬಾರರು ಇಲ್ಲಿ ಕೇವಲ ಲೈಂಗಿಕ ಪಾತಳಿಯಲ್ಲೇ ವಿಶ್ಲೇಷಿ ಸಿದ್ದಾರೆ. ಕಾಮದ ಅದಮ್ಯ ಗುಣವನ್ನು, ಸ್ವಚ್ಛಂದ ಪ್ರವೃತ್ತಿಯನ್ನು ಕಣ್ಣಿಗೆ

ಕಟ್ಟುವ ರೀತಿಯಲ್ಲಿ ಬಣ್ಣಿಸುವಂತೆ, ಹೆಣ್ಣು-ಗಂಡಿನ ಸಂಬಂಧದ ಸೂಕ್ಷ್ಮಗಳನ್ನು ಎಚ್ಚರದಿಂದ ಬಿಡಿಸಿ ತೋರಿಸುವುದಿಲ್ಲವಾದುದರಿಂದ, ಈ ನಾಟಕದ ಪಾತ್ರಗಳ ಅಂತರಂಗ ದರ್ಶನವೇ ಸಿಗುವುದಿಲ್ಲ. ಇಲ್ಲಿನ ಸಂಕೇತ, ಪ್ರತಿಮೆಗಳು ತಂತಾನೆ ಸುಂದರವಾಗಿದೆಯೆಂದರೂ ನಾಟಕದ ಕ್ರಿಯೆಯೊಂದಿಗೆ ಅರ್ಥಪೂರ್ಣ ಸಂಬಂಧವನ್ನು ಸ್ಥಾಪಿಸುವುದಿಲ್ಲ. ಲೋರ್ಕಾನ ನಾಟಕವೊಂದರ ಪ್ರೇರಣೆಯಿಂದ ಈ ನಾಟಕವನ್ನು ರಚಿಸಿರುವುದಾಗಿ ಹೇಳಿಕೊಂಡಿರುವ ನಾಟಕಕಾರರು ಕಥಾ ವಿವರದಲ್ಲಿ ಕೆಲವು ತೊಡಕುಗಳಿಗೆ ಸಿಲುಕಿಕೊಂಡಿರುವಂತಿದೆ. ಒಬ್ಬಳೇ ತಾಯಿಯ ಮೂವರು ಹೆಣ್ಣು ಮಕ್ಕಳಲ್ಲಿ ಹಿರಿಯವಳು ಮಾತ್ರ ತಂದೆಯ ಸ್ವಂತ ಮಗಳಾಗಿದ್ದು ಉಳಿದಿಬ್ಬರು ಜಾರ ಸೋದರಿಯರೆಂಬಂತೆ ಕಥಾರಚನೆಯಿದೆ. ಹಳ್ಳಿಯ ಹತ್ತೂ ಸಮಸ್ತರ ನೀತಿ ನಿಯಮಗಳ ಕಟ್ಟಳೆಯ ಉಸ್ತುವಾರಿಯ ಹೊಣೆ ಹೊತ್ತ ಗೌಡ್ತಿಯ ಪಾತ್ರ ಇದರಿಂದ ಸಂದಿಗ್ಧವಾಗಿಬಿಡುತ್ತದೆ.

ಅಪೂರ್ವ : ರಂ. ಶ್ರೀ. ಮುಗಳಿ

ಈ ಸಂಗ್ರಹದಲ್ಲಿರುವ ಮೂರು ನಾಟಕಗಳೂ ಸಮಕಾಲೀನ ಸಮಾಜದ ಮೂರು ವಿಭಿನ್ನ ಸ್ತರಗಳನ್ನು ಪ್ರತಿನಿಧಿಸುತ್ತಿವೆ. ಮಾಜಿ ಮಹಾರಾಜರುಗಳು ಗತಕಾಲದ ಅವಶೇಷಗಳಲ್ಲಿ ಹುಗಿದು ಹೋಗಿದ್ದು ತಮ್ಮ ಸುತ್ತಣ ಕಟುವಾಸ್ತವವನ್ನು ಎದುರಿಸಲಾಗದೆ ತತ್ತರಿಸುತ್ತಿರುವ ದುರಂತವನ್ನು ಚಿತ್ರಿಸುತ್ತಿರುವ "ಸೋಗಿನ ಸ್ತರಗಳು" ಈ ಸಂಕಲನದ ಉತ್ತಮಕೃತಿ. ರಾಜತ್ವವನ್ನು ಕಳೆದುಕೊಂಡಿದ್ದರೂ ರಾಜನ ಠೀವಿಯ ಸೋಗು ಹಾಕುವ ಮಹಾರಾಜ, ಆತನ ಹುಸಿ ವ್ಯಕ್ತಿತ್ವವನ್ನು ಹೊಟ್ಟೆಪಾಡಿಗಾಗಿ ಬೆಂಬಲಿಸುವ ದಿವಾಣ, ಆಪ್ತ ಕಾರ್ಯದರ್ಶಿ ಮುಂತಾದ ಪಾತ್ರವರ್ಗಕ್ಕೆ ಪ್ರತಿಯಾಗಿ ವಾಸ್ತವವನ್ನು ಒಪ್ಪಿಕೊಂಡು ಸಾಮಾನ್ಯನಂತೆ ಬದುಕಲೆಳಸುವ ರಾಜಕುಮಾರನ ಚಿತ್ರಣವಿದೆ. ಸಂಕೀರ್ಣವಾದ ಪಾತ್ರ ರಚನೆಯಲ್ಲಿ ನಾಟಕಕಾರರು ಸಂಪೂರ್ಣ ಯಶಸ್ಸನ್ನು ಪಡೆಯಲು ಸಾಧ್ಯವಿದ್ದಿದ್ದರೆ, ಇದೊಂದು ಶ್ರೇಷ್ಠ ದುರಂತ ನಾಟಕವಾಗುತ್ತಿತ್ತು. ದುರಂತ ನಾಯಕನಿಗಿರಬೇಕಾದ ಸಬಲ ವ್ಯಕ್ತಿತ್ವ ರಾಜಕುಮಾರನಿಗಿಲ್ಲ. ಆತ ಒಣ ಆದರ್ಶಗಳ ಬೆನ್ನು ಹತ್ತಿದಂತೆ ಹುಂಬನಂತಾಗಿದ್ದಾನೆ. ತನ್ನ ಜವಾನನ ಮಗಳನ್ನೇ ಪ್ರೀತಿಸಿ ಮದುವೆಯಾಗಬಯಸುವ ಅವನ ಆದರ್ಶ ಮತ್ತೊಂದು ಬಗೆಯ ಅವಾಸ್ತವವಾಗುತ್ತದೆ.

ಪಾತ್ರ ರಚನೆಯಲ್ಲಿ ಅತಿರಂಜಿತ ಭಾವನಾಮಯತೆಗೆ "ನಕ್ ನಕ್ ಸತ್ರು" ಒಂದು ಉತ್ತಮ ಉದಾಹರಣೆಯಾಗಿದೆ. ದುರಂತ ಪ್ರಹಸನವೊಂದರ ಸಾಧ್ಯತೆಯನ್ನು ಹೊಂದಿರುವ ಈ ನಾಟಕ ಪರಿಣಾಮದಲ್ಲಿ ಭಾವಾತಿರೇಕದ ನಾಟಕವಾಗುತ್ತದೆ.

"ಪಂಚಶೀಲ" ದಲ್ಲಿ ಸಮಕಾಲಿನ ರಾಜಕೀಯದ ನವಿರಾದ ವಿಡಂಬನೆಯಿದೆ. ಕೇಂದ್ರ ಪಾತ್ರವಾದ ಪಂಚಪ್ಪನ ಪಾತ್ರ ಕಲ್ಪನೆಯು ಸಂಕೀರ್ಣವಾಗಿದ್ದು, ಒಟ್ಟಾರೆ ವಸ್ತುರಚನೆಯಲ್ಲಿ ಉತ್ತಮ ಪರಿಣತಿಯನ್ನು ಕಾಣಬಹುದಾಗಿದೆ. ಪಂಚಪ್ಪನ ಬಂಗಲೆ ಪಂಚಶೀಲದ ಗಾಜಿನ ಮಾದರಿಯನ್ನು ಭಿಕ್ಷುಕನು ಪುಡಿಪುಡಿ ಮಾಡಲು ಮುನ್ನುಗ್ಗುವ ಕ್ರಿಯೆಯೊಂದಿಗೆ ನಾಟಕ ಮುಕ್ತಾಯಗೊಳ್ಳುವುದು ಧ್ವನಿಪೂರ್ಣ ವಾಗಿದೆ. ಭಿಕ್ಷುಕ–ಸೇವಂತಿಯರ ಕಥಾನಕದ ನಂಬಲರ್ಹತೆಯನ್ನು ಗಟ್ಟಿಗೊಳಿಸ ಸಿದ್ದರೆ ನಾಟಕದ ಪರಿಣಾಮ ಇನ್ನೂ ತೀವ್ರವಾಗುತ್ತಿತ್ತು.

ಪಂಚಮ ಮತ್ತು ನೆಲಸಮ : ಸಿದ್ಧಲಿಂಗಯ್ಯ

ದಲಿತವರ್ಗದಿಂದ ಬಂದಿರುವ ಪ್ರತಿಭಾವಂತ ತರುಣ ಲೇಖಕರಲ್ಲಿ ಒಬ್ಬರಾದ ಸಿದ್ಧಲಿಂಗಯ್ಯನವರ ಎರಡೂ ನಾಟಕಗಳು ಈಗಾಗಲೇ ಹಲವು ಪ್ರದರ್ಶನಗಳನ್ನು ಕಂಡಿವೆ. ಕೆಳವರ್ಗದ ಶೋಷಣೆಯ ಸ್ವರೂಪವನ್ನು ವಿಶ್ಲೇಷಿಸುವುದೇ ಎರಡೂ ನಾಟಕಗಳ ಗುರಿ. ಪಾತ್ರ ರಚನೆ ಮತ್ತು ದೃಶ್ಯ ನಿರ್ಮಾಣ ಕೌಶಲದಲ್ಲಿ ಸಿದ್ಲಲಿಂಗಯ್ಯ ನವರ ಪರಿಣತಿ ಉತ್ತಮ ಮಾದರಿಯದಾಗಿದ್ದು ಚುರುಕಾದ ಮಾತಿನ ಶೈಲಿ ಅದ ಕ್ಕೊಂದು ಮೆರುಗನ್ನಿತ್ತಿದೆ.

ಬೆನ್‌ಕಾಲ್ಡ್‌ವೆಲ್‌ನ "ಜಾಬ್" ನಾಟಕದ ತಂತ್ರವನ್ನು ಅನುಸರಿಸಿ ರಚಿಸಲಾಗಿರುವ "ಪಂಚಮ" ದಲ್ಲಿ ಹರಿಜನೋದ್ಧಾರ ಮಂಡಲಿಯವರು ಉದ್ಯೋಗಕ್ಕಾಗಿ ನಡೆಸುವ ಸಂದರ್ಶನವೊಂದನ್ನು ಕಲ್ಪಿಸಲಾಗಿದ್ದು, ಅಲ್ಲಿ ಬರುವ ಅಭ್ಯರ್ಥಿಗಳ ಮೂಲಕ ವಿದ್ಯಾವಂತ ಹರಿಜನರ ವಿವಿಧ ಧೋರಣೆಗಳನ್ನು ಮಾರ್ಮಿಕವಾಗಿ ವಿಶ್ಲೇಷಿಸಿದ್ದಾರೆ. ರಂಗ ಸೂಚನೆಗಳನ್ನು ಪಾತ್ರ ಪರಿಚಯಕ್ಕಾಗಿ ಬಳಸಿರುವ ವಿಧಾನ ಅರ್ಥಪೂರ್ಣ ವಾಗಿದೆ. ನಾಟಕ ನಿರ್ದೇಶನಕ್ಕೆ ಇದರಿಂದ ಒಳ್ಳೆಯ ಸೂಚನೆಗಳು ಸಿಗುತ್ತವೆ. ನಾಟಕದ ಆರಂಭದಿಂದಲೂ ಹಾಸ್ಯ ಮತ್ತು ವ್ಯಂಗ್ಯದ ಶೈಲಿಯನ್ನೇ ಅಳವಡಿಸಿಕೊಂಡಿದ್ದು ಮುಕ್ತಾಯದ ರೋಷದ ತಿರುವು ಪರಿಣಾಮಕಾರಿಯಾಗಿ ಮೂಡಿಬಂದಿಲ್ಲವೆನಿಸು ವಂತಿದೆ. ಸಂದರ್ಶಕ ಅಧಿಕಾರಿಯನ್ನು ಆಫೀಸಿನ ತುಂಬಾ ಓಡಾಡಿಸಿಕೊಂಡು ತನ್ನ ತಂಬೂರಿಯಿಂದ ಒಡೆದು ಚಚ್ಚುವ ಕ್ರಾಂತಿಕಾರಿ ಅಭ್ಯರ್ಥಿಯ ಕ್ರಿಯೆ ಪ್ರೇಕ್ಷ ರಲ್ಲಿ ನಗೆಯ ಪ್ರತಿಕ್ರಿಯೆಯನ್ನು ತರುವಂತಾಗುವುದು ಅಲ್ಲಿನ ಮಾತುಗಳಿಂದ ಅನಿವಾರ್ಯವಾಗುತ್ತದೆ.

"ಪಂಚಮ"ಕ್ಕಿಂತ "ನೆಲಸಮ" ಈ ದಿಸೆಯಲ್ಲಿ ಪಡೆದಿರುವ ಯಶಸ್ಸು ಗಮನಾರ್ಹವಾದುದು. "ಪಂಚಮದ" ಕ್ರಾಂತಿಕಾರಿಯ ಗೆಲುವಿಗಿಂತ "ನೆಲಸಮ"ದ ದಲಿತರ ದುರಂತ ಆಳವಾಗಿ ಮನಸ್ಸಿನಲ್ಲಿ ಬೇರೂರುತ್ತದೆ. ಸಮಕಾಲೀನ ಘಟನೆ

ಯೊಂದನ್ನು ಆಧರಿಸಿ ರಚಿಸಲಾಗಿರುವ ಈ ನಾಟಕದ ಪಾತ್ರ ಪರಿಪೋಷಣೆ ಮತ್ತು ಸಂಭಾಷಣೆಗಳಲ್ಲಿ ಯಕ್ಷಗಾನ ಸಂಪ್ರದಾಯದ ಧಾಟಿಯನ್ನು ಯಶಸ್ವಿಯಾಗಿ, ಅಳವಡಿಸಿಕೊಂಡಿದ್ದಾರೆ. ಇಲ್ಲಿನ ಹಾಡುಗಳೂ ಭಾವತೀವ್ರತೆಯಿಂದ ಕೂಡಿದ್ದು ದುರಂತದ ನೋವನ್ನು ಪರಿಣಾಮಕಾರಿಯಾಗಿ ಮೂಡಿಸುತ್ತವೆ. ಜಾತಿ ಹೋರಾಟ ವರ್ಗ ಹೋರಾಟದಂತಹ ಸಮಕಾಲೀನವಾದ ಜ್ವಲಂತ ಸಮಸ್ಯೆಗಳನ್ನು ವಸ್ತುವಾಗಿಸಿ ಕೊಳ್ಳುವ ಲೇಖಕನು ಎದುರಿಸಬೇಕಾಗುವ ವಿಶಿಷ್ಟ ಸವಾಲುಗಳನ್ನು ಸಿದ್ಧಲಿಂಗಯ್ಯ ನವರು ಅರಿತಿದ್ದಾರೆ. ಮೇಲುಜಾತಿ ಮತ್ತು ವರ್ಗದ ಅನ್ಯಾಯ ಅತ್ಯಾಚಾರ ಗಳನ್ನು ಬಯಲಿಗೆಳೆಯುವ ಅವರ ನಾಟಕಗಳು ತಮ್ಮವರ ಕೀಳರಿಮೆ, ದುರಾಸೆ, ಹೊಣೆಗೇಡಿತನಗಳನ್ನು ಮರೆತಿಲ್ಲ. ಈ ಬಗೆಯ ನಿರ್ಲಿಪ್ತ ಆರೋಗ್ಯಕರ ಧೋರಣೆ ಗಳನ್ನು ಕಾಪಾಡಿಕೊಂಡುಬರಲು ಸಾಧ್ಯವಾದರೆ ಸಿದ್ಧಲಿಂಗಯ್ಯನವರಿಂದ ಕನ್ನಡ ರಂಗಭೂಮಿ ಇನ್ನೂ ಶ್ರೇಷ್ಠ ಕೃತಿಗಳನ್ನು ನಿರೀಕ್ಷಿಸಬಹುದಾಗಿದೆ.

ಸ್ವಾಮಿಗೂಳ ಸ್ವಾಮಾರ ; ಜಿ. ಹೆಚ್. ಹನ್ನೆರಡುಮಠ

ಸಮಕಾಲೀನ ಸಮಾಜದಲ್ಲಿ ಧರ್ಮಕ್ಕೆ ಒದಗಿದ ದುರ್ಗತಿಯೇ ನಾಟಕದ ವಸ್ತು. ಒಬ್ಬ ಜಗದ್ಗುರುವಿನ ಸುತ್ತ ಕೆಲವು ದೃಶ್ಯಗಳನ್ನು ಸಂಯೋಜಿಸಲಾಗಿದ್ದು, ಕೇಂದ್ರ ಪಾತ್ರದ ವಿಶ್ಲೇಷಣೆಗೆ ನೆರವಾಗುವಂತೆ ಸಮಾಜದ ವಿವಿಧ ಸ್ತರಗಳನ್ನು ಪ್ರತಿನಿಧಿಸುವ ಪಾತ್ರಗಳಿವೆ. ಸಾಹಿತಿಯೊಬ್ಬನು ಈ ಎಲ್ಲಪಾತ್ರ ಮತ್ತು ಸನ್ನಿವೇಶಗಳನ್ನು ವ್ಯಾಖ್ಯಾನಿ ಸುತ್ತ ಇದೆಲ್ಲವನ್ನೂ ಒಂದು ಸೂತ್ರದಲ್ಲಿ ಒಂದುಗೂಡಿಸುವ ಕೆಲಸ ಮಾಡುತ್ತಾನೆ. ಉತ್ತರ ಕರ್ನಾಟಕದ ಭಾಷೆಯ ಅರ್ಥವಂತಿಕೆಯನ್ನು ಮೊನಚಾಗಿ ಹಾಸ್ಯಮಯ ವಾಗಿ ನಾಟಕದ ಕ್ರಿಯೆಗೆ ಹೊಂದಿಸಿಕೊಳ್ಳುವ ಈ ನಾಟಕದ ತುಂಬ ನಮ್ಮ ಮಹತ್ವದ ನಾಟಕಗಳ ಪ್ರತಿಧ್ವನಿ ಕೇಳಿಸುತ್ತಿದೆ. ಈ ಪ್ರಭಾವಗಳನ್ನು ನಾಟಕಕಾರರೂ-ಮುನ್ನುಡಿ ಯಲ್ಲಿ ಒಪ್ಪಿಕೊಂಡಿದ್ದಾರೆ. ನಾಟಕದುದ್ದಕ್ಕೂ ಅಬ್ಬರದ ಭಾವಾತಿರೇಕ ಹಾಸು ಹೊಕ್ಕಾಗಿದೆ. ಹಾಸ್ಯ, ಸಂಗೀತ, ನೃತ್ಯ (ಜನಪದ ಕುಣಿತದಿಂದ ಹಿಡಿದು ಕ್ಯಾಬರೆಯುವರೆಗೆ), ಭಯಂಕರ ಕೊಳ್ಳಿದೆವ್ವಗಳು, ಗುಡುಗು-ಸಿಡಿಲು-ಇವೆಲ್ಲವೂ ಭಾವೋದ್ರೇಕವನ್ನು ಇಮ್ಮಡಿಗೊಳಿಸುವಂತಿವೆ. ನಾಟಕದ ಪ್ರದರ್ಶನಕ್ಕೆ ಇವೆಲ್ಲ ರಂಗು ರಂಗಾದ ಕಳೆಯನ್ನು ತಂದುಕೊಡಬಲ್ಲುವು. ಆದರೆ ನಾಟಕದ ಅರ್ಥವಂತಿಕೆಗೆ ಇದರಿಂದ ಲಾಭವಿಲ್ಲ.

ಹಾದಿಗಳೆಲ್ಲಿವೆ ? : ಅಶೋಕ ಕುಲಕರ್ಣಿ

ಈ ಸಂಕಲನದಲ್ಲಿ ಮೂರು ನಾಟಕಗಳಿವೆ. ಎರಡು ಸ್ವತಂತ್ರವಿದ್ದರೆ, ಮತ್ತೊಂದು ಅನುವಾದ. ತಮ್ಮ ಎರಡೂ ನಾಟಕಗಳಲ್ಲಿ ಸಮಕಾಲೀನ ಬದುಕನ್ನು ಕುರಿತ ಕುಲಕರ್ಣಿಯವರ ಅನಿಸಿಕೆಗಳು ಮಧ್ಯಮವರ್ಗದ ಪ್ರಾತಿನಿಧಿಕ ಆಲೋಚನೆ

ಗಳಂತಿವೆ. ತಲೆಮಾರುಗಳ ಅಂತರದಿಂದಾಗಿ ಏಳುತ್ತಿರುವ ಸಮಸ್ಯೆಗಳು, ಬದುಕಿಗೆ ಪ್ರಸಕ್ತವಾಗದ ವಿದ್ಯಾಭ್ಯಾಸ ಪದ್ಧತಿ, ಭ್ರಷ್ಟ ಅಧ್ಯಾಪಕ ಪ್ರಾಧ್ಯಾಪಕರುಗಳಿಂದ ಕಲುಷಿತಗೊಂಡ ವಾತಾವರಣ-ಇವೆಲ್ಲ, ತರುಣರನ್ನು ಬಂಡೇಳಲು ಪ್ರೇರೇಪಿಸುತ್ತಿವೆ ಯೆಂದು ಪ್ರತಿಪಾದಿಸುವ "ಹಾದಿಗಳೆಲ್ಲಿವೆ?" ನಾಟಕದ ಯುವಕರೆಲ್ಲ ಮುಂದಿನ ಹಾದಿ ಕಾಣದೆ ದಿಕ್ಕೆಟ್ಟಿರುವಂತೆಯೇ ನಾಟಕ ಮುಕ್ತಾಯವಾಗುತ್ತದೆ. ಸುತ್ತಣ ಪರಿಸರ ದೊಂದಿಗೆ ಅರ್ಥಪೂರ್ಣ ಸಂಬಂಧವನ್ನು ಕಳೆದುಕೊಂಡು ಏಕಾಕಿಯಾದ ಆಧುನಿಕ ವಿದ್ಯಾವಂತ ಯುವಕನ ತುಡಿತವನ್ನು ನಾಟಕದ ಉತ್ತರಾರ್ಧದಲ್ಲಿ ಸಾಕಷ್ಟು ಪರಿಣಾಮ ಕಾರಿಯಾಗಿ ಮೂಡಿಸಲಾಗಿದೆಯಾದರೂ ಪೂರ್ವಾರ್ಧದ ಬೆಳವಣಿಗೆ ಸುಸಂಬದ್ಧ ವಾಗಿಲ್ಲ. ಘಟನೆ ಮತ್ತು ಪಾತ್ರಗಳ ಸಂಖ್ಯೆಯು ವಿಸ್ತಾರವಾಗಿದ್ದು, ಅದೆಲ್ಲವನ್ನು ಏಕಾಂಕವೊಂದರಲ್ಲಿ ಸಮಾವೇಶಗೊಳಿಸುವಲ್ಲಿ ನಾಟಕಕಾರರು ಸಫಲಗೊಂಡಿಲ್ಲ.

"ಇದು ಬರಿ ನಾಟಕ" ತಂತ್ರದ ದೃಷ್ಟಿಯಿಂದ ಶ್ರೀರಂಗರ ಇತ್ತೀಚಿನ ಕೆಲವು ನಾಟಕಗಳನ್ನು ನೆನಪಿಗೆ ತರುತ್ತದೆ. ನಾಟಕಕಾರ, ಪ್ರೇಕ್ಷಕ, ನಟ–ಈ ಮೂವರ ಚರ್ಚೆ, ಸಂಘರ್ಷಗಳ ಮೂಲಕ ನಾಟಕದ ವಸ್ತುವನ್ನು ಮಂಡಿಸಲೆಳಸುವ ಈ ತಂತ್ರ ಇಲ್ಲಿ ಕೇವಲ ಬುದ್ಧಿವಂತಿಕೆಯ ಕಸರತ್ತಾಗಿದೆ. "ಈ ಜನ ಜಂಗುಳಿ ಕಾಲದಾಗ ಕಾಗಿ ಕುನ್ನಿ ಹುಚ್ಚನಾಯಿ ಬೇಕಾದರೂ ಸ್ಥಾನ ಏರತಾವು" ಎಂಬ ನಾಟಕಕಾರನ ನಿರ್ಣಯ ಅವಸರದ್ದೂ ಅಪಾಯಕಾರಿಯಾದುದು ಎಂಬುದನ್ನು ಇಲ್ಲಿ ಮರೆಯು ವಂತಿಲ್ಲ.

ಮೂಲದಲ್ಲಿಯೇ ತೀರಾ ಚಿಕ್ಕ ನಾಟಕವಾದ ಸಿಂಗ್‌ನ 'Riders to the sea' ನಾಟಕವನ್ನು ಇನ್ನೂ ಸಂಗ್ರಹಗೊಳಿಸಿ ಅಶೋಕ ಕುಲಕರ್ಣಿಯವರು ಕನ್ನಡಿಸಿದ್ದಾರೆ. ಅಲ್ಲಿನ ನುಡಿಗಟ್ಟನ್ನು ಈ ಪರಿಸರಕ್ಕೆ ಹೊಂದಿಸಿಕೊಳ್ಳುವ ಅವರ ಪ್ರಯತ್ನ ಸಮ ರ್ಪಕವಾಗಿಲ್ಲ. ಐರ್ಲೆಂಡ್ ದೇಶದ ಪ್ರಾದೇಶಿಕತೆಯನ್ನು ಸಂಪೂರ್ಣವಾಗಿ ಮೈ ಗೂಡಿಸಿಕೊಂಡ ಸಿಂಗ್‌ನ ನಾಟಕಗಳು ಬದುಕು ಮತ್ತು ಭಾಷೆ ಎರಡೂ ದೃಷ್ಟಿಯಿಂದ ಜಾನಪದೀಯವಾಗಿದ್ದು, ಅವುಗಳಿಂದ ಸಂಪೂರ್ಣ ಭಿನ್ನವಾದ ಇನ್ನೊಂದು ಸಾಂಸ್ಕೃತಿಕ ಪರಿಸರಕ್ಕೆ ಅನುವಾದಿಸುವುದು ಸುಲಭವೇನಲ್ಲ.

ತಲೆದಂಡ : ರಾಮದಾಸ್

ವರ್ಣ ವ್ಯವಸ್ಥೆಯ ಪರಿಣಾಮವಾಗಿ ಏರ್ಪಟ್ಟ ಜಾತಿಪದ್ಧತಿಯಿಂದಾಗಿ ಒಂದು ಕಾಲದಲ್ಲಿ ಪ್ರತಿಷ್ಠಿತರಾಗಿ ಮೆರೆದವರು, ಇಂದು ಅದಕ್ಕೆ ಪ್ರಾಯಶ್ಚಿತ್ತ ಅನುಭವಿಸುತ್ತಿದ್ದಾರೆ ; ಹಿಂದಿನವರ ತಪ್ಪಿಗೆ ಈಗಿನವರು ಶಿಕ್ಷೆ ಅನುಭವಿಸುವುದು, "ತಲೆದಂಡ" ಕೊಡುತ್ತಿರುವುದು ನ್ಯಾಯವೇ ? ಎಂಬುದು ಇಲ್ಲಿ ನಾಟಕಕಾರರು ಎತ್ತಿರುವ ಪ್ರಶ್ನೆ. ಸಮಕಾಲೀನ ಜಾತಿ ಸಮಸ್ಯೆಯನ್ನು ರಾಮದಾಸರು ಇಲ್ಲಿ ವಿಶ್ಲೇಷಿ ಸಿರುವ ರೀತಿ ಸ್ವಲ್ಪ ಮಟ್ಟಿಗೆ ಏಕಪಕ್ಷೀಯವಾಗಿದೆಯಾದರೂ ವಿಚಾರ ಪ್ರಚೋದಕ

ವಾಗಿದೆ. ಸ್ವವಿಮರ್ಶೆಯ ಮೂಲಕವೇ ಒಂದು ಸಮೂಹವನ್ನು ಪುನರುಜ್ಜೀವಿಸಲು ಸಾಧ್ಯವೆಂಬ ಅವರ ತಿಳುವಳಿಕೆ ಸ್ವಾಗತಾರ್ಹವಾದುದು. ವಸ್ತುರಚನೆ, ಪಾತ್ರ ಪೋಷಣೆಯಲ್ಲಿ ರಾಮದಾಸರು ಜನಪ್ರಿಯವೆನ್ನಬಹುದಾದ ಸರಳಮಾರ್ಗವನ್ನೆ ಅನುಸರಿಸಿದ್ದಾರೆ. ಸಂಭಾಷಣೆಗಳು ಚುರುಕಾಗಿವೆ, ಕ್ರಿಯಾಪೂರ್ಣವಾಗಿವೆ. ದೃಶ್ಯದಿಂದ ದೃಶ್ಯಕ್ಕೆ ಕತೆಯು ಮುನ್ನಡೆಯುವಲ್ಲಿ ಕುತೂಹಲಕಾರಿಯಾದ ನಾಟಕೀಯತೆಯಿದೆ. ಪ್ರಚಲಿತ ಸಮಸ್ಯೆಯೊಂದನ್ನು ವಸ್ತುವಾಗಿ ನಿರ್ವಹಿಸ ಹೊರಟ ನಾಟಕಕಾರನೊಬ್ಬ ಎದುರಿಸಬೇಕಾಗಬಹುದಾದ ಸವಾಲುಗಳಿಗೆ ರಾಮದಾಸರು ನಿರ್ವಿಕಾರವಾಗಿ ಉತ್ತರ ಕೊಟ್ಟಿದ್ದಾರೆಂದು ಹೇಳುವಂತಿಲ್ಲವಾದರೂ ಸಮಸ್ಯೆಯನ್ನು ತೀರಾ ಸರಳಗೊಳಿಸಿಲ್ಲ. ಶ್ರೀಧರನನ್ನು ಹುತಾತ್ಮನಂತೆ ಚಿತ್ರಿಸಿರುವುದರಿಂದ ನಾಟಕದ ದುರಂತ ಅರ್ಥಪೂರ್ಣ ವಾಗುವುದಿಲ್ಲ.

ಕನ್ನಡ ಯಾತ್ರೆ : ಮಲ್ಲಿಕಾರ್ಜುನ ಶಿ. ಲಠ್ಠೆ

ನಾಲ್ಕು ರೇಡಿಯೋ ರೂಪಕಗಳ ಸಂಕಲನ. ಜನ ಸಾಮಾನ್ಯರನ್ನು ಲಕ್ಷ್ಯದಲ್ಲಿರಿಸಿಕೊಂಡು -ಈ ರೂಪಕಗಳನ್ನು ರಚಿಸಲಾಗಿದೆಯೆಂದು ಆರಂಭದಲ್ಲಿ ಲೇಖಕರು ಹೇಳಿಕೊಂಡಿದ್ದಾರೆ ; ಇವೇ ಇಲ್ಲಿನ ಪರಿಮಿತಿಯೂ ಆಗುತ್ತದೆ. ಕನ್ನಡ ನಾಡು, ನುಡಿ ಮತ್ತು ಸಂಸ್ಕೃತಿಯ ಪ್ರಚಾರದ ಧಾಟಿಯಿಂದಾಗಿ ಸಂಕೀರ್ಣವಾದ ರೀತಿಯ ವಸ್ತು, ಪಾತ್ರ ಕಲ್ಪನೆಗಳು ಸಾಧ್ಯವಾಗಿಲ್ಲ. "ಶ್ರೀ ಶರಣ ಬಸವೇಶ್ವರ" ಮತ್ತು "ಸಾರಥಿ" ಎಂಬೆರಡು ರೂಪಕಗಳು ಮಾತ್ರ ಅಲ್ಲಿನ ಜಾನಪದ ಹಿನ್ನೆಲೆಯಿಂದಾಗಿ ಮನ ಸೆಳೆಯುವಂತಿವೆ. "ಶರಣ ಬಸವೇಶ್ವರ"ದಲ್ಲಿ ಬಳಸಿಕೊಂಡಿರುವ ಜನಪದ-ಗೀತೆಗಳು ರೂಪಕದೊಂದಿಗೆ ಉಚಿತವಾಗಿ ಹೊಂದಿಕೊಂಡಿವೆ. "ಕನ್ನಡ ಗಂಧ ಛಂದ" ಮತ್ತು "ಕನ್ನಡ ಯಾತ್ರೆ"ಯಲ್ಲಿ ಪ್ರಚಾರದ ಶೈಲಿ ತೀರಾ ವಾಚ್ಯವೆನಿಸು ವಂತಿದೆ. "ಶ್ರೀ ಶರಣ ಬಸವೇಶ್ವರ"ವೂ ಸೇರಿದಂತೆ ಇಲ್ಲಿನ ಎಲ್ಲ ರೂಪಕಗಳಲ್ಲಿಯೂ ಕೆಲವು ನಂಬಿಕೆಗಳನ್ನು ಅವೈಜ್ಞಾನಿಕವಾದ ಬಗೆಯಲ್ಲಿ ಲೇಖಕರು ಸಮರ್ಥಿಸಿಕೊಂಡಿರು ವುದು ಆಶ್ಚರ್ಯಕರವಾಗಿದೆ.

ಬಚ್ಚಾಲಿ ಹುಡುಗರು : ಕೆ. ಟಿ. ಶ್ರೀಧರ

ಸರಳವಾದ ಚಿಕ್ಕ ನಾಟಕ. ಕೆಳವರ್ಗದಿಂದ ಬಂದ, ಪೋಲಿ ಹುಡುಗರೆಂದು ಭಾವಿಸಲಾಗಿದ್ದ—ಮಕ್ಕಳೊಂದಿಗೆ ತನ್ನ ಮಗನನ್ನು ಆಟವಾಡಲು ಬಿಡದ ಮುನ್ಸಿಫ್ ನ್ಯಾಯಾದೀಶನೊಬ್ಬ ಅನಿವಾರ್ಯ ಪರಿಸ್ಥಿತಿಯಲ್ಲಿ ಮಣಿಯಬೇಕಾಗಿ ಬಂದ ಕತೆಯನ್ನು ಇಲ್ಲಿ ನಿರೂಪಿಸಲಾಗಿದೆ. ತೀರಾ ಚಿಕ್ಕ ನಾಟಕವಾದುದರಿಂದ ಹೆಚ್ಚಿನ ಸಂಖ್ಯೆಯಲ್ಲಿರುವ ಪಾತ್ರಗಳು ಸ್ಫುಟಗೊಳ್ಳುವುದಿಲ್ಲ. ನೀತಿ ಪ್ರಧಾನವಾದ ಕತೆ

ಯೊಂದನ್ನು ಸರಳವಾಗಿ ಸಂಭಾಷಣಾ ರೂಪದಲ್ಲಿ ಹೆಣೆದಂತಿದೆ. ಸಂಭಾಷಣೆಗಳ ನಡು ನಡುವೆ ಅನ್ಯಭಾಷೆಯೊಂದರ ವಾಕ್ಯಗಳನ್ನು ಸೇರಿಸುವುದು, ಅವರ ಅನುವಾದ ವನ್ನು ಕಂಸದಲ್ಲಿ ಕೊಡುವುದು ಇಲ್ಲಿನ ಒಂದು ವೈಚಿತ್ರ್ಯವಾಗಿದೆ.

ಹಾವು : ಸಿ. ಪಿ. ನಾಗರಾಜ

ಈ ನಾಟಕದ ಕೇಂದ್ರ ಪಾತ್ರವಾದ ಕಾಲೇಜ್ ಅಧ್ಯಾಪಕ ರಾಮಚಂದ್ರನ ಮನೆಯ ಮುಂದಿನ ಕಲ್ಲು ಚಪ್ಪಡಿಯ ಕೆಳಗೆ ನುಸುಳಿದ್ದ ನಾಗರಹಾವೊಂದನ್ನು ಕೊಲ್ಲಿಸಲು ಹೊರಟಾಗ ಅಡ್ಡಿಯಾಗಿ ಬಂದ ಮೂಢನಂಬಿಕೆಗಳನ್ನು ನಿವಾರಿಸಿ, ಆತ ಹಾವನ್ನು ಕೊಲ್ಲಿಸುತ್ತಾನೆ. ಇದು ನಾಟಕದ ಕಥಾಹಂದರ. ಅಚ್ಚುಕಟ್ಟಾಗಿ ಐದು ದೃಶ್ಯಗಳಾಗಿ ವಿಂಗಡಿಸಿಕೊಂಡು ಕಥಾನಿರೂಪಣೆ ಮಾಡಿರುವ ಲೇಖಕರು ಇದನ್ನೊಂದು ನಾಟಕವಾಗಿಯೇ ರಚಿಸಬೇಕಾದ ಅಗತ್ಯವನ್ನು ತೋರಿಸಿಕೊಟ್ಟಿಲ್ಲ. ಕಸುವಾದ ಗ್ರಾಮ್ಯಭಾಷೆ ಮಾತನಾಡುವ ನಾಟಕದ ಸಾಮಾನ್ಯ ಜನತೆಯೆದುರು ವಿದ್ಯಾವಂತ ರಾಮಚಂದ್ರ ಪೇಲವವಾಗಿ ಕಂಡುಬರುತ್ತಾನೆ. ಪ್ರಗತಿಪರ ಧೋರಣೆಯನ್ನು ಬೆಂಬಲಿಸುವ ಈತನನ್ನು ಕೇವಲ ಪುಸ್ತಕದ ಹೇಳಿಕೆಗಳನ್ನು ಹೇಳಿಕೊಂಡು ಬದುಕುವ ಮಡಿವಂತ ಪಂಡಿತನೆಂಬಂತೆ ಚಿತ್ರಿಸಲಾಗಿದೆ. ಹಾವಿನ ಕೊಲೆಯನ್ನು ಒಂದು ಸಾಕೇಂತಿಕ ಕ್ರಿಯೆಯನ್ನಾಗಿಸಬೇಕೆಂಬ ನಾಟಕಕಾರರ ಬಯಕೆ ಧ್ವನಿಪೂರ್ಣವಾಗಿ ರೂಪು ಹೊಂದುವುದಿಲ್ಲ.

ಅಲೆಗಳಲ್ಲಿ ರಾಜಹಂಸ : ಅನು : ಸಿದ್ಧಲಿಂಗಪಟ್ಟಣಶೆಟ್ಟಿ

ಗೌತಮ ಬುದ್ಧನ ಜೀವಿತಾವಧಿಯಲ್ಲಿ ನಡೆದಿತೆಂದು ಹೇಳಲಾದ ಪ್ರಕರಣ ವೊಂದನ್ನಾಧರಿಸಿ ಈ ನಾಟಕವನ್ನು ಹಿಂದಿಯಲ್ಲಿ ಮೋಹನರಾಕೇಶರು ರಚಿಸಿದ್ದಾರೆ ; ಕನ್ನಡಿಸಿದವರು ಸಿದ್ಧಲಿಂಗಪಟ್ಟಣಶೆಟ್ಟಿ. ಬುದ್ಧ ವಿದ್ಯುದಾಕರ್ಷಣೆಗೆ ಒಳಗಾಗಿ ವೈರಾಗ್ಯ ಸ್ವೀಕರಿಸಿದ ಆತನ ಸೋದರ ನಂದನ ಪತ್ನಿಯ ದುರಂತವನ್ನು ಚಿತ್ರಿಸುವ ಈ ನಾಟಕದ ತಾತ್ವಿಕತೆ ತೀರಾ ಅಸ್ಪಷ್ಟವಾದುದು. ಮೂಲ ನಾಟಕದ ಸಂಸ್ಕೃತ ಭೂಯಿಷ್ಠ ಸಂಭಾಷಣಾ ಶೈಲಿಯನ್ನೇ ಕನ್ನಡ ಅನುವಾದದಲ್ಲಿಯೂ ಯಥಾವತ್ತಾಗಿ ಉಳಿಸಿ ಕೊಳ್ಳಲಾಗಿದೆ. ಹಲವು ಉತ್ತಮ ಹಿಂದಿ ನಾಟಕಗಳನ್ನು ಪಸಂದಾಗಿ ಕನ್ನಡಿಸಿದ ಪಟ್ಟಣಶೆಟ್ಟಿಯವರ ಪ್ರಸ್ತುತ ಅನುವಾದ ನಿರಾಶಾದಾಯಕವಾಗಿ ಕಂಡು ಬರುತ್ತಿದೆ.

ಮಲಯಾಳಿ ಏಕಾಂಕಗಳು : ಅನು : ಡಾ. ಬಿ. ಕೆ. ತಿಮ್ಮಪ್ಪ

ಕೆ. ರಾಘವನ್ ಪಿಳ್ಳೈಯವರು ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಸಂಪಾದಿಸಿ ಕೊಟ್ಟ ಹನ್ನೆರಡು ಏಕಾಂಕಗಳನ್ನು ಬಿ. ಕೆ. ತಿಮ್ಮಪ್ಪನವರು ಕನ್ನಡಿಸಿದ್ದಾರೆ. ಸೋದರ ಭಾಷೆಯೊಂದರ ರಂಗಭೂಮಿಯ ಪರಿಚಯಕ್ಕೆ ಅವಕಾಶಮಾಡಿಕೊಡುವ ಈ

ಸಂಗ್ರಹದ ಅನುವಾದ ಅಭಿನಂದನಾರ್ಹ. ಅನುವಾದವು ಸಹಜವಾಗಿದ್ದು ಅಭಿನಯ ಯೋಗ್ಯವಾದ ಶೈಲಿಯಲ್ಲಿದೆ. ಮಲಯಾಳಿ ರಂಗಭೂಮಿಯ ಪ್ರಾತಿನಿಧಿಕ ಸಂಕಲನ ವಿದೆಂದು ಭಾವಿಸುವುದಾದರೆ ಕನ್ನಡಿಗರು ತಮ್ಮ ರಂಗಭೂಮಿಯನ್ನು ಕುರಿತು ಹೆಮ್ಮೆ ಪಡಬೇಕಾಗುತ್ತದೆ. ಇಲ್ಲಿರುವ ಬಹುಪಾಲು ಏಕಾಂಕಗಳು ಸಾಧಾರಣ ಮಟ್ಟದಲ್ಲಿವೆ. ಕತೆಯೊಂದನ್ನು ಸರಳವಾಗಿ ಸಂಭಾಷಣಾರೂಪದಲ್ಲಿ ನಿರೂಪಿಸುವುದು ಅವುಗಳ ಪರಮ ಗುರಿ. ವಸ್ತು ಕೇವಲ ಮಧ್ಯಮ ವರ್ಗಕ್ಕೆ ಸೀಮಿತ. ಪ್ರೇಮ ವಿವಾಹ, ಲೈಂಗಿಕತೆ, ಕುಟುಂಬ ಕಲಹ ಮುಂತಾದ ಮಧ್ಯಮ ವರ್ಗಕ್ಕೇ ವಿಶಿಷ್ಟವಾದ ಭಾವನಾ ಪ್ರಧಾನ ಸಮಸ್ಯೆಗಳನ್ನು ಶೋಧಿಸಿರುವ ವಿಧಾನವೂ ವಿನೂತನವಾಗಿಲ್ಲ. ಸಂಕಲನದ ಯಾವ ನಾಟಕದಲ್ಲಿಯೂ ಬಡತನ, ನಿರುದ್ಯೋಗ, ಜಾತಿಕಲಹಗಳಂತಹ ಜ್ವಲಂತ ಸಮಸ್ಯೆಗಳತ್ತ ಪ್ರಗತಿಪರ ನೋಟವಿಲ್ಲದಿರುವುದು ಎದ್ದು ಕಾಣುವ ವಿಶೇಷ ವಾಗಿದೆ. ಕಳೆದ ಎರಡು ಮೂರು ದಶಕಗಳಿಂದಲೂ ಏಕಪ್ರಕಾರವಾಗಿ ಸಮಾಜ ವಾದದತ್ತ ಒಲವು ತೋರಿಸುತ್ತ ಬಂದಿರುವ ಪ್ರಜ್ಞಾವಂತ ಮತದಾರರನ್ನು ಪಡೆ ದಿರುವ ಕೇರಳದಂತಹ ರಾಜ್ಯದ ರಂಗಭೂಮಿಯನ್ನು ಈ ಸಂಕಲನ ಪ್ರತಿನಿಧಿಸು ತ್ತಿದೆಯೆಂದು ನಂಬಲೂ ಕಷ್ಟವಾಗುತ್ತದೆ.

ಕಕೇಸಿಯನ್ ಚಾಕ್ ಸರ್ಕಲ್ : ಅನು : ಜಿ. ಎನ್. ರಂಗನಾಥರಾವ್

ನಮ್ಮ ರಂಗಭೂಮಿಯನ್ನು ಇತ್ತೀಚೆಗೆ ಪ್ರಭಾವಿಸಿರುವ ಪಾಶ್ಚಿಮಾತ್ಯ ನಾಟಕ ಕಾರರಲ್ಲಿ ಬರ್ಟೋಲ್ಟ್ ಬ್ರೆಕ್ಟ್‌ನ ಸ್ಥಾನ ವಿಶಿಷ್ಟವಾದುದು. ಪ್ರೇಕ್ಷಕರ ವಿಚಾರ ಪ್ರಚೋದನೆಯನ್ನೇ ಮುಖ್ಯ ಗುರಿಯಾಗಿಸಿಕೊಂಡಿರುವ ಬ್ರೆಕ್ಟ್‌ನ ನಾಟಕಗಳ ತಂತ್ರ ಪರಂಪರಾಗತ ರಂಗಭೂಮಿಗೆ ಹೊಸ ಉಸಿರನ್ನು ನೀಡಿತು. ರಾಜಕೀಯ ನಾಟಕಗಳು ಕೇವಲ ಪ್ರಚಾರದ ನೆಲೆಯಲ್ಲಿಯೇ ಪರ್ಯವಸಾನಗೊಳ್ಳದೆ ಶ್ರೇಷ್ಠಬಗೆಯ ಕಲಾಕೃತಿಗಳೂ ಆಗಬಲ್ಲುವೆಂಬುದನ್ನು ಅವನ ನಾಟಕಗಳು ತೋರಿಸಿಕೊಟ್ಟಿವೆ. ನಾಟಕಾ ನುಭವವನ್ನು ಮಹಾಕಾವ್ಯದಿಂದಾಗುವ ರಸಾನುಭವದ ಮಟ್ಟಕ್ಕೆ ಒಯ್ಯಬಲ್ಲ ಆತನ 'ಎಪಿಕ್ ಥಿಯೇಟರ್' ಕಲ್ಪನೆ ನಮ್ಮ ಜನಪದ ರಂಗಭೂಮಿಗೆ ಹತ್ತಿರ ವಾದುದು.

ಆತನ 'ಕಕೇಶಿಯನ್ ಚೌಕ್ ಸರ್ಕಲ್' ಎಂಬ ಮಹಾನಾಟಕವನ್ನು ಕನ್ನಡಿ ಸಿರುವ ರಂಗನಾಥರಾಯರು ತುಂಬಾ ಒಳ್ಳೆಯ ಕೆಲಸ ಮಾಡಿದ್ದಾರೆ. ನೆಲದ ಮೇಲಿನ ಹಕ್ಕು ತಾಯ್ತನದ ಹಕ್ಕಿನಂತೆ ಕೇವಲ ಕಾನೂನು ಕಟ್ಟಳೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ ; ತಾಯ್ತನದ ನಿಜವಾದ ಹಂಬಲವಿರುವವಳಿಗೆ ಮಗು, ಫಲ ವತ್ತಾಗಿ ಉತ್ತು ನೀರು ಹನಿಸುವವನಿಗೆ ನೆಲ ಸಿಗಬೇಕಾದುದು ಪ್ರಕೃತಿ ದತ್ತ ನ್ಯಾಯ ವೆಂಬ ಆದರ್ಶವನ್ನು ದೃಷ್ಟಾಂತ ಪೂರ್ವಕವಾಗಿ ಸರಾಗವಾಗಿ ರಸಭರಿತವಾಗಿ ಪ್ರತಿ ಪಾದಿಸುವ ಈ ನಾಟಕದ ಅನುವಾದ ಮೂಲಕೃತಿಯ ಆಶಯವನ್ನು ಸಾಕಷ್ಟು ಯಶಸ್ವಿಯಾಗಿ ಸೆರೆಹಿಡಿದಿದೆ. ಪ್ರಥಮಾರ್ಧ ಅನುವಾದ ಶೈಲಿಯಲ್ಲಿ ಸ್ವಲ್ಪಮಟ್ಟಿನ

ಗ್ರಾಂಥಿಕತೆಯಿದೆಯಾದರೂ ಒಟ್ಟಾರೆಯಾಗಿ ರಾಯರ ಪರಿಶ್ರಮ ಎದ್ದು ಕಾಣು ವಂತಿದೆ.

ಎಲ್ಲರೂ ನನ್ನವರೆ : ರೂಪಾಂತರ : ಚಿ. ನ. ಮಂಗಳ

ಆರ್ಥರ್ - ಮಿಲ್ಲರನ 'All my Sons' ಎಂಬ ನಾಟಕವು ಮಹಾ ಯುದ್ಧದ ಪರಿಣಾಮವಾಗಿ ಏರ್ಪಟ್ಟ ಅಮೆರಿಕನ್ ಸಮಾಜದ ಅವನತಿಯ ದುರಂತವೊಂದನ್ನು ನಮ್ಮ ಮುಂದಿಡುತ್ತದೆ. ಬರ, ಚಂಡಮಾರುತ, ಯುದ್ಧ– ಹೀಗೆ ಯಾವುದೇ ಸಂಕಷ್ಟಕಾರಕ ಪರಿಸ್ಥಿತಿಯನ್ನು ಸ್ವಾರ್ಥಕ್ಕೆ ಬಳಸಿಕೊಂಡು ಹಣ ಗಳಿಸುವ ಕಾಳಸಂತೆಯ ಕ್ರೂರ ಕರ್ಮಿಗಳು ನಮ್ಮ ದೇಶಕ್ಕೆ ಅಪರಿಚಿತರೇನೂ ಅಲ್ಲ. ಆದುದರಿಂದ ಈ ನಾಟಕದ ರೂಪಾಂತರ ಸುಲಭವಾಗಿ ಯಥಾರ್ಥ ರೀತಿಯಲ್ಲಿ ನಮ್ಮ ಪರಿಸ್ಥಿತಿಗೆ ಹೊಂದಿಕೊಳ್ಳುತ್ತದೆ. ಅಮೆರಿಕನ್ ನುಡಿಗಟ್ಟು, ನಡಾವಳಿ ಗಳನ್ನು ಕನ್ನಡಕ್ಕೆ ಪರಿವರ್ತಿಸುವಲ್ಲಿ ಚಿ. ನ. ಮಂಗಳರವರು ಸಾಕಷ್ಟು ಎಚ್ಚರ ವಹಿಸಿದ್ದಾರೆ. ಅನುವಾದದ ಶೈಲಿಯೂ ಆಡುಮಾತಿಗೆ ಹತ್ತಿರವಾಗಿದ್ದು ರಂಗ ಪ್ರಯೋಗಕ್ಕೆ ಅನುಕೂಲವಾಗುವಂತಿದೆ.

ಸಣ್ಣ ಕಥೆ

**ಬಸವರಾಜ ಕಲ್ಗುಡಿ**

ಬ್ರಾಹ್ಮಣ–ಶೂದ್ರ ಪರಿಕಲ್ಪನೆ : 'ಸಾಹಿತ್ಯದಲ್ಲಿ ಜಾಹಿರಾತು ಹಾಗೂ ಸೃಜನಶೀಲತೆ'

ಬ್ರಾಹ್ಮಣ-ಶೂದ್ರ ಪರಿಕಲ್ಪನೆಗಳನ್ನು ಅನಂತಮೂರ್ತಿಯವರು 'ಪ್ರಜ್ಞೆ ಮತ್ತು ಪರಿಸರ'ದ ಲೇಖನಗಳಲ್ಲಿ ಬಳಸಿದ ನಂತರ, ಈ ಪದಗಳಿಗೆ-ವಿವಿಧ ಅರ್ಥ, ಆಕಾರಗಳಲ್ಲಿ ಅರ್ಥವನ್ನು ಹಚ್ಚಲಾಗುತ್ತಿದೆಯೆನ್ನುವುದು ನಮಗೆಲ್ಲ ಗೊತ್ತಿರುವ ಸಂಗತಿಯೇ ಆಗಿದೆ.

ಸಾಮಾನ್ಯವಾಗಿ ಸಂಸ್ಕೃತಿಯ ಪ್ರಭುತ್ವ ಹಾಗೂ ಅಧೀನತೆಯ ಎರಡು ವೈರುಧ್ಯಗಳಿಗೆ ಪ್ರತಿಮೆಗಳಾಗಿ ಇವುಗಳನ್ನು ಬಳಸಲ್ಪಡುವುದು ಹೆಚ್ಚು ಸರಿಯಾದ ಅನ್ವಯವಾಗಬಹುದು. ಹಿಂದಿನ ವರ್ಣ ವ್ಯವಸ್ಥೆಯಲ್ಲಿದ್ದಂಥ ಶ್ರೇಣೀಕೃತ ತರತಮಗಳಂತೆ, ಇಂದಿಗೂ ಈ ತಾರತಮ್ಯ ಬೇರೆ ಬೇರೆ ಸ್ವರೂಪಗಳಲ್ಲಿ ವ್ಯಕ್ತಗೊಳ್ಳುತ್ತಲಿದೆ. ಇಂಗ್ಲಿಷ್ ವಿದ್ಯೆ, ರೇಡಿಯೊ, ಪತ್ರಿಕೆಗಳು, ಪಟ್ಟಣದಲ್ಲಿ ಹಣದ ನಿರಂತರ ಚಲಾವಣೆ – ಇವುಗಳು ಹೊಸವರ್ಗ, ವಾತಾವರಣವನ್ನು ಸೃಷ್ಟಿಸಿವೆ. ಇದರಿಂದ ಹೊರತಾದ, ಆದರೆ ಇದಕ್ಕೆ ಸಂಪೂರ್ಣ ಅಧೀನವಿರುವ ಅಗಾಧ ಸಮಷ್ಟಿಯೊಂದಿದೆ ಉತ್ಪಾದನಾ ವ್ಯವಸ್ಥೆಯಲ್ಲಾದ ಬದಲಾವಣೆಗಳ ಯಾವ ಲಾಭವನ್ನೂ ಪಡೆಯದ ನಾಶ ಹಾಗೂ ಸ್ಥಾವರತೆಯನ್ನು ವೈಶಿಷ್ಟ್ಯವಾಗುಳ್ಳ ಲೋಕವಿದು. ಇಂಥ ವಿಶಾಲ ವಲಯದ ಪ್ರಭುತ್ವ ಹಾಗೂ ಅಧೀನತೆಗಳು ಸಂಸ್ಕೃತಿಯ ಸ್ವರೂಪವಾಗಿರುವಂತೆ, ಮನುಷ್ಯ ಸಂಬಂಧದ ಪ್ರತಿಯೊಂದು ಹಂತಗಳಲ್ಲಿಯೂ ಇಂತಹ ಅಧೀನತೆ ಹಾಗೂ ಪ್ರಭುತ್ವದ ಅಂಶಗಳು ರೂಪುಗೊಂಡಿರುವುದು ಸಹಜಸಾಧ್ಯವೇ ಆಗಿದೆ.

ಹೀಗಾಗಿ ಬ್ರಾಹ್ಮಣ-ಶೂದ್ರ ಇವೆರಡರ ಸಂಬಂಧದ ಸ್ವರೂಪಗಳು ಸೃಜನಶೀಲ ಸಾಹಿತಿಯೊಬ್ಬನಿಗೆ ಅನಿವಾರ್ಯವಾದ ಅಗತ್ಯತೆಗಳಾಗಿವೆ ಎನ್ನುವ ಅನಂತಮೂರ್ತಿಯವರ ಅಭಿಪ್ರಾಯಗಳನ್ನು ಒಪ್ಪಬಹುದು. 'ಸಾಹಿತ್ಯದಲ್ಲಿ ಬ್ರಾಹ್ಮಣ ಮತ್ತು ಶೂದ್ರ' ಎಂಬ ಲೇಖನ ನೋಡಿ) ಇದೇ ಲೇಖನದಲ್ಲಿ ಅನಂತಮೂರ್ತಿಯವರು ವಿವರವಾಗಿ ಅಲ್ಲದಿದ್ದರೂ ಒಂದು ಗಮನಾರ್ಹವಾದ ಅಂಶವನ್ನು ಮುಂಡಿಸುತ್ತಾರೆ. ವರ್ಣಭೇದದ ಈ ಸಮಾಜದಲ್ಲಿ ಲೇಖಕನೊಬ್ಬನಿಗೆ ಅನುಭವದ ಲೋಕವೇ

ಸಂಕುಚಿತವಾಗುತ್ತದೆ ಎನ್ನುವ ಅಭಿಪ್ರಾಯವನ್ನು ಅವರು ಹೇಳುತ್ತಾರೆ. ಈ ಮಾತನ್ನು ಸ್ವಲ್ಪ ಪರಿಶೀಲಿಸಿ ನೋಡಬಹುದಾಗಿದೆ. ಬ್ರಾಹ್ಮಣ ಮತ್ತು ಶೂದ್ರ ವಲಯಗಳು ಪರಸ್ಪರ ಯಾವ ಸಂಬಂಧವೂ ಇರದಂಥ ಪ್ರತ್ಯೇಕಗೊಂಡ ವಿಭಾಗ ಗಳೆಂದು ಹೇಳಿದಾಗ ಮೇಲಿನ ಅವರ ಅಭಿಪ್ರಾಯ ಸರಿಹೋಗಬಹುದಾಗಿತ್ತು. ಆದರೆ ಇವುಗಳ ನಡುವೆ ಅಂತರ್ ಪ್ರಕ್ರಿಯೆಗಳು ಹೆಚ್ಚು ಕ್ರಿಯಾತ್ಮಕವಾಗಿಯೇ ಇವೆ. ಕನ್ನಡದ ಎಲ್ಲ ಶ್ರೇಷ್ಠ ಬರಹಗಳು ಈ ಸಂಬಂಧದ ಸೂಕ್ಷ್ಮಗಳನ್ನು ಅರಿಯುವ ಪ್ರಯತ್ನವನ್ನು ಮಾಡಿವೆ. ಆದ್ದರಿಂದ ಸಮಸ್ಯೆ ಇರುವುದು ಲೇಖಕನೊಬ್ಬನ ಗ್ರಹಿಕೆಯ ತೀವ್ರತೆ ಹಾಗೂ ದೃಷ್ಟಿಗಳಲ್ಲಿಯೇ. ಇಂಥ ತೀವ್ರತೆಯೊಂದು ಲೇಖಕನಲ್ಲಿ ಮೂಡಲು - ಅವನು ಯಾವ ವರ್ಣ, ಜಾತಿ ಯಾ ವರ್ಗದಲ್ಲಿ ಹುಟ್ಟುತ್ತಾನೆ ಎನ್ನು ವುದು ಮುಖ್ಯವಾದ ಅಂಶವಾಗಬೇಕಾಗಿಲ್ಲ. ಏಕೆಂದರೆ ಇದು ಅನಿವಾರ್ಯವಾದ ಅಗತ್ಯತೆಯೇನೂ ಅಲ್ಲ. ಒಳ್ಳೆಯ ಲೇಖಕನೊಬ್ಬ ಅನುಭವದ ವಿವರಗಳಿಗಿಂತ ಹೆಚ್ಚಾಗಿ ಅದರ ಅಂತಃಸತ್ವಗಳನ್ನು ಹಿಡಿಯಲು ಪ್ರಯತ್ನಿಸುತ್ತಾನೆ. ಇಂಥ ಅಂತಃಸತ್ವವು ಪ್ರಕಟಗೊಳ್ಳುವುದು ಎರಡು ಭಿನ್ನ ವಲಯಗಳ ಸಂಬಂಧದಲ್ಲಿಯೇ ಎನ್ನುವುದನ್ನು ಗುರುತಿಸಬೇಕು.

ಕೃಷ್ಣಮಾಸಡಿಯ ಈ ವರ್ಷದ ಕಥಾ ಸಂಕಲನವೊಂದಕ್ಕೆ ಮುನ್ನುಡಿಯನ್ನು ಬರೆಯುತ್ತ ಅನಂತ ಮೂರ್ತಿಯವರು "ಶೂದ್ರ ಜನಾಂಗವು ಸೃಷ್ಟಿಸುತ್ತಿರುವ ಪ್ರಪಂಚದ ಸಾಂಸ್ಕೃತಿಕ ಮಹತ್ವವನ್ನು ವಿಮರ್ಶೆಯು ಇನ್ನೂ ಗಾಢವಾಗಿ ಗಮನಿಸಿ ದಂತಿಲ್ಲ" ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಯಾವುದಾದರೊಂದು ಸಾಹಿತ್ಯಕ ಪರಂಪರೆಯ ಸ:ಮಾನ್ಯ ಲಕ್ಷಣಗಳನ್ನು ವಿವರಿಸಿಕೊಳ್ಳುವ, ಗುರುತಿಸುವ ಕಾರ್ಯವು ವಿಮರ್ಶೆಯ ಪ್ರಾಥಮಿಕ -ಹಾಗೂ ಮುಖ್ಯ ಕಾರ್ಯವೆನ್ನುವುದರಲ್ಲಿ ಅನುಮಾನಗಳಿಲ್ಲ. ಇಂತಹ ಲಕ್ಷಣಗಳು ವಾಡಿಕೆಯಾಗಿ ರೂಪುಗೊಳ್ಳುವುದು ಆ ಪರಂಪರೆಯ ಉತ್ತಮ ಸಾಹಿತ್ಯಕೃತಿಯ ಲಕ್ಷಣಗಳನ್ನು ಅನುಸರಿಸಿಯೇ ಆಗಿರುತ್ತದೆ. ಹೀಗಾಗಿ ಕೃತಿಯ ಅಧ್ಯಯನದ ವ್ಯಕ್ತಿಗತ ಪಾತಳಿಯಿಂದಲೇ ಈ ಸ್ವರೂಪಗಳು ರೂಪು ಪಡೆಯುತ್ತವೆ.

ಆದರೆ ದುರಂತದ ವಿಷಯವೆಂದರೆ, ಜ್ಞಾನದ ವಾಂಛೆ ಇಲ್ಲದ, ಜೀವನ ಗ್ರಹಿಕೆಯ ಆಶಯುಗಳಿಲ್ಲದ ವಾತಾವರಣದಲ್ಲಿ ಸೃಜನಶೀಲಸಾಹಿತಿಯಾಗಲೀ, ವಿಮರ್ಶಕನಾಗಲೀ ಬೌದ್ಧಿಕವಾಗಿ ಭ್ರಷ್ಟರಾಗುತ್ತಾರೆ. ಆಗ ಮಧ್ಯಮದರ್ಜೆಯ ಬರಹಗಾರ, ಕಳಪೆ ಬರಹಗಳನ್ನು ಬರೆದೂ ಮೇಲೆ ವಿವರಿಸಿದ, ಸಾಮಾನ್ಯ ಲಕ್ಷಣ ಗಳ ನಡುವೆ ತನ್ನನ್ನು ಮುಚ್ಚಿಟ್ಟುಕೊಳ್ಳಲು ಬಯಸುತ್ತಾನೆ.

ವಿಮರ್ಶಕನೂ ಈ ಸಾಮಾನ್ಯ ಲಕ್ಷಣಗಳನ್ನು ಎಂಥ ಸಾಹಿತ್ಯಕ್ಕೂ ಅನ್ವಯಿಸುವ ದಡ್ಡತನ ತೋರುತ್ತಾನೆ. ಜನಾಂಗವಾಚಕವಾಗಿ ಬರುವ ಬ್ರಾಹ್ಮಣ, ಶೂದ್ರ

ಕಲ್ಪನೆಗಳು ಸಾಹಿತಿಗೆ ತನ್ನನ್ನು ತಾನು ಎತ್ತಿಕೊಳ್ಳಲು, ಅಥವಾ ಕೆಳಗೆ ಬೀಳಿಸಲು—ಒಟ್ಟಾರೆ ಮುಚ್ಚಿಟ್ಟುಕೊಳ್ಳುವ ಸಾಧನಗಳಾಗಿ ಬಳಕೆಯಾಗುತ್ತವೆ. ಜಾತಿವಾಚಕವಾಗಿ ಬಳಸುವ ಬ್ರಾಹ್ಮಣ ಶೂದ್ರ ಕಲ್ಪನೆಗಳನ್ನು ಸಾಹಿತ್ಯಸೃಷ್ಟಿ, ಹಾಗೂ ವಿಮರ್ಶೆಯ ಸಂದರ್ಭದಲ್ಲಿ ಬಳಸಬಹುದೆನ್ನುವುದರ ಬಗ್ಗೆಯೇ ನನಗೆ ಸಂದೇಹವಿದೆ.

ಗುಂಪಿನ ಲಕ್ಷಣಗಳು ಅರ್ಥವತ್ತಾದ ಸೂಕ್ಷ್ಮನೆಲೆಗಳನ್ನು ಮುಚ್ಚಿಬಿಡುತ್ತವೆ. ಆಗ ಮಧ್ಯಮ ದರ್ಜೆಯ ಅಭಿವ್ಯಕ್ತಿಗಳು ಸೂಕ್ಷ್ಮನೆಲೆಯ ಎಲ್ಲ ವಿನ್ಯಾಸಗಳನ್ನೂ ತಮ್ಮದೆಂದೇ ಭಾವಿಸುತ್ತವೆ. ಸಾಹಿತ್ಯದಲ್ಲಿ ಹೀಗೆ ಬೆರಕೆಯ ಲಕ್ಷಣಗಳು ಸುರುವಾದಾಗ ಸಾಹಿತ್ಯಕೃತಿಯ ಶ್ರೇಷ್ಠತೆಯನ್ನು ಸಾರಲಿಕ್ಕೆಂದೇ ಜಾಹಿರಾತುಗಳು-ಪ್ರಾರಂಭವಾಗುತ್ತವೆ. ಕೃತಿಯ ಮುಖಪುಟ, ಹಿಂಬದಿಯ ಪುಟ, ಒಳಪುಟ ಹೀಗೆ ಸಿಕ್ಕ ಕಡೆಗಳಲ್ಲೆಲ್ಲ ಜಾಹಿರಾತು ಮಾದರಿಯ ಕೃತಿಯನ್ನು ಕುರಿತ ತೀರ್ಮಾನಗಳು ಬರೆಸಲ್ಪಡುತ್ತವೆ. ಕೃತಿಯ ಪರಿಚಯವನ್ನು ಕುರಿತ ಮಾಡೆಸ್ಟ್ ಧಾಟಿಯ ಬರವಣಿಗೆಯನ್ನು ಬೇಕೆಂದೇ ಇಂಥ ಜಾಹಿರಾತುಗಳು ನಿರಾಕರಿಸುತ್ತವೆ.

ಸೃಜನಶೀಲತೆಯಲ್ಲಿ ಉಂಟಾಗುವ ಇಂಥ ಭ್ರಷ್ಟತೆಯಲ್ಲಿ ವಿಮರ್ಶಕನೂ ಪಾಲುದಾರನಾಗುತ್ತಾನೆ. ಕನ್ನಡ ಸಾಹಿತ್ಯಕ್ಕೆ ಹಲವು ಹನ್ನೊಂದು ರೀತಿಯಲ್ಲಿ ಸತ್ವವುಳ್ಳ ಲೇಖಕರು ಹುಟ್ಟಬೇಕಾದದ್ದು ಅಗತ್ಯವಾಗಿದೆ. ಇದು ಆಗುವ ರೀತಿಯು ಲೇಖಕನಲ್ಲೇ ಇರಬೇಕಾಗಿದೆ. ಲೇಖಕ ತನ್ನ ಸತ್ವವನ್ನು ಮೈಗೂಡಿಸಿಕೊಳ್ಳಬೇಕಾಗಿದೆ. ವಿಮರ್ಶಕನೂ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಪ್ರೀತಿ, ಸ್ನೇಹ ಅಥವಾ ಕೋಪ ವೈರಗಳ ಆಮಿಷಗಳಿಗೆ : ಸಾಹಿತ್ಯೇತರ ಕಾರಣಗಳಿಗೆ ಒಳಗಾಗದೆ ನಿಷ್ಠುರನಾಗಬೇಕಾಗುತ್ತದೆ.

ಈ ವರ್ಷದ ಕಥಾ ಸಂಕಲನಗಳಲ್ಲಿ ಚಿತ್ತಾಲರ "ಕತೆಯಾದಳು ಹುಡುಗಿ" ಉಳಿದ ಸಂಕಲನಗಳನ್ನು "ಇಕ್ಕಿ ಮೆಟ್ಟುತ್ತದೆ". ಕನ್ನಡದ ಕೆಲವು ಅತ್ಯುತ್ತಮ ಕಥೆಗಳು ಈ ಸಂಕಲನದಲ್ಲಿ ಸೇರಿವೆ. ಸೃಜನಶೀಲತೆಯ ಬಗೆಗೆ ಇರುವ ಗಾಢಕಾಳಜಿ, ಅತಂಕಗಳು ಈ ಲೇಖಕರ ಕತೆಗಳಲ್ಲಿ ಕಾಡುವಷ್ಟು, ಕನ್ನಡದ ಉಳಿದ ಕತೆಗಾರರ ಕತೆಗಳಲ್ಲಿ ಕಾಡಿದ ಹಾಗೆ ತೋರುವುದಿಲ್ಲ. ದೇಸಾಯಿಯವರು ಈ ಕತೆಗಳ ಬಗ್ಗೆ "ಚಿತ್ತಾಲತನದ ಮುದ್ರೆ" ಎಂದು ಏನು ಕರೆಯುತ್ತಾರೆ, ಆ ವೈಶಿಷ್ಟ್ಯವು ಮೇಲೆ ಹೇಳಿದ ಲಕ್ಷಣದಲ್ಲೇ ಪ್ರಮುಖವಾಗಿ ಇದೆ ಎಂದು ನಾನು ತಿಳಿಯುತ್ತೇನೆ. ಸೃಷ್ಟಿಯ ಬಗ್ಗೆ ಚಿತ್ತಾಲರಿಗಿರುವ ಕಾಳಜಿ ಅನೇಕ ರೀತಿಯದ್ದು. ಇಲ್ಲಿ ಕೇವಲ ಕತೆಯ ಹುಟ್ಟಿನ ಸಮಸ್ಯೆಯೊಂದೇ ಇಲ್ಲ. ಸೃಷ್ಟಿ ಇಲ್ಲಿ ಅನೇಕ ಅರ್ಥ ವಿನ್ಯಾಸಗಳನ್ನು ಪಡೆದುಕೊಂಡಿದೆ. ದೇಹ, ಮನಸ್ಸುಗಳ-ಪ್ರೀತಿ, ಪ್ರೇಮಗಳ ಸೃಷ್ಟಿ (ತೊಟ್ಟಿಲಲ್ಲಿ ನಗುತ್ತ ಕುಳಿತ ಜಾನಕಿಯನ್ನು ಜ್ಞಾಪಿಸಿಕೊಳ್ಳಿ) ಹೊಸ ಧೋರಣೆಯ, ಹೊಸಕ್ರಿಯೆಗೆ ಕಾರಣವಾಗುವ ಜೀವ ಚೈತನ್ಯಗಳ ಸೃಷ್ಟಿಯ ಬಯಕೆ (ಪೋಮ್ಮು) ಹೀಗೆ ಸೃಷ್ಟಿಶೀಲತೆಯ, ಕಲೆಯ ದೃಷ್ಟಿಕೋನ ಹಾಗೂ ಜೀವ ಚೈತನ್ಯಗಳ ಬೆಳವಣಿಗೆಗೆ

ಕಾರಣವಾಗುವ ಮಾನವೀಯ ದೃಷ್ಟಿಕೋನ, ಇವುಗಳು ಚಿತ್ತಾಲರ ಕತೆಗಳಲ್ಲಿ ಹೆಣ ಕೊಳ್ಳುವ ರೀತಿಯು ಕನ್ನಡ ಕಥಾ ಸಾಹಿತ್ಯಕ್ಕೆ ವಿಶಿಷ್ಟದ್ದಾಗಿದೆ.

ಅನುವಾದಿತ ಕತೆಗಳೂ ಈ ವರ್ಷ ಹೆಚ್ಚು ಸಂಖ್ಯೆಯಲ್ಲಿವೆ. ಮುಖ್ಯವಾಗಿ ಹೆಸರಿಸಬೇಕಾದವುಗಳು ನವಕರ್ನಾಟಕ ಪ್ರಕಾಶನದವರ ವಿಶ್ವಕಥಾಕೋಶ ಮಾಲಿಕೆಯ ಕಥಾ ಸಂಪುಟಗಳು. ಕನ್ನಡ ಕಥೆಗಳ ಸಂಪುಟವನ್ನು ಬಿಟ್ಟರೆ, ಉಳಿದ ಎಲ್ಲ ಸಂಪುಟಗಳೂ ಜಗತ್ತಿನ ಬೇರೆ ಬೇರೆ ದೇಶ, ಸಂಸ್ಕೃತಿಗಳ ಅಭಿವ್ಯಕ್ತಿಯನ್ನು ಕಥೆಗಳ ಅನುವಾದದ ಮೂಲಕಪರಿಚಯಿಸುವ ಸ್ತುತ್ಯವಾದ ಪ್ರಯತ್ನವನ್ನು ಮಾಡುತ್ತವೆ. ಈ ವರ್ಷವೆ ಇನ್ನೂ ಕೆಲವು ಒಳ್ಳೆಯ ಅನುವಾದಿತ ಸಂಕಲನಗಳು ಬಂದಿವೆ. ಚೈನಾದೇಶದ ಕತೆಗಳ ಅನುವಾದಿತ ಸಂಕಲನ 'ಬದಲಾವಣೆ' ಬಂಗಾಲಿ ಕಥೆಗಾರ ನರೇಂದ್ರನಾಥ ಮಿತ್ರರ "ಮಿತ್ರರ ಕಥೆಗಳು" ಇವು–ಈ ವರ್ಷದ ಉತ್ತಮ ಅನುವಾದಿತ ಕಥಾ ಸಂಕಲನಗಳು.

ಕತೆಯಾದಳು ಹುಡುಗಿ : ಯಶವಂತ ಚಿತ್ತಾಲ

ಕನ್ನಡ ಕಥಾ ಪ್ರಪಂಚದಲ್ಲಿ ವಿಷಯ ಹಾಗೂ ನಿರೂಪಣೆಯ ದೃಷ್ಟಿಯಿಂದ ಹೊಸ ಹೊಸ ಪ್ರಯೋಗಗಳನ್ನೂ ತನ್ಮೂಲಕ ಹೊಸ ಆಯಾಮಗಳನ್ನು ಕೂಡಿಸುತ್ತಿರುವ ಯಶವಂತ ಚಿತ್ತಾಲರ ಹೊಸ ಕಥಾ ಸಂಕಲನವಿದು.

ಚಿತ್ತಾಲರ ಇಲ್ಲಿಯ ಕೆಲವು ಕಥೆಗಳು ವಿಮರ್ಶಕನು ತನ್ನ ವಿಮರ್ಶೆಯ ಸಲಕರಣೆಗಳನ್ನು–ಹೊಸದಾಗಿ ಸಿದ್ಧಪಡಿಸಿಕೊಳ್ಳಬೇಕಾದ ಅಗತ್ಯತೆಯನ್ನು ಎತ್ತಿ ಹೇಳುತ್ತವೆ. ಶ್ರೇಷ್ಠ ಕತೆಗಳು ಕತೆಗಾರ ಹಾಗೂ ವಿಮರ್ಶಕ ಇವರಿಬ್ಬರಿಗೂ ನಿರಂತರ ಶೋಧನೆಗೆ, ಅರ್ಥದ ಆಚೆಗಿರುವ ಗೂಢ ನೆಲೆಗಳಿಗೆ-ಕಿವಿ ಕಣ್ಣು ಮನಗಳನ್ನು ತೆರೆಯುವ ಆಶಯಕ್ಕೆ ಸದಾ ಹಚ್ಚುತ್ತವೆ. ಚಿತ್ತಾಲರ ಕತೆಗಳ ಗಾಢ ಅನುಭವಗಳು ಜೀವನದ ಅರ್ಥ ಸಾಧ್ಯತೆಗಳನ್ನು, ಮೌಲ್ಯಗಳನ್ನು ಹುಡುಕುವ ಆತಂಕಭರಿತ ಮನಸ್ಸನ್ನು ಚಿತ್ರಿಸುತ್ತವೆ. ವ್ಯಕ್ತಿ-ವ್ಯಕ್ತಿಗಳೊಡನೆ ; ಜೀವನದೊಡನೆ ; ನಡೆಸುವ ಮುಖಾಮುಖಿ ಇಲ್ಲಿನ ಬಹುಪಾಲು ಕತೆಗಳ ಕೇಂದ್ರ ಆಶಯವಾಗಿದೆ. ಎರಡು ಹಂತಗಳಲ್ಲಿ ಈ ಆಶಯವು ಇವರ ಕತೆಗಳಲ್ಲಿ ಸಫಲತೆಯನ್ನು ಪಡೆಯುತ್ತದೆ. ಒಂದು–ವ್ಯಕ್ತಿಪಾತಳಿಯ ಮೇಲೆ ನಡೆಯುವ ಈ ಮುಖಾಮುಖಿ ಇಲ್ಲಿ ಇತಿಹಾಸದ ಫಲವೆನ್ನುವಂತಿರುವ ಎರಡು ಪ್ರಜ್ಞೆಗಳ ಮುಖಾಮುಖಿಯಾಗಿ ರೂಪುಗೊಳ್ಳುತ್ತವೆ. ಎರಡು–ಜೀವನದ ಮುಖಾಮುಖಿಯು ನಿರಂತರ ಶೋಧಕ್ಕೆ ಆಗುಮಾಡುವ ಹೊಸ ಚೈತನ್ಯಗಳು ಚಾಚಿದಷ್ಟು ದಕ್ಕುತ್ತಲೇ ಇರುವ ವಿಸ್ಮಯ ವಿನ್ಯಾಸಗಳ-ಜೀವಂತಿಕೆಯನ್ನು ಸಾಹಿತ್ಯದಲ್ಲಿ ಉಳಿಸಿಕೊಳ್ಳಬೇಕೆನ್ನುವ ಗಾಢ ಕಾಳಜಿಯೂ ಸಹ ಇಲ್ಲಿನ ಕತೆಗಳ ಇನ್ನೊಂದು ಮಹತ್ವಪೂರ್ಣ ಆಶಯವಾಗಿದೆ.

ಮೇಲೆ ವಿವರಿಸಿದ ಎರಡು ಮುಖ್ಯ ಗುಣಗಳು ಚಿತ್ತಾಲರ ಕತೆಗಳಲ್ಲಿ ಹಲವಾರು ರೀತಿಯಲ್ಲಿ ಚರ್ಚೆಗೊಳಗಾಗಿವೆ. ಇತಿಹಾಸ ಹಾಗೂ ವ್ಯಕ್ತಿಯ ಬದುಕು, ಪ್ರೇಮ, ಕಾಮ ಹಾಗೂ ವ್ಯಕ್ತಿಯ ಬದುಕು, ಸೃಜನಶೀಲತೆ ಮತ್ತು ಜೀವನದ ಅನುಭವ - ಈ ಮುಖ್ಯ ದ್ವಂದ್ವಗಳನ್ನು ಚಿತ್ತಾಲರು ತಮ್ಮ ಕಥೆಗಳಲ್ಲಿ ಎದುರಿಸಿದ್ದಾರೆ. ಬದುಕಿನ ಅನುಭವಗಳು ಹಾಗೂ ಅವುಗಳನ್ನು ತೀವ್ರವಾಗಿ ಪರಿಶೀಲಿಸುವ ತಾತ್ವಿಕ ಆಲೋಚನೆಗಳು ಈ ದ್ವಂದ್ವಗಳಲ್ಲಿ ಬೆಳೆದು ಬಂದಿವೆ.

ಇತಿಹಾಸ ಹಾಗೂ ವ್ಯಕ್ತಿಯ ಬದುಕು –ಈ ಸಮಸ್ಯೆಯನ್ನು ಕುರಿತ ಶೋಧ– ತ್ರಯೋದಶ ಪುರಾಣ, 'ಅಶ್ವತ್ಥಾಮ' ಈ ಕತೆಗಳಲ್ಲಿ ಮುಖ್ಯವಾಗಿ ಚರ್ಚೆಯಾಗಿವೆ ಅಂದುಕೊಂಡಿದ್ದೇನೆ. ಇತಿಹಾಸವು ಮನುಷ್ಯನ ಬದುಕಿನ ಸಂದರ್ಭದಲ್ಲಿ Relevent ಆಗುವ ಸಂದರ್ಭಗಳು ಯಾವುವು ? ಮಾರ್ಕ್ಸ್‌ವಾದಿ ತತ್ವಶಾಸ್ತ್ರಜ್ಞ ಕರೇಲ್ ಕೋಶಿಕ್ ಇತಿಹಾಸದ ಮುಖಹೀನ ಸ್ವರೂಪವನ್ನು ಕುರಿತ ಕುತೂಹಲ ಚರ್ಚೆಯೊಂದನ್ನು ಮಾಡಿದ್ದಾನೆ. ಮನುಷ್ಯನ ದಿನ ನಿತ್ಯದ ಬದುಕಿನ ಮೇಲೆ ಯಾವ ಸಂಬಂಧವೂ ಇರದ, ಧುತ್ತೆಂದು ಆಕ್ರಮಿಸಿಬಿಡುವ ಲಕ್ಷಣ ಈ ಇತಿಹಾಸ ಸ್ವರೂಪದ್ದು. ವ್ಯಕ್ತಿಯ ವ್ಯಕ್ತಿತ್ವದ ಮೂರ್ತ ಸ್ವರೂಪಗಳನ್ನೇ ಕುಗ್ಗಿಸಿಬಿಟ್ಟು ತಾನೇ ತಾನಾಗಿ ವಿಜೃಂಭಿಸುವ ಲಕ್ಷಣವನ್ನು ಇದು ಹೊಂದಿರುತ್ತದೆ–ಎಂದು ಅವನು ಹೇಳುತ್ತಾನೆ.

ಗಣೇಶನಿಗೆ (ತ್ರಯೋದಶಪುರಾಣ) ಅವನ ಸ್ವಂತ ಬದುಕು, ವ್ಯಕ್ತಿತ್ವವು ರೂಪುಗೊಳ್ಳದಂತೆ ಮೇಲಿಂದ ಮೇಲೆ ಆಕ್ರಮಿಸಿ ಅವನನ್ನು ಸಾವಿನೆಡೆಗೆ ತಳ್ಳುವ ದುರಂತವು ಇತಿಹಾಸದ ಇಂಥ ಕ್ರೂರ ಲಕ್ಷಣದ ದ್ಯೋತಕವೇ ಆಗಿದೆ. ತಾನು ಭಾಗವಹಿಸುವ ಯಾವ ಕ್ರಿಯೆಗಳಿಗೂ ಪ್ರಜ್ಞಾಪೂರ್ವಕವಾಗಿ ಬಾಧ್ಯನಲ್ಲದ ಗಣೇಶ ಈ ಅತ್ಯಂತ ಆಕಸ್ಮಿಕಗಳಲ್ಲಿ ಈ ಕ್ರಿಯೆಗಳೊಳಗೆ ಒಂದಾಗಿಸಲ್ಪಡುತ್ತಾನೆ. "ಮೂರು ಸಾವಿರ ವರ್ಷಗಳಿಂದ ಶೋಷಣೆ ಮಾಡುತ್ತ ಬಂದ ಜಾತಿಯ" ಯಾವ ಕ್ರಿಯೆಗಳ ಅರಿವಾಗಲೀ, ಸಂಬಂಧವಾಗಲೀ ಗೊತ್ತಿರದ ಗಣೇಶನಿಗೆ ಇದೊಂದು ಭೂತವಾಗಿ ಕಾಡುತ್ತದೆ. "ಇಲ್ಲಿಂದ ಇವನ ಪಲಾಯನ ಪ್ರಾರಂಭ, ಆದರೆ ಈ ಪಲಾಯನ ಸ್ವರೂಪದ ಬದುಕು ಮುಖ್ಯವಾಗಿ ಅವನ ಮೇಲೆ ಇತಿಹಾಸದ ಹೊಸ ಸ್ವರೂಪದ ಆಕ್ರಮಣದ" ಪ್ರಭಾವವೇ ಆಗಿದೆ.

'ಅಶ್ವತ್ಥಾಮ' ಕತೆ ಇತಿಹಾಸ-ವ್ಯಕ್ತಿ ಸಂಬಂಧದ ಇನ್ನೊಂದು ಮುಖವನ್ನು ಹೇಳುತ್ತದೆ. ವ್ಯಕ್ತಿಯ ನೆಲೆಯಿಂದ ನೋಡಲಾದ ಇತಿಹಾಸದ ಸ್ವರೂಪವು ಇಲ್ಲಿ 'ತ್ರಯೋದಶ ಪುರಾಣ'ದ ಸಮಸ್ಯೆಯ ಇನ್ನೊಂದು ಮುಖವನ್ನು ಎತ್ತಿ ಹೇಳುತ್ತದೆ.

ತ್ರಯೋದಶ ಪುರಾಣದ ಗಣೇಶನಿಗಿಂತ ಭಿನ್ನ ವ್ಯಕ್ತಿತ್ವವುಳ್ಳ ಇಲ್ಲಿಯ ನಾಯಕ ರಾಮಚಂದ್ರ ತನ್ನ ಕ್ರಿಯೆಯ ಮೂಲಕ ಮೈಮನಸ್ಸುಗಳಲ್ಲಿ ಹರಡಿಕೊಂಡ ಪಾಪಪ್ರಜ್ಞೆಯನ್ನು ತೋಡಿಕೊಳ್ಳುವುದು ಹೀಗೆ :

"ನನ್ನ ಪಾಪದ ಪಿಂಡವನ್ನು ಗರ್ಭದಲ್ಲೇ ಹೊತ್ತು ಬಾವಿಯಲ್ಲಿ ಹಾರಿ ಪಾರ್ವತಿ ಜೀವ ತೆಗೆದುಕೊಂಡ ಕರಾಳ ಸತ್ಯಕ್ಕೆ ಕಣ್ಣು ಮುಚ್ಚಲು ಎಷ್ಟು ಒಳದಾರಿಗಳು......"
"......ನನ್ನ ಕೈಯಿಂದ ನಡೆದ ಈ ಶೂದ್ರ ಹತ್ಯೆಗೆ ಈಗ ಎಷ್ಟು ಕಾಲವಾಯಿತು ? ಸಾವಿರ ವರುಷಗಳೇ ? ಇಲ್ಲ, ಸಾವಿರ ನಿಮಿಷಗಳೇ ?......ಕಾಲ ಪ್ರಜ್ಞೆಯೇ ಮಸುಕಾಗುತ್ತಿದೆ."

ರಾಮಚಂದ್ರನ ಪಾಪಪ್ರಜ್ಞೆ ಅವನ ವ್ಯಕ್ತಿಗತ ನೆಲೆಗೇ ಸೀಮಿತವಾದದ್ದಲ್ಲ. ಅವನನ್ನು ಕ್ರಿಯೆಗೆ ಸಾಧ್ಯವಾಗಿಸದ ಇತಿಹಾಸದ ದೊಡ್ಡ ಹಿಡಿತವೊಂದು ತನ್ನ ಕಡಿವಾಣ ವನ್ನು ಹಾಕಿಕೊಂಡು ಹಿಂದೆ ಕುಳಿತಿದೆ.

ವ್ಯಕ್ತಿಗಳ ಅವರ ಮನಸ್ಸು ಕ್ರಿಯೆಗಳ–ಸೂಕ್ಷ್ಮ ಹಾಗೂ ಮೂರ್ತಪಾತ (Microlevel) ಯಲ್ಲಿ ಅಮೂರ್ತವಾದ ಐತಿಹಾಸಿಕ ನೆಲೆಗಳನ್ನು–ಸಾಂದರ್ಭಿಕ ವಾಗಿಸುವ (Relevent) ಕ್ರಿಯೆಗಳೇ ಹೆಚ್ಚು ಪ್ರಾಮಾಣಿಕ ಹಾಗೂ ಮಾನವೀಯ ವಾಗಿರುತ್ತವೆ. ಮನುಷ್ಯ ಬದುಕಿಗೆ ಸಿಕ್ಕುವ ಕ್ಷಣಗಳು ಎಷ್ಟೇ ಆಕಸ್ಮಿಕವಾದರೂ ಈ ಆಕಸ್ಮಿಕವೇ ಅವನನ್ನು ವಿಶಿಷ್ಟ ಇತಿಹಾಸಧ ಭಾಗವನ್ನಾಗಿ ಮಾಡಿಬಿಡುವ ಸ್ವರೂಪಗಳನ್ನು ಅವನ ಕ್ರಿಯೆಗಳೇ ವ್ಯಕ್ತಮಾಡಿಸುತ್ತಹೋಗುತ್ತವೆ.

'ಮುಖಾಮುಖಿ' 'ಕತೆಯಾದಳು ಹುಡುಗಿ' ಹಾಗೂ 'ಕತೆಯಲ್ಲಿಬಂದಾತ' ಈ ಮೂರೂ ಕಥೆಗಳು ಸೃಜನಕ್ರಿಯೆ ಹಾಗೂ ಜೀವನಾನುಭವ ಸಂಬಂಧದ ಶೋಧನೆಯ ಮೂರು ಮುಖ್ಯ ನೆಲೆಗಳನ್ನು ಸೂಚಿಸುತ್ತವೆ ಎಂದುಹೇಳಬಹುದು.

ನಮ್ಮ ಗ್ರಹಿಕೆಗೆ ಅಳವಿಗಿಂತ ಆಚೆಗೆ ನಿಗೂಢವಾಗಿಯೇ ಉಳಿಯುವ ಅನು ಭವದ ವ್ಯಾಪ್ತಿಯನ್ನು 'ಮುಖಾಮುಖಿ' ಕಥೆ ವಿವರಿಸುತ್ತದೆ. ಇಲ್ಲಿಯ ಮುಖಾ ಮುಖಿ ಬಹಳ ವಿಶಿಷ್ಟವಾದದ್ದಾಗಿದೆ. ಬದುಕು, ಮನುಷ್ಯಸ್ವಭಾವಗಳು- ಗ್ರಹಿಕೆಯನ್ನು ಸುಳ್ಳು ಮಾಡುತ್ತ ಅದರ ಮಿತಿಯನ್ನು ಎತ್ತಿ ತೋರಿಸುತ್ತ ಹೋಗು ತ್ತವೆ. ಆದರೆ ಹೀಗೆ ತೋರಿಬರುವ ಬದುಕು, ಸ್ವಭಾವಗಳು ಗೂಢತೆಯನ್ನು ಒಡೆದು ಬೆಚ್ಚಿಸುವ ಅನುಭವವನ್ನು ಕೊಡುತ್ತವೆ. ಆದರೆ ಕೊನೆಗೂ 'ಪೊತ್ತೆ ಮೀಸೆಯವನ ನಿಗೂಢ ನಿರ್ಗಮನ. ಒಡೆಯಲಾರದ ರಹಸ್ಯ ಕತ್ತಲೆಯಾಗಿಯೇ ಕಾಡುವ, ಹೊಸ ದಾದ ಗ್ರಹಿಕೆಗೆ ಆಹ್ವಾನ ಮಾಡುವ ಸ್ವರೂಪದ್ದಾಗಿಯೇ ಉಳಿಯುತ್ತದೆ. ಕತೆಯಾದಳು ಹುಡುಗಿ' ಕಥೆಯಲ್ಲಿ ಚಿತ್ತಾಲರ ಸೃಜನ ಶೀಲತೆಯನ್ನು ಕುರಿತ ವ್ಯಾಖ್ಯಾನವೇ ಬೇರೆಯ ರೀತಿಯದ್ದಾಗುತ್ತದೆ. ಈ ಜಗತ್ತಿಗೆ ಸುಂದರ, ಮೋಹಕ ಮಗುವಾಗಿ ಹುಟ್ಟಿದ ಜಾನಕಿ ತನ್ನ ಎಳೆಯ ಹದಿಮೂರನೆಯ ವಯಸ್ಸಿನಲ್ಲಿ ರಕ್ತದ ಕ್ಯಾನ್ಸರಿನಿಂದ ಸಾಯುತ್ತಾಳೆ. ತನ್ನ ಸಾಯುವ ಕಾಲದವರೆಗೂ ತನ್ನ ಸುತ್ತಣ ಎಲ್ಲರ ಮನವನ್ನು ಸೂರೆಗೊಂಡು, ಹೃದಯವನ್ನು ಕಲಕಿಬಿಟ್ಟ ಈ ಜಾನಕಿ ತನ್ನ ತಂದೆಗೆ ಕೇಳಿದಾದರೂ ಏನು ? 'ತನ್ನ ಬಗ್ಗೆ ಒಂದು ಕತೆ ಬರೆ' ಎಂದು ಕೇಳಿದ

ಮುಗ್ಧ ಜಾನಕಿ ತನಗರಿವಿಲ್ಲದಂತೆ ಸಾವನ್ನು ಜಯಿಸುವ ನೆನಪು - ಬಾಂಧವ್ಯಗಳ ಪ್ರೇಮಕ್ಕಾಗಿ ಹಾತೊರೆದಳೆ ?

ತಂದೆಯಾದ ಕತೆಗಾರ ಕಥೆಯು ಸಾಮಾಜಿಕ ಮಹತ್ವವನ್ನು ಪಡೆಯಲು 'ಜಾಣರು ಒದಗಿಸಿದ ವಿಷಯ ಸೂಚಿಯನ್ನು' ಇಟ್ಟುಕೊಂಡು ಕಥೆ ಬರೆಯುತ್ತಾನೆ. ಪುಟ್ಟ ಜಾನಕಿ ಕಾರ್ಮಿಕನೊಬ್ಬನ ಮಗಳಾಗುತ್ತಾಳೆ. ತಂದೆ ಚಸ್ನಾಲ ದುರಂತದಲ್ಲಿ ಸತ್ತ ಸಮಯದಲ್ಲಿ ಒಂಟಿಯಾಗಿ ಆಕಾಶದಲ್ಲಿಯ ಚಿಕ್ಕೆಗಳಲ್ಲಿ ದೃಷ್ಟಿನೆಟ್ಟು ದಾರಿ ಕಾಯು ತ್ತಿದ್ದ ಈ ಮುಗ್ಧ ಬಾಲೆಯನ್ನು ಸ್ಕೂಟರಿನ ಸವಾರರು ಅತ್ಯಾಚಾರ ಮಾಡುತ್ತಾರೆ.

ಕಥೆಯು ಕಲಾತ್ಮಕತೆಗಾಗಿ ಮೂವರು ಗೆಳೆಯರಿಂದ ಹೊಗಳಿಸಿಕೊಂಡ ಕತೆಗಾರ ನಿಗೆ ಮೊದಲಬಾರಿಗೆ ತಾನು ತನ್ನ ಮಗಳ ಸಾವಿಗೆ ಕಾರಣನಾದೆ ಎನ್ನಿಸುತ್ತದೆ. ಜಾನಕಿಯ ಮುಗ್ಧ ಬಯಕೆಯ ಮೇಲೆ ನಡೆದ ಅತ್ಯಾಚಾರದಂತೆ ತೋರುವ ಈ ಘಟನೆ ಕತೆಗಾರನನ್ನು ಪ್ರೀತಿಯ ಅರ್ಥಪೂರ್ಣ ನೆಲೆಗಳ ಕಡೆಗೆ ತಿರುಗಿಸುತ್ತದೆ. ಬದುಕಿನ ಕ್ರೌರ್ಯಕ್ಕೆ ಸಂಕೇತವಾಗುವ ಕತೆಯ ಜಾನಕಿಯ ಸಾವೂ ಸಹ ಕತೆಗಾರನ ಮಗಳು ಜಾನಕಿಯ ಆಶಯದ ಹಾಗೆ ಪ್ರೇಮಗಳ, ಪ್ರೀತಿಯ ಜೀವಂತತೆಯನ್ನು ಅಪೇಕ್ಷಿಸುವಂಥದ್ದು. ಆದ್ದರಿಂದಲೇ ಅನಾಥಾಶ್ರಮದಿಂದ ಹೆಣ್ಣು ಮಗುವನ್ನು ತಂದು ಪ್ರೀತಿಯ ಜಾನಕಿಯ ಹೆಸರಿನಲ್ಲೇ ಬೆಳೆಸಿದ ಘಟನೆಯೂ ಅರ್ಥಪೂರ್ಣ ವಾಗಿದೆ.ಸೃಜನಶೀಲತೆಯನ್ನು, ರಕ್ತ ಮನಸ್ಸುಗಳಿಂದ ಪೋಷಿತವಾದ ಜೈವಿಕಕ್ರಿಯೆ ಯಂತೆ ಕಾಣಬೇಕೆನ್ನುವ ಆಶಯವು ಇಲ್ಲಿ ಮುಖ್ಯವಾಗಿ ಸೂಚಿಸಲಾಗಿದೆ.

'ಕತೆಯಲ್ಲಿ ಬಂದಾತ' ಕತೆಯಲ್ಲಿನ ವೋಮು ಹೊಸ ಅನುಭವ, ಕ್ರಿಯೆಗೆ ಆಹ್ವಾನ ಕೊಟ್ಟವನು. "ಇಲ್ಲಿಯ" ಈ ಬಣ್ಣ ಬಣ್ಣದ ಕುರ್ಚಿಗಳಲ್ಲಿ ಬೆನ್ನೊರಗಿ ಕೂತಾಗ ತಂಪು ಬೆಳಕಿನಲ್ಲಿ ಒಡಮೂಡಿ ಬರುವ ವಾಸ್ತವತೆ ಇದೆಯಲ್ಲ ಅದರಿಂದ ಬೇರೆಯಾದ ಒಂದು ಲೋಕವಿದೆ. ಸುಡುವ ಬಿಸಿಲಿನಲ್ಲಿ ಬೇಯುತ್ತದೆ. ಸುರಿವ ಮಳೆಯಲ್ಲಿ ತೊಯ್ದು ಒದ್ದೆ ಮುದ್ದೆಯಾಗುತ್ತದೆ. ನಿಮ್ಮನ್ನು ಕ್ರಿಯೆಗೆ ಆಹ್ವಾನಿಸು ತ್ತದೆ. ಕ್ರಿಯೆಗೆ ಹೆದರಿಕೊಂಡ ಮಾತ್ರಕ್ಕೆ ತಲೆ ಮರೆಯಿಸಿಕೊಳ್ಳಬೇಡಿ. ಕನಿಷ್ಠ, ಅಲ್ಲಿ ಒಮ್ಮೆಯಾದರೂ ಬಂದು ಕಣ್ಣು ಬಿಟ್ಟುನೋಡಿ. ಕ್ರಿಯೆಗೆ ಬೇಡದ ಧೈರ್ಯ ತಂತಾನೆ ಕುದುರೀತು" ಎಂದು ಹೇಳಿದ ವೋಮು, ತನಗೆ ತಾನೇ ಒಂದು ದೊಡ್ಡ ಅನುಭವವಾಗಿ ಮಾರ್ಪಡುತ್ತಾನೆ. ಕ್ರಿಯೆಯ ಮೂಲಕವೇ ಅರ್ಥಪೂರ್ಣ ಬದುಕಿನ ಆಶಯಗಳನ್ನು ರೂಪಿಸಲು ಪ್ರಯತ್ನಿಸಿದ ವೋಮು ಕತೆಯ ನಾಯಕ-ಕತೆಗಾರನ ತೀವ್ರವಾದ ಹುಡುಕಾಟಕ್ಕೆ ಕಾರಣನಾಗುತ್ತಾನೆ. ಕತೆಗಾರನ ಆಶಾವಾದ ಕತೆಯ ಹೆಚ್ಚಳಕ್ಕೆ ಅವಕಾಶ ಮಾಡಿಕೊಡುತ್ತದೆ. ಈ ಆಶಾವಾದ ಕೇವಲ 'ಯುಟೋಪಿ ಯನ್' ಅಲ್ಲ. ಅವನ ಹುಡುಕುವಿಕೆಯು ಪ್ರಾಮಾಣಿಕತೆ, ಕ್ರಿಯಾತ್ಮಕತೆ ಇವೆರಡನ್ನೂ ಒಳಗೊಂಡ ಅಥೆಂಟಿಕ್ ಬಂಡಾಯಗಾರನ ಕಡೆಗಿದೆ.

ಕಥಾತಂತ್ರ ಹಾಗೂ ಅನುಭವ ಇವುಗಳ ಹೊಂದಾಣಿಕೆಯ ದೃಷ್ಟಿಯಿಂದ ಈ ಸಂಕಲನದಲ್ಲಿ 'ತ್ರಯೋದಶ ಪುರಾಣ' 'ಮುಖಾಮುಖಿ' ಹಾಗೂ 'ಕತೆಯಲ್ಲಿ

ಬಂದಾತ ಮನೆಗೂ ಬಂದು ಕಸ ತಟ್ಟಿದ'–ಈ ಮೂರೂ ಕತೆಗಳೂ ಅದ್ಭುತ ಯಶಸ್ಸನ್ನು ಗಳಿಸುತ್ತದೆ. ಅಗಾಧ ಆಶಯದ ಇನ್ನೊಂದು ಕತೆ 'ಕತೆಯಾದಳು ಹುಡುಗಿ' ಕಥೆಯಲ್ಲಿ ಕೆಲವು ಕಡೆ ಕಥೆಯ ಸ್ವರೂಪವೇ ಬಲವಂತವಾಗಿ ರೂಪುಗೊಳ್ಳುತ್ತಿರುವಂತೆ ಅನ್ನಿಸುತ್ತದೆ. ಕತೆಯ ಬೆಳವಣಿಗೆಯಲ್ಲಿ ಮುಖ್ಯ ಪಾತ್ರ ವಹಿಸುವ ಒಂದು ಘಟನೆ ಯನ್ನು ಇಲ್ಲಿ ಉದಾಹರಣೆಗೆಂದು ನೋಡಬಹುದು. ತನ್ನ ಪ್ರೇಮದ ಮುಗ್ಧ ಮಗುವನ್ನು ಕಳೆದುಕೊಂಡ ತಂದೆಯು ತಾನು ಕಥೆಯನ್ನು ಬರೆಯುವ ರೀತಿಯನ್ನು ತಾನೇ ವ್ಯಂಗ್ಯದ ಧಾಟಿಯಲ್ಲಿ ಹೇಳಿಕೊಳ್ಳುತ್ತಾನೆ.

ಈ ವ್ಯಂಗ್ಯವೇ ಲೇಖಕರ ಬೌದ್ಧಿಕ ಆಲೋಚನೆಯ ವಿಚಾರ, ತರ್ಕಗಳನ್ನು ಒತ್ತಾಯಪೂರ್ವಕವಾಗಿ ತಂದು ಕಥೆಯೊಳಗೆ ಸೇರಿಸಿದಂತೆ ಅನ್ನಿಸುತ್ತದೆ.

ಒಟ್ಟಾರೆ ಮೇಲಿನ ಸಮೀಕ್ಷೆಯಲ್ಲಿ ಚಿತ್ತಾಲರ ಕಥೆಗಳ ಕೆಲವು ವೈಶಿಷ್ಟ್ಯ ಗ ನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಈ ಕಥೆಗಳು ಇನ್ನೂ ಅರ್ಥ ಪೂರ್ಣ ನೆಲೆಗಳ ಆಶಯಗಳನ್ನು ಹೊಂದಿರುವುದರಲ್ಲಿ ಅನುಮಾನವಿಲ್ಲ. ಅವುಗಳ ಸೂಕ್ಷ್ಮ ಅಧ್ಯಯನಕ್ಕೆ ಅವಕಾಶವಿದೆ ಎನ್ನುವುದೇ ನನ್ನ ನಂಬುಗೆಯಾಗಿದೆ.

ಆಯ್ದ ಕತೆಗಳು : ಕ. ವೆಂ. ರಾಜಗೋಪಾಲ

ಕ.ವೆಂ. ರಾಜಗೋಪಾಲರ ಹನ್ನೆರಡು ಕತೆಗಳಿರುವ ಸಂಕಲನವಿದು. ಇವರ ಕತೆಗಳೆಲ್ಲದರಲ್ಲೂ ಕ. ವೆಂ. ಅವರು, ಜೀವನದ ದುಷ್ಟ ಹಾಗೂ ಒಳ್ಳೆಯ (Evil and good) ಶಕ್ತಿಗಳ ಸ್ವರೂಪವನ್ನು ಹಿಡಿಯುವ ಪ್ರಯತ್ನ ಮಾಡುತ್ತಾರೆ. ಕಥೆ ಗಳಲ್ಲಿ ಕಂಡುಬರುವ ಘಟನೆಗಳು, ಈ ಶಕ್ತಿಗಳ ಮೂರ್ತ ಸ್ವರೂಪವನ್ನು ಹುಡುಕುವ ನೆಲೆಯಲ್ಲಿಯೇ ಹೆಚ್ಚು ಅರ್ಥಪೂರ್ಣವಾಗುತ್ತವೆ. ಕ.ವೆಂ. ಅವರ ಕಥೆಗಳಲ್ಲಿ ಈ ಎರಡೂ ಸ್ವರೂಪಗಳನ್ನು ಎತ್ತಿತೋರಿಸುವುದೇ ಮುಖ್ಯವಾದ ತಾತ್ವಿಕ ನೆಲೆಯೂ ಆಗಿದೆ ಎನ್ನಬಹುದು. ಮಾನವತಾವಾದದ ನೆಲೆಯೂ ಈ ಕಥೆಗಳ ಒಡಲಲ್ಲಿ ಹರಿಯು ತ್ತಿರುವ ಧಾರೆಯಾಗಿದೆ. ಹೀಗಾಗಿ ಅನೇಕ ಕಥೆಗಳು ಈ ಸಂಕಲನದಲ್ಲಿ ಗಮನ ಸೆಳೆಯುವಂಥವುಗಳಾಗಿವೆ. 'ಆಕಸ್ಮಿಕರಲ್ಲಿ ಒಂದು ಸುಂದರ ಬದುಕು', 'ಅವಲಂಬನೆ', 'ಹೂಗೊಂಚಲು-ಗೊದ್ದಗಳು', 'ಹೊಲತಿಯಹಾಳು'—ಈ ಕಥೆಗಳೆಲ್ಲ ಜೀವನದಲ್ಲಿ ಅಥೆಂಟಿಕ್ ಆಗಿಯೇ ಪ್ರವರ್ತಿಸುವ ಪ್ರೇಮ, ಕ್ರೂರತ್ವಗಳನ್ನು ಎತ್ತಿತೋರಿಸುತ್ತವೆ.

ಕ.ವೆಂ. ಅವರ ಕಥೆಗಳಲ್ಲಿ ಕಾಣುವ ಮಾನವತಾವಾದಿ ನೆಲೆಗಳು ಕತೆಗಳ ವಿಶಿಷ್ಟತೆಗೆ ಕಾರಣವಾಗಿರುವಂತೆ, ಅವುಗಳ ಮಿತಿಗೂ ಕಾರಣವಾಗಿವೆ. ಅನೇಕ ಕಥೆಗಳಲ್ಲಿ ವಿವರಗಳಾಗಿ ಪ್ರಕಟಣೆಗೊಳ್ಳುವ ಘಟನೆಯು ಅನುಕಂಪವನ್ನು ಕೆರಳಿಸ ಲಿಕ್ಕಾಗಿಯೇ ನಿರೂಪಗೊಳ್ಳುತ್ತವೆ. 'ಹಸಿವು' 'ಒಂದು ನೊಣದ ಪ್ರಸಂಗ' ಇವುಗಳನ್ನು ಉದಾಹರಣೆಗಳಾಗಿ ಕೊಡಬಹುದು.

ಕ.ವೆಂ. ಅವರ ಕಥನಶೈಲಿಯ ಒಂದು ವಿಶಿಷ್ಟ ಅಂಶವನ್ನು ಇಲ್ಲಿ ಸೂಚಿಸಬಹುದು. ಇವರ ಕೆಲವು ಕತೆಗಳು Fantasy ಯನ್ನೂ, ತರ್ಕಕ್ಕೆ ವಿವರಿಸಲಾಗದ ಸನ್ನಿವೇಶಗಳು ಸಂದರ್ಭಗಳನ್ನೂ ಬಳಸಿಕೊಳ್ಳುತ್ತವೆ. Fantasyಯನ್ನು ಬಳಸಿದ ಎರಡು ಕತೆಗಳು 'ಆಶೆಯುಶಿಶು' ಹಾಗೂ 'ಹಸಿವು'—ಅದ್ಭುತವಾದ ಕಲ್ಪನಾಲೋಕವೊಂದನ್ನು ಸೃಷ್ಟಿಸುತ್ತವ. ಈ ಕಲ್ಪನೆಯ ಸತ್ವವೇ ಕಥೆಯ ರೂಪವೊಂದಕ್ಕೆ ಬಿಗಿಯನ್ನು ಕೊಡುತ್ತದೆ. ವಾಸ್ತವ ಬದುಕಿನ ನೆಲೆಯಲ್ಲಿಯ, ಕಥೆಗಾರ ಹೇಳಬೇಕೆಂದು ಅಪೇಕ್ಷಿಸಿದ ಧೋರಣೆಯನ್ನು ಈ ತಂತ್ರವು ಕುಂದಿಲ್ಲದಂತೆ ನೆರವೇರಿಸುತ್ತದೆ. ಕ.ವೆಂ. ಅವರ ಕಥನಶೈಲಿಯ ಬಂಧ ಹಾಗೂ ವಸ್ತುವಿನ ನಿರ್ವಹಣೆ ಈ ಹೆಚ್ಚು ಸಮರ್ಥವಾ ತಂತ್ರದಲ್ಲೇ ರೂಪುಗೊಳ್ಳುತ್ತವೇನೋ ಅನ್ನಿಸುವ ರೀತಿಯಲ್ಲಿ ಇವು ಉಳಿದ ಕತೆಗಳಿಗಿಂತ ಹೆಚ್ಚು ಯಶಸ್ವಿಯಾಗಿವೆ.

ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ : ಕೃಷ್ಣಮಾಸಡಿ

ಇದು ಕೃಷ್ಣ ಮಾಸಡಿಯುವರ ಮೊದಲ ಕಥಾಸಂಕಲನ. ರಾಜಣ್ಣನವರ ಕಥೆಗಳಲ್ಲಿ ಕಾಣುವ ವಸ್ತುವಿನ ಬದಲಾವಣೆಯಂತೆಯೇ ಮಾಸಡಿಯುವರ ಕಥೆಗಳಲ್ಲೂ ವಸ್ತುವಿನ ಆಯ್ಕೆಯಲ್ಲಿ ಕ್ರಮೇಣ ಬದಲಾವಣೆಗಳೂ ಆಗಿರುವುದು ಕಂಡುಬರುತ್ತದೆ. ಅತ್ಯಂತ ವೈಯಕ್ತಿಕವೆನ್ನಿಸುವ ಹೆಣ್ಣು-ಗಂಡಿನ ಅತೀವ ಕಾಮುವನ್ನು ಇವರ ಕೆಲವು ಕಥೆಗಳು, ಹಸಿಯಾದ ವೈಯಕ್ತಿಕ ಘಟನೆಯೆಂಬಂತೆ ನಿರೂಪಿಸುತ್ತವೆ. ಉದಾಹರಣೆಗೆ ಪುರುಷನ ಮುಂದೆ...ಸ್ತ್ರೀಯೆಂಬ' ಸುಶೀಲಿಯ ಪ್ರಣಯ ಸಾರ್ವಜನಿಕವಾದ ಬಗೆ' 'ದೆವ್ವ ಮತ್ತು ಕಾಮು' 'ಶಿಕಾರಿ' ಈ ಕಥೆಗಳನ್ನೇ ಗಮನಿಸಬಹುದು. ಕಥೆಯಲ್ಲಿ ಘಟನೆಗಳೆಲ್ಲ ಕೇವಲ 'ಕಾಮುಕ್ಕಾಗಿ ಕಾಮು' ಎನ್ನುವ ಪಾತಳಿಯಲ್ಲೇ ಉಳಿದು ಬಿಡುವುದರಿಂದ ಹೆಚ್ಚು ಅರ್ಥವ್ಯಾಪ್ತಿಗೆ ಅವಕಾಶಮಾಡಿ ಕೊಡುವುದಿಲ್ಲ. ವಾಸ್ತವವಾಗಿ ಈ ಕಥೆಗಳ ವಸ್ತುವಿನ ಆಂತರ್ಯದಲ್ಲಿ ವ್ಯಕ್ತಿ, ಜೀವನ, ಪ್ರೇಮು, ಹಾಗೂ ಕಾಮುಕ್ಕೆ ಸಂಬಂಧಿಸಿದಂತೆ ಗಾಢಸತ್ವವನ್ನು ಒಳಗೊಳ್ಳುವ ಸೂಚನೆಗಳು ಇವೆ. 'ದೆವ್ವ ಮತ್ತು ಕಾಮು' 'ಶಿಕಾರಿ' 'ಪುರುಷನ ಮುಂದೆ...'ಈ ಕಥೆಗಳನ್ನೇ ಅವುಗಳು ಹುಟ್ಟಿಸುವ ವಾತಾವರಣವನ್ನು ನೋಡಿದರೂ ಸಾಕು, ಕಥೆಗಳು ಗಟ್ಟಿಗೊಳ್ಳಲು ಹಲವು ಸಾಧ್ಯತೆಗಳಿತ್ತೆಂದು ತೋರುತ್ತದೆ. ಆದರೆ ಮಾಸಡಿಯವರು ಅನುಭವಗಳನ್ನು ಗ್ರಹಿಸಿದ ನೆಲೆಗಳು ಕೇವಲ 'ಕಾಮು' ಪಾತಳಿಯ ನೆಲೆಯವು. ಹೀಗಾಗಿ ಕಥೆಗಳಿಗೆ ಸಾಹಿತ್ಯಿಕ ಶಕ್ತಿ ಸಾಧ್ಯತೆಗಳು ಕಡಿಮೆಯಾಗಿವೆ.

ಆದರೆ ಕೃಷ್ಣಮಾಸಡಿಯ 'ಕಳೆದು ಹೋಗಿದ್ದೇನೆ'—ಈ ಕಥೆ, ಮೇಲೆ ವಿವರಿಸಿದ ಮಿತಿಯನ್ನು ದಾಟುವ ಪ್ರಯತ್ನದಲ್ಲಿ ಯಶಸ್ವಿಯಾಗಿದೆ. ಪ್ರೇಮು ಹಾಗೂ ಕಾಮುಗಳ ನೆಲೆಯಿಂದ ಪ್ರಾರಂಭವಾಗುವ ಈ ಕಥೆಯ ವಸ್ತುವಿನಲ್ಲಿ—ವ್ಯಕ್ತಿಯು ಜೀವನಕ್ಕೆ

ಅತ್ಯಂತ ನಿಸ್ಸಹಾಯಕ ಪರಿಸ್ಥಿತಿಯಲ್ಲಿ ಅಧೀನನಾಗಿ ಬಿಟ್ಟಿರುವ ಚಿತ್ರಣವಿದೆ. ಕಥನ ಶೈಲಿಯ ವಿಧಾನ ಕತೆಯ ದುರಂತ ಧಾಟಿಯನ್ನು ಕೊನೆಯವರೆಗೆ ಸಮರ್ಥವಾಗಿ ಹಿಡಿದಿಟ್ಟಿದೆ.

ಸಂಕಲನದ ಇನ್ನುಳಿದ ಕಥೆಗಳು ಮಾಸಡಿಯವರ ಕಥೆಯ ಇನ್ನೊಂದು ಬದಲಾವಣೆಯನ್ನು ತೋರಿಸುತ್ತವೆ. ಈ ಕಥೆಗಳು ಭ್ರಷ್ಟಗೊಂಡ ಸಮಾಜದ ಸ್ವರೂಪ ಗಳನ್ನು ಎತ್ತಿ ತೋರಿಸಲು ಪ್ರಯತ್ನಪಟ್ಟಿವೆ. ಈ ಕಥೆಗಳಲ್ಲೂ ಹೇಳಿಕೆಯ ನೆಲೆಯಲ್ಲಿಯೇ ಉಳಿಯುವ, 'ಕೈದಿಗಳು' ಕಥೆಯಿಂದ ಹಿಡಿದು, ಅನುಭವವನ್ನು ಸಾಹಿತ್ಯಿಕ ಶಿಸ್ತಿಗೆ ಒಗ್ಗಿಸಿಕೊಳ್ಳುವುದರಲ್ಲಿ ಯಶಸ್ವಿಯಾಗುತ್ತಿರುವ 'ಒಂದು ಅಜ್ಜಿಯ ಸಂಪೂರ್ಣ ವರದಿ' 'ಪಳಕಂಡಿ ಪರಮಣ್ಣನ ಪರಕಾಯ ಪ್ರವೇಶ' 'ದುರಂತದ ಕೆಲವು ಮುಖಗಳು' —ಮುಂತಾದ ಕಥೆಗಳವರಗೆ ಇವರ ಬರವಣಿಗೆಯ ಬೆಳವಣಿಗೆ ಕಂಡು ಬರುತ್ತದೆ. ಮೇಲಿನ ಮೂರೂ ಕಥೆಗಳೂ ಈ ಸಂಕಲನದ ಯಶಸ್ವಿ ಕಥೆಗಳು. ಈ ಮೂರು ಕಥೆಗಳು ಸಮಾಜದ ಒಂದೇ ತಳಹದಿಯಿಂದ ಹುಟ್ಟಿವೆ ಎನ್ನಬಹುದಾದ ಮೂರು ಸ್ವರೂಪಗಳನ್ನು ಕಥೆಯ ಸ್ವರೂಪದಲ್ಲಿ ಹಿಡಿದಿಡುವ ಪ್ರಯತ್ನದಲ್ಲಿ ಯಶಸ್ವಿಯಾದ ಶೈಲಿ, ನಿರೂಪಣಾ ಕ್ರಮವೊಂದನ್ನು ಸಾಧಿಸುತ್ತಿರುವುದು ಗೋಚರವಾಗುತ್ತದೆ. ಅನಂತಮೂರ್ತಿಯವರು ಸರಿಯಾಗಿಯೇ ಗುರುತಿಸಿದಂತೆ ಕೃಷ್ಣಮಾಸಡಿಯ ಕಥೆಗಳ ವೈಶಿಷ್ಟ 'ಜೀವನ'ದ ಅನೇಕ ಸಾಧ್ಯತೆಗಳು ಕಳೆದು ಹೋಗುವ, ಕ್ರಮೇಣ ಅವನತಿಯ ಹಾದಿ ಹಿಡಿಯುವ ಬದುಕಿನ ದುರಂತ' ವೇ ಆಗಿದೆ.

ಇಂಥ ಪ್ರೇರಣೆಗಳು. ಬದುಕನ್ನು ಗಾಢವಾಗಿ ಕಲಕುವ ಇಂಥ ಸನ್ನಿವೇಶಗಳು ಬರಹಗಾರನಿಗೆ ಬೆಚ್ಚಿಸುವ ವಸ್ತುವಾಗಿ ಕಾಡಲು ಸಾಧ್ಯ. ಸಾಹಿತ್ಯದಲ್ಲಿ ಹೀಗೆ ಬೆಚ್ಚಿಸುವ, 'ಎದೆಯನ್ನು ಸೀಳಿ ತೋರುವ' ತೀವ್ರತೆಯ ಬರಹಗಳು ಕೃಷ್ಣಮಾಸಡಿ ಯವರಲ್ಲಿ ಮೂಡಿಬರಲೆಂದು ಪ್ರೀತಿಯಿಂದ ಆಶಿಸುತ್ತ—ಈ ಪ್ರಥಮ ಸಂಕಲನ ವನ್ನು ಅದಕ್ಕೆ ಮುನ್ಸೂಚನೆಯೆಂದು ಭಾವಿಸುತ್ತೇನೆ.

ಎರಡು ಖಂಡಗಳ ನಡುವೆ: ಎಂ. ಎನ್. ಜಯಪ್ರಕಾಶ್

ಜೈಪ್ರಕಾಶರ ಮೊದಲ ಕಥಾಸಂಕಲನವಿದು. ಈ ಸಂಕಲನದ ಎಲ್ಲ ಕಥೆಗಳೂ ಭಿನ್ನ ಭಿನ್ನ ವಾತಾವರಣದ ಹಿನ್ನೆಲೆಯಿಂದ ಹುಟ್ಟಿ ಬಂದದ್ದಾಗಿದೆ. ಈ ಎಲ್ಲ ವಾತಾವರಣ, ವ್ಯಕ್ತಿಗಳು, ಹಾಗೂ ಅವುಗಳ ಸುತ್ತ ನಡೆಯುವ ಘಟನೆಗಳು— ಇವುಗಳೆಲ್ಲವನ್ನೂ ಹಿಡಿದಿಡುವ ಅಥವಾ ಅರ್ಥೈಸುವ ಲೇಖಕನ ತಾತ್ವಿಕ ನೆಲೆಯ ಕೊರತೆಯಿಂದಾಗಿ ಇವುಗಳ ಅರ್ಥವ್ಯಾಪ್ತಿಯು ಮೊಟಕಾಗಿದೆ. ಜೈಪ್ರಕಾಶರು ತಮ್ಮ ಎಲ್ಲ ಕಥೆಗಳಲ್ಲಿ ಮೊದಲೇ ರೂಪುಗೊಂಡಿರುವ ಕೆಲವು ಕಥಾ ವಸ್ತುವಿನ ಪರಿಕರಗಳನ್ನು ತಮ್ಮ ಬರವಣಿಗೆಯ ಶೈಲಿಯ ಜೊತೆಗೆ ಪ್ರಯೋಗ ಮಾಡು ತ್ತಿದ್ದಾರೇನೋ ಎನ್ನಿಸುವಂತಿದೆ ಇಲ್ಲಿನ ಕಥೆಗಳು. ಉದಾಹರಣೆಗೆ 'ಎರಡು ಖಂಡಗಳ ನಡುವೆ' ಕಥೆಯಲ್ಲಿ ಪಶ್ಚಿಮ-ಹಾಗೂ ಭಾರತ ಸಂಸ್ಕೃತಿಯ ಅಂತರಗಳನ್ನು

ವ್ಯಕ್ತಿಗಳ ಘಟನೆಯೊಂದರ ಹಿನ್ನೆಯಲ್ಲಿ ನೋಡುವುದು; 'ಮೂರನೇ ಆಯಾಮದಾಚೆ' ಕಥೆಯ ಅತೃಪ್ತ ಹೆಣ್ಣು, ಹರೆಯದ ಯುವಕ ಇವರ ನಡುವಿನ ಘಟನೆ; ಎಲ್ಲಾ ಹೀಗೆಯೆ ಏನೆಂದರೆ, 'ಕಥೆಯು ನಿರುದ್ಯೋಗಸ್ಥನಾದ ಯುವಕನ ತುಮುಲಗಳು...ಹೀಗೆ ಪೂರ್ವ ಸೂತ್ರವೊಂದು ಕಥೆಗಳ ಮೊದಲೇ ಸಿದ್ಧವಾಗಿ ಬಿಟ್ಟಂತೆ ತೋರುವ ಈ ಕತೆಗಳು ಬಹಳ ಮಾಮೂಲಿ ಜಾಡನ್ನು ಹಿಡಿದವುಗಳಂತೆ ತೋರುತ್ತವೆ.

ಕೆಲವು ಕಥೆಗಳಲ್ಲಿ ಮೂಡುವ ವಾತಾವರಣವು ಅನುಭವದ ಶೋಧನೆ ಹಾಗೂ ವ್ಯಕ್ತಿ-ಸಮಾಜ ಸಂಬಂಧದ ಸಮಸ್ಯೆಗಳನ್ನೆ ಕುರಿತ ಹಾಗೆ ಅನೇಕ ಪ್ರಶ್ನೆಗಳನ್ನು ಎತ್ತಬಹುದಾದ ಸಾಧ್ಯತೆಗಳನ್ನು ಪಡೆದಿದ್ದರೂ, ಜೈಪ್ರಕಾಶರ ಬರವಣಿಗೆಯಲ್ಲಿ ಅಮುಖ್ಯವಾದ ವಿವರಣೆಗಳು, ಹೆಚ್ಚು ಪ್ರಧಾನ ನೆಲೆಗಳನ್ನು ಪಡೆದುಕೊಂಡು ಬಿಡುವುದರಿಂದ ಅನುಭವಗಳು ತೆಳುವಾದ ಘಟನೆಗಳಾಗಿ ಅಂತ್ಯಗೊಂಡು ಬರುತ್ತವೆ.

ಸಂಕಲನದಲ್ಲಿ ನನಗೆ ಮೆಚ್ಚುಗೆಯಾದ ಕಥೆ 'ಹತ್ಯೆ'. ಈ ಕಥೆಯು ನೋಡಲು ಪ್ರಯತ್ನಿಸುವ ಮನಸ್ಸುಗಳ ಶೋಧನೆಯಿಂದಾಗಿ ಒಳ್ಳೆಯ ಕತೆಯೆನ್ನಬಹುದು ಆತಂಕಗೊಂಡ ಮನಸ್ಸು, ನಿಸ್ಸಹಾಯಕ ಪರಿಸ್ಥಿತಿ, ಸ್ವಾರ್ಥಸಾಧನೆಯ ಅನೇಕ ತಂತ್ರಗಳು—ಇವೆಲ್ಲವೂ ಮಾನವ ಪ್ರೀತಿಯನ್ನು ಮೆಟ್ಟಿ ನಿಂತ ವಾತಾವರಣವನ್ನು ಕತೆ ಹುಡುಕಲು ಪ್ರಯತ್ನಿಸಿದೆ. ವ್ಯಕ್ತಿಯ ವೈಯಕ್ತಿಕ ಭಾವನೆ, ಚಲನವಲನ ಗಳನ್ನು ಹೆಚ್ಚು ಪರೀಕ್ಷಿಸ ಹೊರಡುವ ಜೈಪ್ರಕಾಶರ ಕತೆಗಳಲ್ಲಿ, ಶೋಧನೆಯ ಮೌಲ್ಯವನ್ನು ಪಡೆಯಬೇಕಾದರೆ—ಕೇವಲ ವಿವರಗಳ ಜೋಡಣೆಯೇ ಪ್ರಧಾನ ವಾಗದೆ, ಅನುಭವದ ಅರ್ಥವತ್ತಾದ ನೆಲೆಗಳ ಆಳಕ್ಕಿಳಿದು ನೋಡುವ ಪ್ರಯತ್ನ ಗಳು ಬೇಕಾಗುತ್ತದೆ. ಅಂತಹ ಸೂಚನೆ 'ಹತ್ಯೆ' ಕತೆಯಲ್ಲಿ ಕಾಣುತ್ತದೆ.

ಬಾನಸವಾಡಿಯ ಬೆಂಕಿ : ಎಚ್. ಎಸ್. ವೆಂಕಟೇಶಮೂರ್ತಿ

ವೆಂಕಟೇಶಮೂರ್ತಿಯವರ ಈ ಸಂಕಲನದಲ್ಲಿ ಒಂಬತ್ತು ಕಥೆಗಳಿವೆ. ಇವರ ಹೆಚ್ಚು ಕಡಿಮೆ ಎಲ್ಲ ಕಥೆಗಳಲ್ಲೂ ನಿಗೂಢತೆಯನ್ನು ಉಳಿಸಿಕೊಳ್ಳಬೇಕೆಂಬ ಆಶಯವು ಎದ್ದು ಕಾಣುತ್ತದೆ. ಹೀಗಾಗಿ ಇವರ ಕಥೆಗಳ ಯಶಸ್ಸು ಹಾಗೂ ಸೋಲುಗಳು ಈ ಜೀವನದ ಘಟನೆಗಳ ಗೂಢತೆಯ ಅರ್ಥಪೂರ್ಣ ನೆಲೆಗಳ ಗ್ರಹಿಕೆಯ ಸಾಧ್ಯಾ ಸಾಧ್ಯತೆಗಳ ಮೇಲೆ ನಿಲ್ಲುತ್ತವೆ. ಇದಕ್ಕಾಗಿಯೇ ವೆಂಕಟೇಶಮೂರ್ತಿಯವರು ಕೆಲವು ಕಡೆ Fantasy ಗಳನ್ನು ಬೆಳೆಸುತ್ತಾರೆ. ಕೆಲವು ಕಡೆ ಕಥೆಯ ಬೆಳವಣಿಗೆ ಯಲ್ಲೇ ತಂತ್ರವಾಗಿ ಉಪಯೋಗಿಸುತ್ತಾರೆ. 'ಎಲ್ಲಿರುವೆ ಮಗನೆ', 'ಉಬ್ಬರ' ಈ ಕಥೆಗಳು-ನಿಗೂಢತೆಯ ಅರ್ಥಪೂರ್ಣ ನೆಲೆಗಳನ್ನು ಗ್ರಹಿಸುವುದರಲ್ಲಿ ಸೋಲುತ್ತವೆ. ಈ ಕಥೆಗಳಲ್ಲಿ ಇದು ಕೇವಲ ಶುಷ್ಕ ತಂತ್ರವಾಗಿ ಬಳಕೆಯಾಗುತ್ತದೆ.

ಗಾಢ ಅನುಭವಗಳು ಹಸಿಯಾಗಿ ತಟ್ಟುತ್ತಿರುವಾಗಲೇ ಈ ಪ್ರಖರ ಅನುಭವಗಳ ಮಧ್ಯದಲ್ಲೇ ಕೈಗೆಟಕಲಾರದ ಇಂದ್ರಿಯಗಳ ಗಡಿಯಾಚೆಯ ನಿಗೂಢ ವಲಯವಿದೆಯಲ್ಲ-ಅದು ತನ್ನ ಎಲ್ಲ Ambiguityಯ ನಡುವೆ ಬೆಚ್ಚಿಸುವಂಥದ್ದು. ತಿಳಿದೂ ತಿಳಿಯದಂಥದ್ದು ಆಗಿರುತ್ತದೆ. ಇಂಥ ನಿಗೂಢತೆ ಅರ್ಥಪೂರ್ಣವಾಗಿರಲು ಸಾಧ್ಯ. ಇಂಥ ಗಾಢತೆ ಇಲ್ಲಿಯ ಕಥೆಗಳಿಗೆ ಸಾಧ್ಯವಾಗಿಲ್ಲವೆನ್ನುವುದೇ ಇವುಗಳ ಮಿತಿಯನ್ನೂ ಸೂಚಿಸುತ್ತದೆ. (ತೇಜಸ್ವಿಯ ; ನಿಗೂಢ ಮನುಷ್ಯರು ಕರ್ವಾಲೋ, ಚಿತ್ತಾಲರ ; ಮುಖಾಮುಖಿ, ಕತೆಯಾದಳು ಹುಡುಗಿ ಈ ದೃಷ್ಟಿಯಿಂದ ಅತ್ಯಂತ ಯಶಸ್ವೀ ಕತೆಗಳು).

ಆದರೆ ವೆಂಕಟೇಶಮೂರ್ತಿಯವರ ಕೆಲವು ಕಥೆಗಳಲ್ಲಿ ಸೃಷ್ಟಿಯಾಗುವ ವಾತಾವರಣ, ಅವರು ಪ್ರಕೃತಿಯ ಸ್ವರೂಪವನ್ನು ಬಳಸಿಕೊಳ್ಳುವ ರೀತಿ—ಇವುಗಳು ತಮಗೆ ತಾವೇ ವಿಶಿಷ್ಟವಾಗಿವೆ. 'ತಲೆಗೊಂದು ಕೋಗಿಲೆ' ಈ ಅರ್ಥದಲ್ಲಿ ಬಹಳ ಸುಂದರವಾದ ಕಥೆ. ತಾವು ಗ್ರಹಿಸುತ್ತಿರುವ ವಾತಾವರಣವನ್ನು ಮೂರ್ತರೂಪಗೊಳಿಸುವಲ್ಲಿ ಬಳಸುವ ಶೈಲಿ, ಪೋಣಿಸುವ ದೃಶ್ಯಗಳು 'ತ್ರಿಶಂಕು' 'ಉಳಿಕೆ'—ಈ ಕಥೆಗಳಲ್ಲಿ ಸಮರ್ಥವಾಗಿ ಮೂಡಿಬಂದಿವೆ. ಇವುಗಳನ್ನು ಈ ಸಂಕಲನದ ಅತ್ಯುತ್ತಮ ಕಥೆಗಳೆಂದು ಹೇಳಬಹುದು. 'ಬಾನಸವಾಡಿಯ ಬೆಂಕಿ, ಕಥೆಯ ಧೋರಣೆ ಸೊಗಸಾಗಿರುವುದಾದರೂ ಒಂದು ಕಥೆಯ ಬಂಧದಲ್ಲಿ ಈ ವಸ್ತುವಿನ ಹರಹು ಅತ್ಯಂತ ಸಡಿಲಗೊಂಡಂತೆ ಕಾಣುತ್ತದೆ. ಬಹಳ ಸರಳ, ನೇರ ಎನಿಸಿಬಿಡುತ್ತದೆ.

ಗೆಸ್ಚರ್ : ಬಿ. ಆರ್. ಲಕ್ಷ್ಮಣರಾವ್

ಲಕ್ಷ್ಮಣರಾವ್ ಅವರ ಈ ಸಂಕಲನದ ಕಥೆಗಳೆಲ್ಲ ಹೆಚ್ಚುಕಡಿಮೆ ಗಂಡು-ಹೆಣ್ಣಿನ ಪ್ರೇಮದ ಸಮಸ್ಯೆಯ ನೆಲೆಯಿಂದ ಬೆಳೆಯುತ್ತದೆ. ಇಲ್ಲಿನ ಕಥೆಗಳಲ್ಲಿನ ಹೆಣ್ಣು-ಗಂಡುಗಳೆಲ್ಲ ಪರಿಸ್ಥಿತಿಗಳಿಗೆ ತಮ್ಮನ್ನು ತಾವು ವೈಮನಸ್ಸುಗಳನ್ನು ತೆತ್ತುಕೊಂಡು ಅಸಹಾಯಕರಾಗಿರುವವರು. ಜಾತಿಯ ಕಟ್ಟುಪಾಡುಗಳು, ಬಡತನ ಇಲ್ಲಿ ವ್ಯಕ್ತಿಚೈತನ್ಯಗಳನ್ನು ಕುಗ್ಗಿಸಿ ಬಿಟ್ಟಂಥ ವಾತಾವರಣಗಳಾಗಿ ಬರುತ್ತದೆ. ಇದು ಲಕ್ಷ್ಮಣರಾವ್ ಅವರ ಒಟ್ಟು ಕಥೆಗಳಿಗೆ ಅನ್ವಯವಾಗಬಹುದಾದ ಲಕ್ಷಣಗಳು.

ಮನುಷ್ಯನನ್ನು ಗಾಢವಾಗಿ ಕಾಡುವ ಸಮಸ್ಯೆಯು ಈ ಕಥೆಗಳ ಆಶಯವಾಗಿದ್ದರೂ ಕಥೆಗಳು ಎಲ್ಲಿಯೋ ಸಪ್ಪೆಯಾಗಿ ಬಿಡುತ್ತವೆ. ಅನೇಕ ಕತೆಗಳಲ್ಲಿ ವಿವರಣೆಯು ಸರಳ ನೆಲೆಗಿಳಿದುಬಿಡುತ್ತದೆ. ಯಾಕೆ ಹೀಗೆ?

ಇದಕ್ಕೆ ಕಾರಣಗಳನ್ನು ಲಕ್ಷ್ಮಣರಾವ್ ಅವರ ಕಥನ ತಂತ್ರವೊಂದರಿಂದ ಹುಡುಕಲು ಪ್ರಾರಂಭಿಸಬಹುದು. ಇಲ್ಲಿಯ ಪಾತ್ರಗಳನ್ನು ಛಿದ್ರಗೊಳಿಸಿದ ಎಲ್ಲ ಅನುಭವಗಳೂ ಮುಖ್ಯವಾಗಿ ಭೂತಕಾಲಕ್ಕೆ ಸೇರಿಹೋಗಿರುವಂಥವು. ಹೀಗಾಗಿ

ಬೌದ್ಧಿಕ ನೆಲೆ ಹಾಗೂ ತರ್ಕಗಳಿಂದ ಅವುಗಳನ್ನು ವಿವರಿಸುವ ಮಾರ್ಗವೇ ಮೂಲ ಭೂತವಾಗಿ ಅನುಭವವೊಂದನ್ನು ಸೋಸಿಬಿಟ್ಟಂಥ ಒಣ ಸಿಪ್ಪೆಗಳಂತೆ ಕಂಡುಬಿಡುವ ಅಪಾಯ ಇಲ್ಲಿ ಅನೇಕ ಕಡೆಗಳಲ್ಲಿ ಗೋಚರವಾಗುತ್ತದೆ. ಹೀಗಾಗಿ ಹಳಹಳಿಕೆ, ವ್ಯಥೆಗಳೇ ಇಲ್ಲಿಯ ಪ್ರಧಾನಧೋರಣೆಗಳಾಗಿ ಬಿಡುತ್ತವೆ. ಈ ತಂತ್ರವೇ ಮುಖ್ಯವಾಗಿ ಅನುಭವ ಸ್ಫೋಟದ ಕಂಪನಗಳನ್ನು, ಹಲವಾರು ನೋವುಗಳನ್ನೂ, ನಿಗೂಢತೆ ಯನ್ನು ಬಿಚ್ಚಲಾಗದ ಕಥೆಗಾರನ ಮಿತಿಯನ್ನು ಸೂಚಿಸುತ್ತದೆ.

ಹಳಹಳಿಕೆ, ಸರಳದ್ವಂದ್ವಗಳಲ್ಲಿ ನಿಲ್ಲುವ ಕಥೆಗಳು ಈ ಕಾರಣದಿಂದ ಅನುಭವದ ಅರ್ಥಸಾಧ್ಯತೆಗಳನ್ನು ಮಿತಿಗೊಳಿಸುತ್ತದೆ. 'ಯಾಕೆಂದರೆ' 'ಮೊಲೆ ಬೆಂಕಿ ಮುದುಕ ಇತ್ಯಾದಿ' 'ನಾಗರಿಕ'—ಈ ಕಥೆಗಳನ್ನು ಇಂಥ ಅಪಾಯಕ್ಕೆ ಸಿಕ್ಕವುಗಳೆಂದು ಹೇಳಬಹುದು.

ಭೂತ-ವರ್ತಮಾನದ ಕಾಲಗಳನ್ನು ಜೋಡಿಸಲು ಪ್ರಯತ್ನಿಸಿದ 'ದಾಖಲೆ' ಕಥೆ ಮೇಲಿನ ಅಪಾಯವನ್ನು ದಾಟುವ ನೆಲೆಯನ್ನು ತೋರಿಸುತ್ತದೆ. ಈ ಸಂಕಲನದ ಅತ್ಯುತ್ತಮ ಕಥೆ ಎಂದು ಇದನ್ನು ಗುರುತಿಸಬಹುದು.

ಶೈಲಾ ಟೀಚರ್ : ಬಿ. ಜಿ. ಸತ್ಯಮೂರ್ತಿ

'ಬುದ್ಧನದೇ ಚಿಂತೆ' ಕಥಾ ಸಂಕಲನವನ್ನು ತಂದ ನಂತರ ಈ ವರ್ಷ ಸತ್ಯ ಮೂರ್ತಿಯವರು ಇನ್ನೊಂದು ಸಂಕಲನವನ್ನು ತಂದಿದ್ದಾರೆ. ವಿಷಯ, ಹಾಗೂ ನಿರೂಪಣೆಯಲ್ಲಿ ಹಿಂದಿನ ಸಂಕಲನಕ್ಕಿಂತ ಬಹಳ ಬದಲಾವಣೆಗಳನ್ನು ಸಾಧಿಸಿರು ವುದನ್ನು ಈ 'ಶೈಲಾ ಟೀಚರ್', ಸಂಕಲನದ ಕಥೆಗಳಲ್ಲಿ ಗುರುತಿಸಬಹುದಾಗಿದೆ. ಇಲ್ಲಿಯ ಕಥೆಗಳು ಅಗಾಧ ಆಶಯಗಳನ್ನೇನೂ ಇಟ್ಟು ಹೊರಟಿಲ್ಲ. ಹೀಗಾಗಿರು ವುದರಿಂದಲೇ ಬಹುಪಾಲು ಕಥೆಗಳು ಓದುಗರ ಆಸಕ್ತಿಯನ್ನು ಕೆರಳಿಸುತ್ತದೆ. ಅನೇಕ ಕಡೆಗಳಲ್ಲಿ ತಮ್ಮ ಸರಳತೆ ಹಾಗೂ ಮಿತಿಯಾದ ಆಶಯಗಳಿಂದಲೇ ಯಶ ಸ್ಸನ್ನೂ ಗಳಿಸಿವೆ. 'ದುರಂತ' 'ಈಡೇರದ ಆಸೆ' 'ಆಶೀರ್ವಾದ' ಮುಂತಾದ ಕಥೆ ಗಳನ್ನು ಉದಾಹರಣೆಯನ್ನಾಗಿ ಕೊಡಬಹುದು.

ಈ ಸಂಕಲನದಲ್ಲಿ ನನಗೆ ಹೆಚ್ಚು ಪ್ರಿಯವಾದ ಕಥೆ 'ಹಿಂದಕ್ಕೆ ಸರಿದ ಅಲೆಗಳು'. ಸ್ವಾಮಿ ಹಾಗೂ ಒಬ್ಬ ವೇಶ್ಯೆ ತಮ್ಮಲ್ಲಿ ಕೊರತೆಯಾಗಿದ್ದಂಥ ಗುಣಗಳನ್ನು ಪರಸ್ಪರ ಕಂಡುಕೊಳ್ಳುತ್ತಾರೆ. ಆದರೆ ಇವರ ವ್ಯಕ್ತಿತ್ವದ ಆಳದಲ್ಲಿದ್ದ ಬಯಕೆಗಳು ಹಾಗೆಯೇ ಅಸ್ಪಷ್ಟ ನೆಲೆಯಲ್ಲಿಯೇ ಉಳಿದು ಬಿಡುವುದನ್ನು ಅತ್ಯಂತ ನಾಟಕೀಯ ತಿರುವಿ ನೊಂದಿಗೆ ಕಥೆಗಾರರು ನಿರೂಪಿಸುತ್ತಾರೆ. ಬಹುಶಃ ಕಥೆಗಾರರ ಆಶಯವನ್ನು ಮೀರಿ ಹೊಸ ಅರ್ಥವಿನ್ಯಾಸಗಳನ್ನು ಕಟ್ಟಿಕೊಡುವಲ್ಲಿ ಈ ಕಥೆಯು ಯಶಸ್ಸ್ನು ಗಳಿಸುತ್ತದೆ.

ತಮ್ಮ ಮಿತಿಯಾದ ವಸ್ತುಗಳಲ್ಲಿಯೇ ಪರಿಮಿತ ಆವರಣದಲ್ಲೇ ಇಲ್ಲಿಯ ಅನೇಕ ಕಥೆಗಳು ಯಶಸ್ಸುಗಳಿಸಿವೆ.

ಎಡತೊರೆ : ಬಿ. ರಾಜಣ್ಣ

ಬಿ. ರಾಜಣ್ಣನವರ ಪ್ರಥಮ ಕಥಾ ಸಂಕಲನವಿದು. ರಾಜಣ್ಣನವರ ಈ ಕಥಾಸಂಕಲನದ ಕತೆಗಳು, ಕತೆಗಾರರಾಗಿ ಅವರ ಬೆಳವಣಿಗೆಯನ್ನೂ ಸ್ಪಷ್ಟವಾಗಿ ಸೂಚಿಸುತ್ತದೆ. ಕಾಮ-ಪ್ರೇಮದ ಕಚ್ಚಾ ಎನಿಸುವ ಅನುಭವಗಳು ಯಾವ ತಾತ್ವಿಕ ನೆಲೆಯೂ ಇಲ್ಲದೆ ಕೇವಲ ಘಟನೆಗಳಾಗಿ ರೂಪುಗೊಳ್ಳುವ ನೆಲೆಯಿಂದ ಪ್ರಾರಂಭಿಸಿದ ಕತೆಯ ವ್ಯವಹಾರವನ್ನು ಕ್ರಮೇಣ ನಿವಾರಿಸಿಕೊಳ್ಳುವ ಪ್ರಯತ್ನವು ಇಲ್ಲಿನ ಕತೆಗಳ ಬೆಳವಣಿಗೆಯಲ್ಲಿ ಗಮನಿಸಬಹುದಾಗಿದೆ.

'ಬೆಕ್ಕು' ಹಾಗೂ 'ನಿಂಗಿಯೂ ಒಗರು ಜೋಳದ ಹೊಲವೂ' ಈ ಕತೆಗಳು ಘಟನೆಯನ್ನು ಕೇವಲ ಒಂದು ಘಟನೆಯನ್ನಾಗಿಯೇ ನೋಡುವ ಉದ್ದೇಶದಿಂದ ಹೊರಟವುಗಳು. ಸ್ಪಷ್ಟವಾಗಿ ಹೇಳುವುದಾದರೆ-ಕಾಮಕ್ಕೆ ಸಂಬಂಧಿಸಿದಂಥ ಉದಾರವಾದಿ ನಿಲುವುಗಳನ್ನು ಅತ್ಯಂತ ಸರಳ ಅರ್ಥದಲ್ಲಿ ಅನುಸರಿಸಿದಂಥವುಗಳು ಈ ಕತೆಗಳು. ಆದರೆ 'ಮಂಜನ ರಾಜಕೀಯ ಮತ್ತು ಭಾಗೀರಥಿಯಸ್ನೇಹ' 'ಭೂಸುಧಾರಣೆ'—'ಈ ಕತೆಗಳಲ್ಲಿ ಕಾಮ, ಪ್ರೇಮಗಳನ್ನು ವಿಶಿಷ್ಟ ದೃಷ್ಟಿಕೋನದಿಂದ ರಾಜಣ್ಣನವರು ಗಮನಿಸುತ್ತಾರೆ. 'ತಂದೆಯ ಸುಖದ ಸ್ವತ್ತು, ನೆಲದ ಸ್ವತ್ತಗಳನ್ನು' ಮಗ ತಾನು ಪಡೆದುಕೊಳ್ಳುವ ವಿವರ 'ಭೂಸುಧಾರಣೆ' ಕಥೆಯಲ್ಲಿದೆ. 'ಭೂಸುಧಾರಣೆ ಕತೆಯ ಶೀರ್ಷಿಕೆಯೇ ಒಂದು ರೀತಿಯಲ್ಲಿ ವ್ಯಂಗ್ಯದ ಧಾಟಿಯಲ್ಲಿ ರೂಪುಗೊಂಡಿದೆ. ಆದರೆ ಈ ಕತೆಗಿಂತ ಹೆಚ್ಚು ಅರ್ಥವ್ಯಾಪ್ತಿಗಳನ್ನು ಸಾಮಾಜಿಕ ಹರವುಗಳನ್ನು ಗಳಿಸಿ ಕೊಳ್ಳುವುದು 'ಮಂಜನ ರಾಜಕೀಯ...' ಎನ್ನುವ ಕಥೆ. ಕಾಳೇಗೌಡರು ಮುನ್ನುಡಿ ಯಲ್ಲಿ ಈ ಕಥೆಯ ಬಗ್ಗೆ ಸರಿಯಾದ ವಿಶ್ಲೇಷಣೆ ಮಾಡಿದ್ದಾರೆ—ಇದು 'ಸಾಮಾಜಿಕ ರಾಜಕೀಯ ಸ್ಥಿತಿಗತಿಯ ಹಿನ್ನೆಲೆಯಲ್ಲಿ ಗಟ್ಟಿ ಹೋರಾಟದ ಹಟವಿಲ್ಲದ ಅರೆಬರೆ ಕನಸಗಳ ಯುವಕ ಯುವತಿಯರ ವಿಫಲವಾಗುತ್ತಾ ಅವನತಿಯ ಕಡೆಗೆ ಸಾಗಿ, ಗುಂಪಿನಲ್ಲಿ ಮರೆಯಾಗುವ ಸ್ಥಿತಿಯನ್ನು ಹಿಡಿದಿಡಲು ಯತ್ನಿಸಿದೆ.'

ಆದರೆ ರಾಜಣ್ಣನವರ ಕಥೆಯಬರವಣಿಗೆಯ ಶಕ್ತಸಾಧ್ಯತೆಗಳು ರೂಪು ಗೊಂಡಿರುವುದು 'ಹುಚ್ಚನೂ ನಾನು' 'ಊರು' ಸೀನ ಮತ್ತು ದೇವರು. 'ಕಥೆಗಳಲ್ಲಿ ಪ್ರಗತಿಪರ ಆಶಯದ ವಿದ್ಯಾವಂತ ತರುಣಿ ತನ್ನ ಸುತ್ತಲ ಜಾತಿಯ ಅಮಾನವೀಯ ನೆಲೆಗಳು, ಸಂಪ್ರದಾಯಸ್ಥ, ನಂಬಿಕೆಗಳು ಹಾಗೂ ಹಣದ ದರ್ಪ ಇವುಗಳ ದಬ್ಬಾಳಿಕೆ ಗಳಿಂದ ಒಂಟಿಯಾಗಿ ಉಳಿಯಬೇಕಾದ ಅಸಹಾಯಕ, ಅನಿವಾರ್ಯ ಸ್ಥಿತಿಯನ್ನು ರೂಪಿಸುವಲ್ಲಿ ಈ ಎರಡೂ ಕತೆಗಳೂ ಯಶಸ್ವಿಯಾಗಿವೆ. ರಾಜಣ್ಣನವರಲ್ಲಿ ಉತ್ತಮ ಕತೆಯನ್ನು ಬರೆಯುವ ಸಾಮರ್ಥ್ಯವಿರುವುದನ್ನು ಈ ಕತೆಗಳು ಸ್ಪಷ್ಟವಾಗಿ ಸೂಚಿಸುತ್ತವೆ.

ಪುಷ್ಪಕ : ಅನುಪಮಾ ನಿರಂಜನ

ಅನುಪಮಾ ನಿರಂಜನ ಅವರ ಇನ್ನೊಂದು ಕಥಾಸಂಕಲನವಿದು. ಇವರ ಕಥೆಗಳ ಮುಖ್ಯ ವೈಶಿಷ್ಟ್ಯವೆಂದರೆ ಹತ್ತು ಹಲವಾರು ವಿಷಯಗಳು ಇಲ್ಲಿ ಕಥೆಗೆ ವಸ್ತುಗಳಾಗಿವೆ. ಹೀಗಾಗಿ ಕಥೆಗಳ ಹಿನ್ನೆಲೆಯಲ್ಲಿ ಕತೆಗಾರ್ತಿಯ ನಿರ್ದಿಷ್ಟ ನಿಲುವುಗಳು, ಗಾಢ ಕಾಳಜಿಗಳು ಸ್ಪಷ್ಟವಾಗುವುದಿಲ್ಲ.

ಇಲ್ಲಿಯ ಕತೆಗಳಲ್ಲಿ ಶ್ರೀಮಂತ ಬಡವರ ನಡುವಣ ಸಂಬಂಧದ ಕೆಲವು ಸಮಸ್ಯೆಗಳನ್ನು ಎತ್ತಿರುವುದು ಕಂಡುಬರುತ್ತದೆ ನಿಜ. ಆದರೆ, ಅನೇಕ ಕಡೆಗಳಲ್ಲಿ ತಾತ್ವಿಕ ಕಾಳಜಿಗಳ ಕೊರತೆಯಿಂದಾಗಿ, ಅರ್ಥಹೀನ ಘಟನೆಯಂತೆ ಇವುಗಳು ಕಂಡುಬರುತ್ತವೆ. ಉದಾಹರಣೆಗೆ : ಮಣ್ಣು ಎನ್ನುವ ಕತೆಯನ್ನೇ ನೋಡಬಹುದು. 'ರಾಮು' ಎನ್ನುವ ಬಡಹುಡುಗನ ಕೊಲೆ ಹಾಗೂ ಶೋಷಣೆಗೆ ಅವರ ತಂದೆ ಮುಖ್ಯ ಕಾರಣ, ಅವನೊಬ್ಬ ಕುಡುಕ ಎನ್ನುವ ನಾಟಕೀಯ ಅಂತ್ಯದಿಂದಾಗಿ, ಕತೆಯ ಮುಖ್ಯ ಸ್ವರೂಪವೇ ಕುರೂಪಗೊಳ್ಳುತ್ತವೆ. ಕತೆಗಾರ್ತಿಯ ಕಲ್ಪನೆಗಳು ಇಲ್ಲಿ ಮಿತಿಮೀರಿ ತಮ್ಮ ಕೆಲಸವನ್ನು ಮಾಡಿವೆ. ನನಗೆ ಈ ಕಥೆಯಲ್ಲಿ ರಾಮುವನ್ನು ಶೋಷಿಸುವ ಹೋಟೆಲಿನ ಮಾಲಿಕ, ಹಾಗೂ ಅನುಕಂಪೆಯಿಂದ ನೋಡುವ ಶ್ರೀಮಂತ ಸದಾನಂದ ಇವರೇ ಮುಖ್ಯ ಶತ್ರುಗಳಾಗಿ ಕಾಣಿಸುತ್ತಾರೆ. ವಾಸ್ತವ ಲೋಕದಲ್ಲೂ ಇದೇ ನಿಜ ಹಾಗೂ ಸಂಭಾವ್ಯವಾದುದು.

ಬಡವರ ಬಗೆಗಿನ ಶ್ರೀಮಂತನ ಅನುಕಂಪೆ–ಈ ಧಾಟಿಯು ಇವರ ಕತೆಗಳಲ್ಲಿ ಪ್ರಧಾನವಾಗಿ ಎದ್ದು ಕಾಣುವ ಗುಣವಾಗಿದೆ. ಈ ಗುಣವೂ ಸಹ ಕಥೆಯ ಅರ್ಥವನ್ನು ಕುಗ್ಗಿಸಲು ಸಾಕಷ್ಟು ಸಹಾಯ ಮಾಡುತ್ತದೆ. ಈ ಶ್ರೀಮಂತನಲ್ಲಿ ಕಾಣುವ ಅನುಕಂಪೆಯ ಗುಣಗಳು ಕೆಲವು ಕಡೆಗಳಲ್ಲಿ ಬಡವನನ್ನು ಅಮಾನವೀಯವಾಗಿ ನೋಡಲೂ ಸಹ ಕಾರಣವಾಗುತ್ತದೆ. ಉದಾ: ಅರಗಿನ ಮನೆ ಕಥೆಯನ್ನು ಗಮನಿಸಬಹುದು. ರಂಗಿ ಎನ್ನುವ ಬಡಹುಡುಗಿ ಕಳ್ಳಿಯಾಗಿ ಇಲ್ಲಿ ಚಿತ್ರಿತಳಾಗಿದ್ದಾಳೆ. ಕತೆಯಲ್ಲಿ ಮೇಲುವರ್ಗದವರ ಅನುಕಂಪೆ ಅಥವಾ ತಿರಸ್ಕಾರ ಇವೆರಡರಿಂದಲೇ ಅವಳ ಬದುಕಿನ ಗತಿ ನಿರ್ಣಯಗೊಳ್ಳಬೇಕಾಗಿದೆ.

ಇಷ್ಟೆಲ್ಲ ಮಿತಿಗಳ ನಡುವೆಯೂ, ಮೇಲೆ ವಿವರಿಸಿದ ಅಪಾಯಗಳನ್ನು ದಾಟಿಕೊಂಡ 'ದಮ್ಮಯ್ಯಬಿಡಿ' 'ಅಣ-ಉಡುಗಿ' ಮುಂತಾದ ಕತೆಗಳು ಈ ಸಂಕಲನದ ಅತ್ಯುತ್ತಮ ಕತೆಗಳಾಗಿವೆ. ಬಡ ವ್ಯಕ್ತಿತ್ವಗಳ ಅಸಹಾಯಕ ನೆಲೆ, ಅನಿವಾರ್ಯ ಬದುಕು ಇವುಗಳ ದ್ವಂದ್ವವನ್ನು ಈ ಕತೆಗಳು ಸಮರ್ಥವಾಗಿ ಹಿಡಿದಿಟ್ಟಿವೆ. 'ದಮ್ಮಯ್ಯ ಬಿಡಿ' ಕತೆಯಲ್ಲಿ ಅನುಪಮಾ ಅವರು ಅತ್ಯುತ್ತಮ ಕತೆಗಾರ್ತಿಯ ಲಕ್ಷಣಗಳನ್ನು ತೋರಿಸುತ್ತಾರೆ.

ವಜ್ರ : ಮಾಧವಕುಲಕರ್ಣಿ

ಮಾಧವ ಕುಲಕರ್ಣಿಯವರ ಈ ಸಂಕಲನದಲ್ಲಿ ಒಂಭತ್ತು ಕಥೆಗಳಿವೆ. ಇವುಗಳಲ್ಲಿ 'ಅನಾಹುತ' ಎನ್ನುವ ಕಥೆಯೊಂದನ್ನು ಬಿಟ್ಟರೆ ಉಳಿದ ಕಥೆಗಳೆಲ್ಲ ಅತ್ಯಂತ ಸಾಧಾರಣ ಮಟ್ಟದವು. 'ಅಸ್ತಿತ್ವ' 'ನಿರ್ಲಿಪ್ತ' ಈ ಕಥೆಗಳಂತೂ ತತ್ವಗಳ ಒತ್ತಾಯಪೂರ್ವಕ ಹೇರುವಿಕೆಯ ಭಾಗಗಳಿಂದ ಸೊರಗಿ ನರಳುತ್ತಿವೆ. ಅನೇಕ ಸಂಕೇತ, ಪ್ರತಿಮೆಗಳು ಕಥೆಯ ಅರ್ಥವಂತಿಕೆಗೆ ಯಾವ ಸಹಾಯವನ್ನು ಮಾಡದೆ-ಅವು ಇನ್ನಷ್ಟು ಅಸ್ಪಷ್ಟ ವಾಗುವ ಹಾಗೆ ಮಾಡಲು ನೆರವಾಗಿವೆ. 'ಬೇಸಿಗೆಯ ಮಳೆ' ಕಥೆ ಇದಕ್ಕೆ ಉತ್ತಮ ಉದಾಹರಣೆ. ಕತೆಯ ತುಂಬ, ಕಥಾನಾಯಕನ ತುಮುಲಗಳು-'ಬೇಸಿಗೆಯ ಮಳೆಯ' ವಾತಾವರಣ, ಇವುಗಳನ್ನು ಕೃತಕವಾಗಿ ಬುದ್ಧಿಪೂರ್ವಕವಾಗಿ ಜೋಡಿಸಿಕೊಂಡು ಹೋಗುತ್ತಿದ್ದಾರೇನೋ ಎನ್ನಿಸುತ್ತದೆ. ವಜ್ರ, ಆಕರ್ಷಣೆ, ಭ್ರಮೆ-ಈ ಕಥೆಗಳು ಕೆಲವು ಕುತೂಹಲಕಾರಿ ಘಟನೆಗಳ ಮೂಲಕ ಆಸಕ್ತಿಯನ್ನು ಕೆರಳಿಸುತ್ತವೆ ಅಷ್ಟೇ.

'ಅನಾಹುತ' ಎನ್ನುವ ಕತೆ ಒಂದೇ ಈ ಸಂಕಲನದ ತೃಪ್ತಿಕೊಡಬಲ್ಲ ಕಥೆ. ದುಷ್ಟ ವ್ಯವಸ್ಥೆಯೊಂದರಲ್ಲಿ ಸಿಕ್ಕ ವ್ಯಕ್ತಿಗಳ ಅಸಹಾಯಕತೆ, ಒಂಟಿತನದ ಸ್ವರೂಪವನ್ನು ಕಥೆಯು ಕುತೂಹಲ ಹುಟ್ಟಿಸುವಂತೆ ಬೆಳೆಸುತ್ತ ಹೋಗುತ್ತದೆ. ಕಥೆಯು ಕೇವಲ ಅಲ್ಲಿಯ ಘಟನೆಗಳ ಪಾತಳಿಗೆ ನಿಲ್ಲದೆ ಅರ್ಥವ್ಯಾಪ್ತಿಯನ್ನು ಕೊಡುವಲ್ಲಿ ಸಫಲವಾಗಿದೆ.

ಕಾಶಿಯಲ್ಲಿ ಕಂಡದ್ದೇನು : ಸರಿತಾ ಕುಸುಮಾಕರ ದೇಸಾಯಿ

ಎಂಟು ಕಥೆಗಳ ಈ ಸಂಕಲನ ಅತ್ಯಂತ ನಿರಾಶೆ ಹುಟ್ಟಿಸುವಥದ್ದು. ಕ್ಷುಲ್ಲಕ ಎನ್ನಿಸುವ, ಅರ್ಥಹೀನವಾದ ಕೆಲವು ಘಟನೆಗಳು, ಇಲ್ಲಿ ಕತೆಗಳ ಹೆಸರಿನಲ್ಲಿ ರೂಪು ಗೊಂಡಿವೆ. ಒಂದೆರಡ ಚಿಕ್ಕ ಉದಾಹರಣೆಗಳನ್ನು ಕೊಡುವುದಾದರೆ 'ವಿ.ಎಸ' ಎನ್ನುವ ಕಥೆಯಲ್ಲಿ ಇಬ್ಬ ು ಪ್ರೇಮಿಗಳ ಸಂಬಂಧ ಕಡಿದು ಹೋಗುವುದು ಅವರ ಹತ್ತಿರ ವಿಳಾಸವು ಇರಲಿಲ್ಲ ಎನ್ನುವ ಕಾರಣಕ್ಕಾಗಿ. 'ಹೀರೋ ಆಗಲೇ ಇಲ್ಲ' ಎನ್ನುವ ಕತೆಯಲ್ಲಿ ರೂಪಿತಗೊಂಡ ಒಂದು ಪ್ರೇಮ ವ್ಯವಹಾರದ ಹಾಸ್ಯಾಸ್ಪದ ನೆಲೆಗಳನ್ನು ಅನುಭವಿಸ ಬೇಕಾದರೆ ಆ ಕಥೆಯನ್ನೇ ದಯವಿಟ್ಟು ಓದುಗರು ಓದಬೇಕು. ನನಗೆ ಇಲ್ಲಿ ವಿವರಿಸುವುದು ಕಷ್ಟವಾಗುತ್ತಿದೆ.

ಈ ಸಂಕಲನಕ್ಕೆ ಮುನ್ನುಡಿ ಬರೆದ ಸರಿತಾ ಅವರ ಬಂಧುಗಳಾದ ಬೀಚಿಯವರು ಈ ಎಲ್ಲ ಕಥೆಗಳ ಮಿತಿಗಳನ್ನು ಅತ್ಯಂತ ನವಿರಾಗಿ ಹೇಳಿದ್ದಾರೆ. ಅಲ್ಲಲ್ಲಿ ಕಥೆಗಳ ಬಗ್ಗೆ ಹೊಗಳಲಾದ ಬೀಚಿಯವರ ಮಾತುಗಳು ಹಾಸ್ಯ ಬರಹಕ್ಕೆ ಒಳ್ಳೆಯ ಉದಾಹರಣೆಗಳಾಗುತ್ತವೆ.

ಧರ್ಮಾಮೃತದ ಕತೆಗಳು : ಎಸ್. ಪಿ. ಪಾಟೀಲ

ನಯಸೇನನ ಧರ್ಮಾಮೃತದ ಕತೆಗಳನ್ನು ಇಲ್ಲಿ ಸಂಗ್ರಹಿಸಿ ಆಧುನಿಕ ಕನ್ನಡ ಭಾಷೆಗೆ ಪರಿವರ್ತಿಸಲಾಗಿದೆ. ಜೈನದರ್ಶನವನ್ನು ವಿವರಿಸಲಿಕ್ಕೆಂದು ಧರ್ಮಾಮೃತ ವನ್ನು ಬರೆದ ನಯಸೇನನ ಉದ್ದೇಶ ಸ್ಪಷ್ಟವಾಗಿಯೇ ಇದೆ. ಕಾವ್ಯದ ಹೆಸರೇ ಸೂಚಿಸುವಂತೆ ಅದು 'ಧರ್ಮ' ಎನ್ನುವ 'ಅಮೃತ'ವನ್ನು ವಿವರಿಸುವ ಕಥೆಗಳ ಗುಚ್ಛ.

'ಧರ್ಮಾಮೃತ' ಆಧುನಿಕ ಓದುಗನಿಗೆ ಎರಡು ಮೂರು ರೀತಿಯಲ್ಲಿ ಉಪ ಯುಕ್ತವಾಗಬಹುದು. ಒಂದು ಅತ್ಯಂತ ಸಂಪ್ರದಾಯ ನಿಷ್ಠನಿಗೆ ಅದು ಮತೀಯ ಕಾವ್ಯ ವಾಗಿ, ಪ್ರಯೋಜನವಾಗಬಹುದು. ಎರಡು-ಕಾವ್ಯದ ಕಥೆಗಳ ವಿವರಗಳು ಐತಿ ಹಾಸಿಕ, ಸಾಂಸ್ಕೃತಿಕ ವಿನ್ಯಾಸಗಳನ್ನು ರಚಿಸುವಲ್ಲಿ ಉಪಯುಕ್ತವಾಗಬಹುದು. ಈ ಎರಡೂ ಸಂದರ್ಭಗಳಲ್ಲಿಯೂ ಕಾವ್ಯವನ್ನು ಸಂಗ್ರಹಗೊಳಿಸುವುದು-ಉಪಯುಕ್ತ ವಲ್ಲವೇ ಅಲ್ಲ. ಮೂಲದ ಉದ್ದೇಶ, ವಿನ್ಯಾಸಗಳಿಗೆ ಕೊರತೆಯಾಗದ ಹಾಗೆ ಆಧುನಿಕ ಭಾಷೆಗೆ ಪರಿವರ್ತಿಸುವುದು ಉಪಯುಕ್ತವಾಗಬಹುದು. (ಮೇಲೆ ನಾನು ವಿವರಿಸಿದ-ಎರಡೂ ದೃಷ್ಟಿಯಿಂದ ಅಧ್ಯಯನ ಮಾಡುವವನಿಗೆ ಈ ಆಧುನಿಕ ಕನ್ನಡಕ್ಕೆ ಪರಿವರ್ತಿಸುವ ಪಾಠದ ಅಗತ್ಯವೇನೂ ಇರುವುದಿಲ್ಲ).

ಪಾಟೀಲರು ತಾವು ಮಾಡಿದ 'ಸಂಗ್ರಹ'-'ಪರಿವರ್ತನೆ' ಇವುಗಳಿಗೆ ಕಾರಣ ಗಳನ್ನು ಮುನ್ನುಡಿಯಲ್ಲಿ ಹೇಳುತ್ತಾ ವಿದ್ಯಾರ್ಥಿಗಳಿಗೂ, ಸಾಮಾನ್ಯರಿಗೂ, ಅದರ ಸಾರವನ್ನು ಮೂಲದ ಶೈಲಿಯಲ್ಲಿಯೇ ಸೆರೆಹಿಡಿದು ಕೊಡಬೇಕೆಂದು' ಉದ್ದೇಶಿಸಿದ್ದೆ ಎನ್ನುತ್ತಾರೆ.

ಮುಖ್ಯವಾಗಿ 'ಪಠ್ಯಪುಸ್ತಕ' ವಾಗುವುದರ ಕಡೆಗೆ ಲೇಖಕರ ಕಣ್ಣಿರುವಂತೆ ಕಾಣುತ್ತದೆ. ಧರ್ಮಾಮೃತವನ್ನು 'ಶುದ್ಧ ಸಾಹಿತ್ಯ'ದ ಮಾನದಂಡದಿಂದ ನೋಡ ಹೊರಟಾಗ ಬಾಲಿಶವಾದ, ಹಾಸ್ಯಾಸ್ಪದ ನೆಲೆಗಳು ರೂಪುಗೊಳ್ಳುತ್ತವೆ. ಇಲ್ಲಿಯ ಸಂಗ್ರಹ ಇಂತಹ ಬಾಲಿಶತನದ ಅಪಾಯದ ಅಂಚನ್ನು ಮುಟ್ಟುತ್ತದೆನ್ನಬಹುದು. ವಿದ್ಯಾರ್ಥಿಗಳಿಗೆ ಇಲ್ಲಿಯ ಸಂಪ್ರದಾಯಸ್ಥ ನೀತಿಯು ನಿಜವಾಗಿಯೂ ಬೇಕಾಗಿಲ್ಲ ; ಅಥವಾ ಇಲ್ಲಿಯ ಕತೆಗಳನ್ನು ಸಾಹಿತ್ಯಕ ದೃಷ್ಟಿಯಿಂದ ನೋಡಲು ಸಾಧ್ಯವೇ ಇಲ್ಲ.

ಇವುಗಳ ಮೇಲೆ ಕಳಶವಿಟ್ಟಂತೆ ಚಿಕ್ಕಪುಸ್ತಕದ ಬೆಲೆಯೂ ಎದೆ ಝಲ್ಲೆನಿಸುವಷ್ಟು ದುಬಾರಿಯಾಗಿದೆ.

ಅನುವಾದಿತ ಕತೆಗಳು

ಬದಲಾವಣೆ (ಚೈನಾದೇಶದ ಕತೆಗಳು), ಕನ್ನಡಕ್ಕೆ : ವಂಶಿ

ಚೈನಾದೇಶದ ಕ್ರಾಂತಿಪೂರ್ವ ಕಾಲದಿಂದ, ಕ್ರಾಂತಿಯ ನಂತರ ಕಾಲದವರೆಗೆ ಅಂದಂದಿನ ವಾತಾವರಣವನ್ನು ಪ್ರತಿನಿಧಿಸುವ ಹನ್ನೆರಡು ಕಥೆಗಳನ್ನು ಆಯ್ದು

ಇಲ್ಲಿ ಸಂಕಲಿಸಲಾಗಿದೆ. ಎಲ್ಲ ಕಥೆಗಳೂ ಒಂದಲ್ಲ ಒಂದು ರೀತಿಯಲ್ಲಿ ಚೀನೀ ಜನತೆಯ ಹೋರಾಟದ, ಧೀರ ಸಾಹಸಮಯ ಪಯಣದ ಕುತೂಹಲಕರ ಘಟನೆ ಗಳನ್ನು ಕತೆಯ ರೂಪದಲ್ಲಿ ವಿವರಿಸುತ್ತವೆ. ಶುಷ್ಕ ಸೈದ್ಧಾಂತಿಕ ನಿಲುವುಗಳನ್ನು ಕತೆಯಲ್ಲಿ ಎಲ್ಲಿಯೂ ತೂರಿಸಿಲ್ಲವಾದ್ದರಿಂದ ಇಲ್ಲಿ ಪ್ರಕಟಗೊಂಡ ಹನ್ನೆರಡೂ ಕಥೆಗಳೂ ಸ್ವಾರಸ್ಯಕರವಾಗಿದ್ದು ಓದುಗನನ್ನು ಸೆರೆಹಿಡಿಯುತ್ತವೆ. 'ಪಾದರಕ್ಷೆ' 'ತೆಪ್ಪದವನು' 'ದೇವತೆಗಳ ಸತ್ಕಾರ' ಈ ಕಥೆಗಳು ಒಂದು ಸಣ್ಣ ಘಟನೆಯ ಸುತ್ತಮುತ್ತ ಅರ್ಥ ಪೂರ್ಣವಾದ ವಿನ್ಯಾಸಗಳನ್ನು ರೂಪಿಸುತ್ತವೆ. ಇಲ್ಲಿಯ ಅನುಭವ, ನೀತಿಗಳ ನೆಲೆಗಳು ಚಿಕ್ಕಮಕ್ಕಳಿಗೂ ಹೃದ್ಯವಾಗುವಂತಿದ್ದು ಹೆಚ್ಚು ಉಪಯುಕ್ತವಾಗುವಂತಿದೆ'

ಈ ಸಂಕಲನದ ಅತ್ಯುತ್ಕೃಷ್ಟ ಕಥೆಗಳು, ಕ್ರಾಂತಿಪೂರ್ವ ವಾತಾವರಣದ ದಾಸ್ಯ ಜೀವನದ ಚಿತ್ರಣಗಳನ್ನು ಕೊಡುವ 'ದಾಸ್ಯಜೀವನ' 'ದರೋಡೆ' ಇವುಗಳು, ಕನ್ನಡಕ್ಕೆ 'ವಂಶಿ' ಅವರು ಈ ಕತೆಗಳನ್ನು ಚೆನ್ನಾಗಿ ಅನುವಾದಿಸಿದ್ದಾರೆ. ಭಾಷೆಯ ಸರಳತೆ, ಹಾಗೂ ಶೈಲಿಯ ಸೊಗಸು ಈ ಕತೆಗಳ ಅನುವಾದದ ವೈಶಿಷ್ಟವಾಗಿವೆ.

ಮಿತ್ರರ ಕಥೆಗಳು (ನರೇಂದ್ರನಾಥ ಮಿತ್ರ), ಅನು : ಎ. ಎಸ್. ವೇಣು ಗೋಪಾಲರಾವ್

ಬಂಗಾಳಿಯ ಪ್ರಸಿದ್ಧ ಕತೆಗಾರ, ಕಾದಂಬರಿಕಾರ ನರೇಂದ್ರನಾಥ ಮಿತ್ರ ಅವರ ಕೆಲವು ಕಥೆಗಳ ಅನುವಾದ ಈ ಸಂಕಲನದಲ್ಲಿವೆ. ನರೇಂದ್ರನಾಥ ಮಿತ್ರರ ಕತೆಗಳು ಅನೇಕ ಬಾರಿ ಸುಂದರವಾದ ಪದ್ಯದ ಸ್ವರೂಪವೊಂದನ್ನು ಒಳಗೊಂಡಿರುತ್ತದೆ. ಒಂದು ಚಿಕ್ಕ ಘಟನೆ, ಹೃದಯ ಕಲಕುವಂಥ ಒಂದು ಭಾವನೆ, ಇವುಗಳ ಆವರಣದಲ್ಲೇ ಕತೆಯ ಬಂಧದಲ್ಲಿ ಪದ್ಯದ ಸತ್ವಗಳನ್ನು ತುಂಬಿಬಿಡುತ್ತಾರೆ.

ಅನುವಾದದ ಸ್ವರೂಪದಲ್ಲೇ-ಅವರ ಕಥೆಯ ನಡಿಗೆಯೊಂದರ ಸೆಳೆಯುವ ಲಕ್ಷಣಗಳನ್ನು, ಸುಲಭವಾಗಿ ಊಹಿಸಬಹುದಾಗಿದೆ. ಇವರ ಕಥೆಯ ವಸ್ತು ಮಹತ್ತಾದ ಆಶಯುಗಳನ್ನೊಳಗೊಂಡಿರುವುದೇನೊ ಅಲ್ಲ. ಇದೇ ಅವರ ಕಥೆಗಳ ಮುಖ್ಯ ಸತ್ವವೂ ಕೂಡ ಆಗಿದೆ ಎನ್ನುವುದು ಗಮನಾರ್ಹ. ಗಡಿಯಾರ, ಕಳ್ಳ, ಒಂದು ಬಟ್ಟಲು ಹಾಲು-ಈ ಕಥೆಗಳನ್ನು ಗಮನಿಸಿದರೆ ನನ್ನ ಮಾತು ಸ್ಪಷ್ಟವಾಗುತ್ತದೆ. ಅತ್ಯಂತ ನಿಕೃಷ್ಟ ಎನ್ನಿಸಬಹುದಾದ ಘಟನೆಯೊಂದು ಮಹತ್ವದ ಅರ್ಥಪಾತಳಿ ಗಳನ್ನು ತೆರೆಯುತ್ತ ಹೋಗುವುದು ಈ ಕಥೆಗಳ ವೈಶಿಷ್ಟ್ಯವಾಗಿದೆ.

ಕೆಳಮಧ್ಯಮ ವರ್ಗದ ನೋವು, ನಲಿವುಗಳ ದಾಖಲೆ ಇವರ ಇಲ್ಲಿಯ ಕತೆಗಳ ಮುಖ್ಯ ವೈಶಿಷ್ಟ್ಯವಾಗಿದೆ. ಅಳೀಮಯ್ಯ, ಮಗಳು, ತಾಜಾಬೆಲ್ಲ-ಇವು ಈ ಸಂಕಲನದಲ್ಲಿ ಸೇರಿದ ಉತ್ತಮ ಕಥೆಗಳಲ್ಲಿ ಕೆಲವು.

ಗೋಪಾಲರಾವ್ ಅವರ ಅನುವಾದವು ಈ ಕಥೆಗಳ ಸ್ವಾರಸ್ಯ ಗ್ರಹಿಕೆಗೆ ಹೆಚ್ಚು ಸಹಾಯ ಮಾಡುತ್ತದೆ. ಅತ್ಯಂತ ಸರಳವಾದ ಹೃದ್ಯವಾದ ಶೈಲಿಯಲ್ಲಿ ಕನ್ನಡಕ್ಕೆ ಅನುವಾದಗೊಂಡಿರುವ ಈ ಕಥೆಗಳು-ಸಂಕಲನವಾಗಿ ಹೊರ ಬಂದಿದ್ದು ಒಂದು ಸ್ವಾಗತಾರ್ಹವಾದ ಕಾರ್ಯವಾಗಿದೆ ಎನ್ನುವುದರಲ್ಲಿ ಅನುಮಾನವಿಲ್ಲ.

ಸುನೀತಿ ಅಫಳೆ (ಅತಿಥಿ), ಅನು : ಎಸ್. ಪಿ. ಪಾಟೀಲ

ಮರಾಠಿ ಲೇಖಕಿ ಸುನೀತಿ ಅಫಳೆಯವರ ಐದು ಕತೆಗಳನ್ನು ಪಾಟೀಲರ ಅನುವಾದಿಸಿದ್ದಾರೆ. ಐದೂ ಕತೆಗಳೂ ಮೂಲತಃ ಹೆಣ್ಣಿನ ಮಾನಸಿಕ ತುಮುಲಾಟಗಳ ಹಿನ್ನಲೆಯಲ್ಲಿಯೇ ವ್ಯಕ್ತವಾಗುತ್ತದೆ. ಈ ಕಥೆಗಳ ಮುಖ್ಯ ಪಾತ್ರವಾದ ಹೆಣ್ಣಾದರೂ-ಪಟ್ಟಣದ ಸಂಸ್ಕೃತಿಯೊಂದರ ಪ್ರಭಾವಕ್ಕೆ ಒಳಗಾದ ಮಧ್ಯಮ ವರ್ಗದ ವ್ಯಕ್ತಿ. ಕಥೆಗಳೆಲ್ಲದರಲ್ಲೂ ಕಂಡುಬರುವ ಹೆಣ್ಣು ಒಂಟಿಯಾಗಿ ನರಳುವುದು, ಭ್ರಷ್ಠತೆಯ ವಾತಾವರಣದಲ್ಲಿ ಒಂದಾಗಿ ಹೋಗಿರುವುದು-ಹೀಗೆ ಅನೇಕ ಸ್ಥಿತಿಗಳನ್ನು ಪ್ರತಿನಿಧಿಸುತ್ತಾಳೆ.

ಇಲ್ಲಿಯ ಕೆಲವು ಕಥೆಗಳಲ್ಲಿ ವ್ಯಕ್ತಿಯ ತುಮುಲಾಟಗಳು ಪ್ರಧಾನವಾದ ಹಾಗೆ ಸುತ್ತಣ ಪರಿಸರವೊಂದು ಸತ್ವಯುತವಾದ ವಾತಾವರಣದ ಹಿನ್ನೆಲೆಯನ್ನು ಪಡೆದಿರುವುದಿಲ್ಲ. ಉದಾಹರಣೆಗೆ, ಬಲಿ, ಹೊಸಚಿತ್ರ-ಈ ಕಥೆಗಳನ್ನು ಗಮನಿಸ ಬಹುದು. ತೆಳುವಾದ ವಿಷಯಗಳ ಕಾರಣದಿಂದ ಇವೆರಡೂ ಕಥೆಗಳೂ ವಸ್ತು ಹಾಗೂ ಅದರಲ್ಲಿನ ಪಾತ್ರಗಳು ಪೇಲವವಾಗಿ ಕಾಣುತ್ತವೆ. ಅತಿಥಿ ಹಾಗೂ ಅನಾಥ-ಈ ಎರಡೂ ಕಥೆಗಳೂ ಈ ಸಂಕಲನದ ಉತ್ತಮ ಕತೆಗಳೆನ್ನಬಹುದು.

ಪಾಟೀಲರ ಅನುವಾದ-ಈ ಕತೆಗಳನ್ನು ಸುಲಭವಾಗಿ ಓದಿಕೊಳ್ಳುವಂತೆ ಮಾಡುವುದರಲ್ಲಿ ಸಮರ್ಥವಾಗಿದೆ. ಆದರೆ ಈ ಸಂಕಲನದಲ್ಲಿ ಮೂಲ ಲೇಖಕರ ಸಂಕ್ಷಿಪ್ತ ಪರಿಚಯವೊಂದು ಇಲ್ಲದಿರುವುದು, ಒಂದು ಕೊರತೆಯಾಗಿ ಕಾಣುತ್ತಿದೆ.

ವಿಶ್ವಕಥಾಕೋಶದ ಎಂಟು ಸಂಪುಟಗಳು :

ನಿರಂಜನ ಅವರ ಪ್ರಧಾನ ಸಂಪಾದಕತ್ವದಲ್ಲಿ ಬರುತ್ತಿರುವ ಇಪ್ಪತ್ತೈದು ಸಂಪುಟಗಳ ವಿಶ್ವಕಥಾ ಕೋಶದ ಮೊದಲ ಎಂಟು ಸಂಪುಟಗಳು ಈ ವರ್ಷದಲ್ಲಿ ಪ್ರಕಟವಾಗಿವೆ. ಈ ಎಂಟೂ ಸಂಪುಟಗಳ ಕಥೆಗಳಲ್ಲಿ ಮುಖ್ಯ ಧಾಟಿಯೊಂದಿದೆ. ಅದು ಮನುಷ್ಯನ ದುಃಖಕ್ಕೆ ಕಾರಣವಾದ ಶೋಷಣೆಯ, ದಬ್ಬಾಳಿಕೆಯ ಚಿತ್ರಣವೇ ಆಗಿದೆ. ದಬ್ಬಾಳಿಕೆಗೆ ಗುರಿಯಾದವನ ನಿಸ್ಸಹಾಯಕತೆಯೇ ಇಲ್ಲಿ ಮುಖ್ಯ ಚಿತ್ರಣ ವೆಂದೇನೂ ಅಲ್ಲ. ಅವನನ್ನು ತುಳಿಯಲೆತ್ನಿಸುವ ಎಲ್ಲ ಸಂಪ್ರದಾಯಕ ಶಕ್ತಿಗಳ ವಿರುದ್ಧ ಇವನ ಹೋರಾಟವೂ ಇಲ್ಲಿ ಮುಖ್ಯ ಅಭಿವ್ಯಕ್ತಿಯಾಗಿದೆ. ಒಂದರ್ಥದಲ್ಲಿ

ಈ ಕಥೆಗಳಲ್ಲಿ ಬಹುಪಾಲು ಕಥೆಗಳು ಹೋರಾಟದ ಸ್ವರೂಪವನ್ನು ಚಿತ್ರಿಸಲು ಪ್ರಯತ್ನಿಸುತ್ತವೆ.

ಈ ನೆಲೆಯಿಂದಲೇ ಕಥೆಗಳ ಆಯ್ಕೆಗಳಿಗೆ ಒಂದು ತಾತ್ವಿಕ ಹಿನ್ನಲೆಯನ್ನು ಹಾಕಿಕೊಂಡಿರುವ ನಿರಂಜನರು, ಅಷ್ಟರಮಟ್ಟಿಗೆ ಸಾಕಷ್ಟು ಯಶಸ್ವಿಯಾಗಿದ್ದಾರೆಂದೇ ಹೇಳಬೇಕು. ಹೊರದೇಶಗಳ ಎಲ್ಲ ಕಥೆಗಳನ್ನು ಓದಲು ಸಾಧ್ಯವಾಗದೇ ಹೋದ ಅನಿವಾರ್ಯ ಸಂದರ್ಭಗಳಲ್ಲಿ ಕಥೆಗಳ ಆಯ್ಕೆಯ ಬಗ್ಗೆ ವಾದಗಳನ್ನು ಎತ್ತುವುದು ಸಾಧ್ಯವಾಗದೇ ಹೋಗುತ್ತದೆ. ಅಥವಾ ಅಂಥ ವಾದಗಳಿಗೆ ಬದಲಾಗಿ ಆಯ್ಕೆ ಯಾದಂಥ ಕಥೆಗಳ ಕಲಾತ್ಮಕ ಮೌಲ್ಯವನ್ನು ಗುರುತಿಸುವುದು ಹೆಚ್ಚು ಉಪಯುಕ್ತ ವಾದ ಚರ್ಚೆಯಾಗಬಹುದೇನೋ ?

ಮೊದಲಸಂಪುಟ 'ಧರಣಿಮಂಡಲ ಮಧ್ಯದೊಳಗೆ' ಕನ್ನಡದ ಸಣ್ಣ ಕತೆಗಳ ಸಂಗ್ರಹವಾಗಿದೆ. ಒಟ್ಟು 22 ಕಥೆಗಳು ಈ ಸಂಕಲನದಲ್ಲಿ ಸೇರಿವೆ. ಪ್ರಗತಿಶೀಲ ಚಳುವಳಿಯ ಕಾಲದ ಕತೆಗಾರರು ಎಂದು ವರ್ಗೀಕರಣ ಮಾಡಬಹುದಾದ ಹತ್ತು ಜನರು ಈ ಮುಖ್ಯ ಸಂಕಲನದ ಪಾಲನ್ನು ಪಡೆದವರಾಗಿದ್ದಾರೆ. ಕತೆಗಳ ಆಯ್ಕೆಯಲ್ಲಿ ಸಂಪಾದಕರು ಮುನ್ನುಡಿಯಲ್ಲಿ ಹೇಳಿಕೊಳ್ಳುವಂತೆ ಒಂದು ನಿರ್ದಿಷ್ಟ ಧೋರಣೆ ಇದೆಯೆನ್ನುವುದನ್ನು ಒಪ್ಪಬಹುದು. ಅದರಿಂದಾಗಿಯೇ ಇಲ್ಲಿ ಆಯ್ಕೆಯಾದ ಕೆಲವು ಕಥೆಗಳಾದರೂ ಆಯಾ ಕತೆಗಾರರ ಉತ್ತಮ ಕತೆಗಳೆಂದೇನೊ ಹೇಳುವ ಹಾಗಿಲ್ಲ.

ಅಲ್ಲದೆ ಈ ಸಂಕಲನದಲ್ಲಿ ಕನ್ನಡದ ಕೆಲವು ಮುಖ್ಯ ಕತೆಗಾರರೂ ಬಿಟ್ಟು ಹೋಗಿದ್ದಾರೆ. ಯಶವಂತಚಿತ್ತಾಲ, ಶಾಂತಿನಾಥದೇಸಾಯಿ, ಕುವೆಂಪು, ಅಶ್ವತ್ಥ ತೇಜಸ್ವಿ, ಬೆಸಗರಹಳ್ಳಿ ರಾಮಣ್ಣ ಮುಂತಾದವರ ಕತೆಗಳನ್ನು ಇಲ್ಲಿ ಯಾವ ಕಾರಣ ಗಳಿಗಾಗಿ ಬಿಡಲಾಗಿದೆಯೋ ಗೊತ್ತಾಗುವುದಿಲ್ಲ. ನಿರಂಜನ ಅವರು ಆಶಿಸುವ ಧೋರಣೆಗಳನ್ನು, ಆಶಯುಗಳನ್ನು ಅತ್ಯಂತ ಸಮರ್ಥವಾಗಿ ರೂಪಿಸಲು ಯತ್ನಿ ಸಿರುವ ಹಲವಾರು ಕತೆಗಳು ಈ ಕಾರಣದಿಂದಾಗಿ-ಸೇರದೆ ಹೋಗಿಬಿಟ್ಟಿವೆ.

ನಿರಂಜನ ಅವರ ಮುನ್ನಡಿಯೂ ಸಹ ಬಹಳ ಜಾಳುಜಾಳಾಗಿದೆ. ಯಾವ ಬರಹಗಾರನ ವಿಶಿಷ್ಟತೆಯ ಬಗ್ಗೆಯೂ ಇಲ್ಲಿ ಗಂಭೀರ ಚರ್ಚೆಯನ್ನು ಮಾಡಲಾಗಿಲ್ಲ. ಹೀಗಾಗಿ ಈ ಸಂಕಲನವು ಸಮರ್ಪಕವೆನ್ನಿಸುವ ಹಾಗೆ ರೂಪುಗೊಂಡಿಲ್ಲವೆಂದೇ ಹೇಳಬೇಕು.

ಎರಡನೆಯ ಸಂಪುಟವು ಆಫ್ರಿಕಾದ ಕಥೆಗಳ ಅನುವಾದವನ್ನು ಒಳಗೊಂಡಿದೆ. 'ಆಫ್ರಿಕಾದ ಹಾಡು' ಎಂಬ ಹೆಸರಿನ ಈ ಸಂಕಲನದಲ್ಲಿ ಹದಿಮೂರು ಕತೆಗಳಿವೆ. ಇಲ್ಲಿಯ ಹಲವಾರು ಕತೆಗಳು-ಕಪ್ಪು, ಬಿಳಿ ಜನರ ಸಂಬಂಧಗಳಲ್ಲಿ ಮುಖ್ಯ ಪಾತ್ರ ವಹಿಸುವ ವರ್ಣ ಪ್ರಜ್ಞೆ, ಆರ್ಥಿಕ, ಸಾಮಾಜಿಕ ಅಂತರ ಮೊದಲಾದ ಸಮಸ್ಯೆಗಳನ್ನು ಹೇಳುವಲ್ಲಿ ಯಶಸ್ವಿಯಾಗಿವೆ. ರಿಚರ್ಡ್ ರೀಲೆಯ 'ಆಫ್ರಿಕಾದ ಹಾಡು' ಚಿನುವ

ಅಹೇಬೆಯ 'ಸೇಡಿನ ಸಾಲಗಾರ', ಎಂಫಲೀಲೆಯ 'ಬದುಕಿದವರು-ಸತ್ತವರು'— ಈ ಕಥೆಗಳು ಇಂಥ ಸಂಬಂಧವನ್ನು ಅತ್ಯಂತ ಸೂಕ್ಷ್ಮರೀತಿಯಲ್ಲಿ ಹಿಡಿಯಲು ಪ್ರಯತ್ನಿಸಿವೆ.

'ರಜತರಸ್ತೆ' 'ಹಸಿದ ಹುಡುಗ' 'ಆಫ್ರಿಕನ್ ನೆಲದ ಹಂಬಲ' ಮುಂತಾದ ಕತೆಗಳು, ಬಡತನದ ಘೋರವಾದ ಚಿತ್ರವನ್ನು ಕೊಡುವಂತೆ ಅದಕ್ಕೆ ಕಾರಣವಾದ ವ್ಯವಸ್ಥೆಯ ಸ್ವರೂಪವನ್ನು ಸಹ ಚಿತ್ರಿಸುತ್ತವೆ. ಈ ಸಂಪುಟದ ಹೆಚ್ಚುಕಡಿಮೆ ಎಲ್ಲ ಕಥೆಗಳು ನೇರ ಹಾಗೂ ಹೃದಯಸ್ಪರ್ಶಿಯಾಗಿವೆ. ಅತ್ಯಂತ ತೃಪ್ತಿಕೊಡುವ ಅನು ವಾದವನ್ನು ಸೀತಾರಾಂ ಮಾಡಿದ್ದಾರೆ.

ಮೂರನೇ ಸಂಪುಟ ವಿಯಟ್ನಾಂ ಕಥೆಗಳಿಗೆ ಮೀಸಲಾಗಿದೆ. 'ಕಾಡಿನಲ್ಲಿ ಬೆಳದಿಂಗಳು'ಎಂಬ ಹೆಸರಿನ ಈ ಸಂಕಲನದಲ್ಲಿ ಹನ್ನೊಂದು ಕಥೆಗಳಿವೆ. ಬಹುಪಾಲು ಕತೆಗಳು ವಿಯಟ್ನಾಂ ಹೋರಾಟಕ್ಕೆ ಸಂಬಂಧಪಟ್ಟವುಗಳು. ಹೊರ ಆಕ್ರಮಣವನ್ನು ಶಸ್ತ್ರಗಳಿಂದಲೇ ಧೈರ್ಯವಾಗಿ ಎದುರಿಸುವ ವಾತಾವರಣದ ಸುತ್ತಮುತ್ತ ಈ ಕತೆಗಳ ಘಟನೆಗಳು ಬಿಚ್ಚಿಕೊಳ್ಳುತ್ತವೆ. ತ್ಯಾಗ, ಬಲಿದಾನಗಳ ವೀರರಸವೇ ಪ್ರಧಾನ ವಾದ ಚಿತ್ರಗಳು ಇಲ್ಲಿನ ಪ್ರಧಾನ ಧೋರಣೆಗಳಾಗಿವೆ. ಯುದ್ಧ, ಹೋರಾಟಗಳಂಥ ವಾತಾವರಣವೇ ಆಕ್ರಮಿಸಿಕೊಂಡ ಸಂದರ್ಭಗಳಲ್ಲಿ-ಮನುಷ್ಯನ ಮೂಲಭೂತ ಆಶಯಗಳಾದ ಪ್ರೇಮ, ಸ್ನೇಹ, ಅಂತಃಕರಣಕ್ಕಾಗಿಯೇ ಈ ಕಥೆಗಳ ಎಲ್ಲ ಪಾತ್ರಗಳ ಒಳಮಿಡಿತವಿರುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ರವಿಕುಮಾರರು ಕತೆಗಳ ಅನುವಾದವನ್ನು ಸಮರ್ಪಕವಾಗಿ ಮಾಡಿದ್ದಾರೆ.

ನಾಲ್ಕನೆಯ ಸಂಪುಟವು ಮಂಗೋಲಿಯ, ಚೀನ, ಜಪಾನ್, ಕೊರಿಯ ದೇಶಗಳ ಕಥೆಗಳನ್ನು ಒಳಗೊಂಡಿದೆ. 'ಚೆಲುವು' ಎಂಬ ಹೆಸರಿನ ಈ ಸಂಕಲನದಲ್ಲಿ ಹದಿಮೂರು ಕತೆಗಳಿವೆ. 'ಅಪ್ಪಯಾವಾಗ ಬರ‍್ತಾರೆ?' 'ಚೆಲುವು' 'ಕಣ್ಣುಗಳು' ಮೊದಲಾದ ಸುಂದರವಾದ, ಮನಸ್ಸನ್ನು ಕಟ್ಟುವ ಕತೆಗಳು ಮಂಗೋಲಿಯಾದ ಕಥಾಸಾಹಿತ್ಯ ದಿಂದ ಆಯ್ಕೆಯಾಗಿದೆ. ಚೀನಾದೇಶದ ಕತೆಗಳಲ್ಲಿ ಪ್ರಸಿದ್ಧ ಕತೆಗಾರರಾದ ಲೂಷನ್, ಮಾವೋತೂನ್-ಇವರ ಕತೆಗಳು ಆಯ್ಕೆಯಾಗಿವೆ. ಲೂಷನ್ ಅವರ 'ಹುಚ್ಚನ ದಿನಚರಿ' ಅವರ ಒಳ್ಳೆಯ ಕತೆಗಳಲ್ಲಿ ಒಂದಾಗಿದೆ. ಕ್ರಾಂತಿಪೂರ್ವ ಚೀನಾದೇಶದ ಆಶಯುಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಲು ಯತ್ನಿಸುತ್ತಾರೆ ಲಿಉಜಿನ್ ಅವರ ಕತೆಯ ಹೆಚ್ಚು ಹೇಳಿಕೆಯನ್ನು ಒಳಗೊಂಡಿದೆ. ಜಪಾನೀ ಕತೆಗಳು ಹೆಚ್ಚು ಮನಸೆಳೆಯುಂಥವುಗಳೇನಲ್ಲ. ಆದರೆ ಕೊರಿಯಾದ ಕತೆಗಳು ತಮ್ಮ ಸಮಾಜದ ಸ್ಥಿತಿಗತಿಗಳನ್ನು ಪರಿಣಾಮಕಾರಿಯಾಗಿ ಸೆರೆಹಿಡಿಯುತ್ತವೆ. ದಾನ್ ಉಂಗ್ ಹಾಗೂ ಚಲೋಂಗ್‌ಸು ಅವರ ಎರಡೂ ಕತೆಗಳೂ ಉತ್ತರ ಹಾಗೂ ದಕ್ಷಿಣ

ಕೋರಿಯಾದ ಇತಿಹಾಸದ ಚಲನೆಯನ್ನು ಸೂಕ್ಷ್ಮವಾಗಿ ಹಿಡಿಯಲು ಪ್ರಯತ್ನಿಸಿರುವುದನ್ನು ಗಮನಿಸಬಹುದು.

ಜಿ. ಎಸ್. ಸದಾಶಿವ ಅವರು ಈ ಎಲ್ಲ ಕತೆಗಳನ್ನು ಸಮರ್ಥವಾಗಿ ಅನುವಾದಿಸಿದ್ದಾರೆ. ನೆರೆಟಿವ್ ಆದ ಶೈಲಿಗಳಲ್ಲಂತೂ ಇವರ ಅನುವಾದದ ಭಾಷೆ ಹೆಚ್ಚು ಮೆಚ್ಚುಗೆಯನ್ನು ಗಳಿಸುತ್ತದೆ.

'ಸುಭಾಷಿಣಿ' ಭಾರತ ಮತ್ತು ನೆರೆಹೊರೆಯ ಕತೆಗಳ ಸಂಕಲನ. ಭಾರತ, ಪಾಕಿಸ್ತಾನ, ಬಾಂಗ್ಲಾದೇಶ, ನೇಪಾಳ, ಮತ್ತು ಬರ್ಮಾ ದೇಶಗಳ ಕತೆಗಳು ಇಲ್ಲಿ ಸಂಕಲಿತವಾಗಿವೆ. ಭಾರತದ ಭಾಷೆಗಳಿಂದ ಹದಿನೇಳು ಕತೆಗಳನ್ನು, ಪಾಕಿಸ್ತಾನದಿಂದ ಎರಡನ್ನೂ, ಉಳಿದ ದೇಶಗಳಿಂದ ತಲಾ ಒಂದೊಂದು ಕತೆಯನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ. ಸುಮಾರು 20 ಜನ ಅನುವಾದಕರು ಈ ಸಂಕಲನವನ್ನು ರೂಪುಗೊಳಿಸಲು ಕಾರಣರಾಗಿದ್ದಾರೆ. ಹೆಚ್ಚು ಕಡಿಮೆ ಎಲ್ಲರ ಅನುವಾದವೂ ಸಮರ್ಪಕವಾಗಿಯೇ ಮೂಡಿಬಂದಿದೆ.

ಭಾರತದ ಹಿರಿಯ ಕತೆಗಾರರೂ, ಶ್ರೇಷ್ಠರೆನಿಸಿಕೊಂಡವರೂ-ಆದ ರವೀಂದ್ರನಾಥ ಠಾಕೂರ್, ಶರಶ್ಚಂದ್ರ ಚಟರ್ಜಿ ಹಾಗೂ ಪ್ರೇಮಚಂದ್ ಅವರ ಉತ್ತಮ ಕತೆಗಳು ಇಲ್ಲಿ ಸೇರಿಕೊಂಡಿವೆ. ಜಯಕಾಂತನ್ ಅವರ 'ಹಗಲು ಹೊತ್ತಿನ ಒಂದು ಪ್ಯಾಸೆಂಜರ್ ಗಾಡಿಯಲ್ಲಿ' ಕೂಡಾ ಈ ಸಂಕಲನದಲ್ಲಿ ಸೇರಿದ ಇನ್ನೊಂದು ಒಳ್ಳೆಯ ಕತೆಯಾಗಿದೆ.

ನೆರೆಹೊರೆಯ ಕತೆಗಳಲ್ಲಿ ಅಶ್ಫಖ್ ಅಹ್ಮದ್‌ರ 'ಗ್ಯಾಟೋ' ಮಾತ್ರ ಹೆಚ್ಚು ಮನಸ್ಸನ್ನು ಸೆಳೆಯುತ್ತದೆ.

ಪ್ರಸ್ತಾವನೆಯನ್ನು ಬರೆದ ನಿರಂಜನರು, ಲೇಖಕರು ಬಗ್ಗೆ ಕೆಲವು ವಿವರಗಳನ್ನು ಕೊಡಬಹುದಾತ್ತು. ಅದಿಲ್ಲದೆ, ಎಷ್ಟೇ ರಾಜಕೀಯ ಇತಿಹಾಸದ ಬಗ್ಗೆ ವಿವರಗಳನ್ನು ಕೊಟ್ಟರೂ ಉಪಯುಕ್ತವಿಲ್ಲದಂತಾಗುತ್ತದೆ. ನಾಗರಿಕತೆ, ಜನಾಂಗ ಬೆಳವಣಿಗೆಯ ಬಗ್ಗೆ ನಿಖರವಾದ ವಿಷಯವೋ ಎಂಬಂತೆ ವಿವರಣೆ ಕೊಟ್ಟಿರುವ ನಿರಂಜನರು ಆ ಚಪಲವನ್ನು ತಡೆ ಹಿಡಿಯಬಹುದಾಗಿತ್ತು.

ವಿಶ್ವಕಥಾ ಕೋಶದ ಆರನೆಯ ಸಂಪುಟ ಸಂಪೂರ್ಣ ಇಂಗ್ಲೆಂಡಿನ ಕತೆಗಳಿಗೆ ಮೀಸಲಾಗಿದೆ. ವಸ್ತು ವೈವಿಧ್ಯದ ದೃಷ್ಟಿಯಿಂದ ಈ ಸಂಕಲನವು ಗಮನಾರ್ಹವಾಗಿರುವುದಾದರೂ, ಅನೇಕ ಕತೆಗಳು ಸಾಮಾನ್ಯ ದರ್ಜೆಗೆ ಸೇರಿದವುಗಳಾಗಿವೆ. ಲಾರೆನ್ಸ್, ಎಚ್. ಜಿ. ವೆಲ್ಸ್, ಅಡ್‌ಕಾಕ್, ಸ್ಟಾನ್ ಬಾರ್‌ಸ್ಟೋ-ಮೊದಲಾದವರ ಕತೆಗಳು ಅವುಗಳ ನಿರೂಪಣೆ, ವಿಷಯ ವೈವಿಧ್ಯಗಳಿಂದ ಗಮನಾರ್ಹವಾಗಿವೆ. ಸಾಮರ್ಸೆಟ್ ಮಾಮ್ (ಇಗರ್ಜಿಯ ಕರ್ಮಚಾರಿ), ಅಡ್‌ಕಾಕ್ (ಹಡಗುಕಟ್ಟೆಯ ಗೇಟಿನ ಬಳಿ), ಸ್ಟಾನ್‌ಬಾರ್‌ಸ್ಟೋ (ಟಾಮಿಫ್ಲಿನ್‌ನ ಅನ್ವೇಷಣೆ) ಮೊದಲಾದ ಕತೆಗಳು,

ಮಾನವತೆಯ ಆಶಯಗಳನ್ನು ಆಳದಲ್ಲಿ ಬಯಸುವಂಥವು. ಹೀಗಾಗಿ ಇಲ್ಲಿಯ ಘಟನೆಗಳು ಬಹಳ ಸರಳವೆನ್ನಿಸುವುದಾದರೂ ಅವು ಕಟ್ಟುವ ವಾತಾವರಣದ ತೀವ್ರತೆಯ ಪರಿಣಾಮಕಾರಿಯಾಗಿದೆ.

ಅನುವಾದಕರು ಕಥೆಗಳನ್ನು ಅನುವಾದಿಸಲು ಕಷ್ಟಪಟ್ಟಿರುವುರಾದರೂ, ಕೆಲವು ಕಡೆಗಳಲ್ಲಿ ಕೃತಕವಾದ ವಾಕ್ಯಗಳು ಎದ್ದು ಕಾಣುತ್ತವೆ. ಸಂಪಾದಕರು ಇಂತಹ ಕಡೆ ಗಳಲ್ಲಿ ಸ್ವಲ್ಪ ಗಮನಹರಿಸಬಹುದಾಗಿತ್ತು.

'ಮಂಜು ಹೂವಿನ ಮದುವಣಿಗ'—ಹಂಗೇರಿ, ರುಮಾನಿಯ ದೇಶಗಳ ಕಥೆ ಗಳನ್ನು ಒಳಗೊಂಡ ಕಥಾಸಂಕಲನ. ಹಂಗೆರಿಯ ಎಂಟು ಕಥೆಗಳೂ, ರುಮಾನಿಯದ ನಾಲ್ಕು ಕತೆಗಳೂ ಇಲ್ಲಿ ಸಂಕಲಿತವಾಗಿವೆ. ಈ ಸಂಕಲನದ ಹೆಚ್ಚುಕಡಿಮೆ ಎಲ್ಲ ಕತೆಗಳೂ ಒಂದಿಲ್ಲೊಂದು ರೀತಿಯಲ್ಲಿ ಓದುಗನ ಮನವನ್ನು ಸೆಳೆಯುತ್ತವೆ. ನವ ಯುಗ ಆರಂಭದ ಪೂರ್ವದ ಎಲ್ಲ ದಬ್ಬಾಳಿಕೆ, ಶ್ರೀಮಂತರ ಕ್ರೂರವರ್ತನೆ, ಭಯ-ದಂಗೆಯ ಕಿಡಿಕೆದರುವಿಕೆ-ಹೀಗೆ ಸಂಕ್ರಮಣಾವಸ್ಥೆಯನ್ನು ಇಲ್ಲಿನ ಕತೆಗಳು ವಿವಿಧ ವಿನ್ಯಾಸಗಳಲ್ಲಿ ಹಿಡಿಯಲು ಪ್ರಯತ್ನಿಸಿವೆ. 'ಮಂಜು ಹೂವಿನ ಮದುವಣಿಗ'— 'ನಾಜಿಗಳು' 'ಭಯ'-ಮುಂತಾದ ಕಥೆಗಳು ಆ ವಾತಾವರಣದ ವಿವಿಧ ಸ್ವರೂಪಗಳನ್ನು ಹಿಡಿಯಲು ಪ್ರಯತ್ನಿಸುವಂಥವು. ಎಲ್. ಎಸ್. ಡಿಯಂಥ ಮೇಲುನೋಟಕ್ಕೆ ಸರಳ ನಗೆ ಕಥೆಯಂತೆ ತೋರಿದರೂ ಅರ್ಥಗರ್ಭಿತ ನೆಲೆಗಳನ್ನೊಳಗೊಂಡ ಕಥೆಯೂ ಈ ಸಂಕಲನದಲ್ಲಿ ಸೇರಿವೆ.

ರುಮಾನಿಯದ ಕತೆಗಳಲ್ಲಿ 'ಕೊನೆಯದಾಳಿ', 'ಪದಕ' ಈ ಕಥೆಗಳು ಹೆಚ್ಚು ಗಮನ ಸೆಳೆಯುವಂಥವುಗಳು. ಬದುಕನ್ನು ಪ್ರೀತಿಸುವ, ವ್ಯಕ್ತಿಗಳ ನಡತೆಯು ಇಲ್ಲಿ ಕತೆಗಳ ಶ್ರೇಷ್ಟತೆಗೆ ಕಾರಣವಾಗಿದೆ.

ಕೆ. ಎಸ್. ನಾರಾಯಣಸ್ವಾಮಿಯವರು ಅನುವಾದವನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ. ಭಾಷೆಯ, ಬಳಕೆ, ನಿರೂಪಣೆಯ ಶೈಲಿ-ಇವುಗಳಲ್ಲಿ ಕನ್ನಡದ ಸತ್ವವನ್ನು ತುಂಬಲು ಯತ್ನಿಸಿ ಯಶಸ್ವಿಯಾಗಿದ್ದಾರೆ ಎಂದೇ ಹೇಳಬಹುದು.

ವಿಶ್ವಕಥಾಕೋಶ ಮಾಲೆಯ ಎಂಟನೆಯಸಂಪುಟ ಆಸ್ಟ್ರೇಲಿಯ ನ್ಯೂಜಿಲೆಂಡ್, ದೇಶಗಳಕಥೆಗಳನ್ನು ಒಳಗೊಂಡಿದೆ. 'ಬೂದುಬಣ್ಣದ ಕಾಂಗರೂ' ಎನ್ನುವ ಹೆಸರಿನ ಈ ಸಂಕಲನದಲ್ಲಿ ಆಸ್ಟ್ರೇಲಿಯದ 14 ಕಥೆಗಳೂ ನ್ಯೂಜಿಲೆಂಡಿನ 2 ಕಥೆಗಳೂ ಇವೆ.

ಪರಕೀಯರ ದಬ್ಬಾಳಿಕೆಯಿಂದ ಮೂಲನಿವಾಸಿಗಳ ಸಂಸ್ಕೃತಿ ಅಧೀನವಾಗಿ ಹೋದುದರ ಹೃದಯ ವಿದ್ರಾವಕ ಕತೆಗಳು ಆಸ್ಟ್ರೇಲಿಯಾದ ಕಥೆಗಳ ಮುಖ್ಯವಾದ ಧೋರಣೆಯನ್ನು ರೂಪಿಸಿವೆ. 'ಬೂದು ಬಣ್ಣದ ಕಾಂಗರೂ' ಕಥೆ ಇಂಥ ದುರಂತ ಬೆಳವಣಿಗೆಯನ್ನು ಸಾಂಕೇತಿಕವಾಗಿ ಚಿತ್ರಿಸುತ್ತದೆ. ಆಸ್ಟ್ರೇಲಿಯದ ಈ ಎಲ್ಲ ಕಥೆಗಳು ವಿವಿಧ ರೀತಿಯಲ್ಲಿ ಮೂಲನಿವಾಸಿಗಳ ಸಂಸ್ಕೃತಿಯ ಮೇಲೆ ನಡೆಸಿದ

ದಬ್ಬಾಳಿಕೆಯನ್ನು ವಿವರಿಸುತ್ತವೆ. ಮೂಲ ನಿವಾಸಿಗಳ ಪ್ರಕೃತಿ ಪ್ರೇಮ, ಮುಗ್ಧತೆ ನೆಲದ ಮೇಲಿನ ಪ್ರೀತಿ ಹಾಗೂ ಬಲಹೀನತೆಯನ್ನು ಎಲ್ಲ ದಿಕ್ಕುಗಳಿಂದಲೂ ನಿರ್ನಾಮ ಮಾಡಿದ ದುರ್ಜನ ಪರಕೀಯರ ಕ್ರೌರ್ಯವನ್ನು ಇವು ಸೊಗಸಾಗಿ ವಿವರಿಸುತ್ತವೆ. 'ನಮ್ಮದೀ ನೆಲ' 'ಹಾಡುಗಾರ ಕೈಜೆಕ್' 'ರುಂಡಗಳು ಮುಂಡಗಳ ಮೇಲೆ ಇರಲಿ' ಮೊದಲಾದ ಕತೆಗಳು ಇಲ್ಲಿನ ಅತ್ಯುತ್ತಮ ಕಥೆಗಳೆಂದೇ ಹೇಳಬಹುದು.

ನ್ಯೂಜಿಲೆಂಡಿನ ಎರಡು ಕಥೆಗಳು ಕುತೂಹಲ ಕೆರಳಿಸುವ ನಿರೂಪಣೆ ಹಾಗೂ ವಿಷಯುಗಳನ್ನು ಹೊಂದಿವೆ.

ಈ ಕಥೆಗಳನ್ನು 'ಸಂಜೀವ ಬೋಳಾರರು' ಸಮರ್ಥವಾಗಿ ಅನುವಾದಿಸಿ ದ್ದಾರೆ. ಕನ್ನಡದ ಕತೆ ಎನ್ನಿಸುವ ಹಾಗೆ ಶೈಲಿಯ ಸಹಜತೆ ಇವರ ಅನುವಾದದಲ್ಲಿ ಮೂಡಿ ಬಂದಿದೆ.

ಇಂತಹ ಅತ್ಯುತ್ತಮ ಸಂಪುಟಗಳನ್ನು ಪ್ರಕಟಿಸುವ ಯತ್ನ ಮಾಡುತ್ತಿರುವ "ನವ ಕರ್ನಾಟಕ ಪಬ್ಲಿಕೇಷನ್" ಅವರ ಕಾರ್ಯವನ್ನು ಅಭಿನಂದಿಸುವುದು ಇಲ್ಲಿ ಸೂಕ್ತವಾದುದು.

## ಕಾದಂಬರಿ

### ವಿವಿಧ ಸಮೀಕ್ಷಕರಿಂದ

ಈ ವರ್ಷದ ಸಾಹಿತ್ಯ ವಾರ್ಷಿಕದ ಸಮೀಕ್ಷೆಗೆ ದೊರೆತ ಕಾದಂಬರಿಗಳು ಸುಮಾರು ನೂರು. ಕಳೆದ ವರ್ಷದಂತೆಯೇ ಈ ವರ್ಷದ ಕಾದಂಬರಿಗಳ ಸಮೀಕ್ಷೆಯನ್ನು ವಿವಿಧ ಬರೆಹಗಾರರಿಂದ ಮಾಡಿಸಲಾಗಿದೆ. ವರ್ಷವರ್ಷವೂ ಹೆಚ್ಚುತ್ತಿರುವ ಕಾದಂಬರಿಗಳ ಸಂಖ್ಯೆಯನ್ನು ಗಮನಿಸಿದರೆ ಈ ವಿಭಾಗದ ಸಮೀಕ್ಷೆಯನ್ನು ಹೀಗಲ್ಲದೆ ಬೇರೆಯ ವಿಧಾನದಿಂದ ಕೈಗೊಳ್ಳುವುದು ಸಾಧ್ಯವಾಗುತ್ತಿಲ್ಲ. ಈ ಪ್ರಯತ್ನದಿಂದ ಈ ವಿಭಾಗದ ಬರವಣಿಗೆ ಒಂದು ಏಕರೂಪತೆಯನ್ನು ಪಡೆಯದಿರುವುದು ಅನಿವಾರ್ಯವಾಗಿದೆ.

ಈ ವರ್ಷ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸುಮಾರು ನೂರು ಕಾದಂಬರಿಗಳಲ್ಲಿ ಐತಿಹಾಸಿಕ, ಪೌರಾಣಿಕ, ಪತ್ತೆದಾರಿಗಳು ಹತ್ತು; ಮಹಿಳೆಯರು ಬರೆದ ಕಾದಂಬರಿಗಳು ಇಪ್ಪತ್ತೈದು; ಅನ್ಯಭಾಷೆಗಳಿಂದ ಕನ್ನಡಕ್ಕೆ ಬಂದವುಗಳು ಹನ್ನೊಂದು; ಇನ್ನುಳಿದವು ಸಾಮಾಜಿಕ ಕಾದಂಬರಿಗಳ ಸಾಲಿಗೆ ಸೇರುತ್ತವೆ.*

ನಾವು ಕಟ್ಟಿದ ಸ್ವರ್ಗ : ಶಿವರಾಮ ಕಾರಂತ

ಸ್ವಾತಂತ್ರ್ಯೋತ್ತರ ಭಾರತದ "ಮುನ್ನಡೆ"ಯ ಬಗ್ಗೆ ನಿರಾಸೆ ಹೊಂದಿದ ಹಳೆಯ ತಲೆಮಾರಿನ ಕಾದಂಬರಿಕಾರರು, ಈ ಭ್ರಮನಿರಸನ ಪರ್ವವನ್ನು ಬರೆದಿದ್ದಾರೆ. ಬಿಡುಗಡೆಯನ್ನು ಪಡೆದ ಮೇಲೆ ಮುನ್ನಡೆಗಾಗಿ ಹಿಡಿದ ಹಾದಿ ಸ್ವರ್ಗವನ್ನು ಕಟ್ಟುವ ಕಡೆಗೆ ಒಯ್ಯುವುದೆಂದು ಮೊದಮೊದಲು ನಂಬಿಸಲಾಗಿದ್ದರೂ ಇಪ್ಪತ್ತೈದು ವರ್ಷಗಳಾಗುವಷ್ಟರಲ್ಲಿ, ಕಟ್ಟಿದ್ದು ಸ್ವರ್ಗವಲ್ಲವೆಂಬ ಅರಿವು ಮೂಡತೊಡಗುವ ನೋವಿ ಧಾಟಿ ಕಟಕಿಯ ಮೂಲಕ ಇಲ್ಲಿ ತುಂಬಿಕೊಂಡಿದೆ.

ಈ ಕಾದಂಬರಿಗೆ ಕತೆ ಎಂಬುದು ನೆಪ ಮಾತ್ರ; ಅತಿ ತೆಳುವು. ಅದರ ಹಂದರದ ಮೇಲೆ ನಿರೂಪನ ಸ್ವಗತ ಸಮಾಲೋಚನೆ ನಡೆಯುತ್ತಾ ಹೋಗುತ್ತದೆ. ಪತ್ರಿಕೆಯ ವರದಿಗಾರನಾಗಿ ಕೆಲಸ ಮಾಡುವ ನಿರೂಪಕ ತನ್ನ ಹುಟ್ಟೂರನ್ನು ಎಷ್ಟೋ ವರ್ಷಗಳ ಅನಂತರ ಕಾಣಬಂದಾಗ ಅಲ್ಲಿ ಆಗಿದ್ದ ಬದಲಾವಣೆಗಳು ಅವನಲ್ಲಿ ಮೂಡಿಸಿದ ಚಿಂತನೆಗಳನ್ನು ನಿರೂಪಿಸುತ್ತಾನೆ. ಮುಂದಾಳುಗಳಾದವರು, ಅವರ ಪಕ್ಷದ ಕಾರ್ಯಕ್ರಮುಗಳು, ಪ್ರಗತಿಯ ಯೋಜನೆಗಳು, ಜನತೆಯ ದುಡಿಮೆಯಂ ಬಗ್ಗೆ, ಸಾಮಾ

---

* ಸಂಪಾದಕರು

ಜಿಕ ಅಸಮತೆಯನ್ನು ತೊರೆಯಲು ಆಯ್ದು ಮಾರ್ಗ ಇವೇ-ಮೊದಲಾದ ವಿಚಾರ ಗಳನ್ನು ಕುರಿತು ನಿರೂಪಕ ನಮ್ಮೆದುರು ಚಿಂತಿಸುತ್ತಾ ಹೋಗುತ್ತಾನೆ. ಈಗ "ಚಂಪಾಲಾಪುರ"ದ ಮುಂದಾಳುಗಳಾದವರನ್ನು ಭೇಟಿಯಾಗಿ ಅವರೊಡನೆ ಮಾತು ಕತೆಯಾಡುತ್ತಾನೆ. ಉದ್ದಕ್ಕೂ ನಮಗೆ ಕಾಣುವುದು ನಿರೂಪಕ ಅನುಭವಿಸುತ್ತಿರುವ ಭ್ರಮೆಯ ನಿರಸನಗೊಂಡದ್ದು. ರಾಮರಾಜ್ಯದ ಬದಲು ತಾನು ಕಾಣುತ್ತಿರುವುದು ಅಸಹನೀಯತೆಯ ಕಡೆಗೆ ಒಯ್ಯುತ್ತಿರುವ ಪರಿಸ್ಥಿತಿ ಎಂಬುದನ್ನು ಕಂಡು ಕೊಳ್ಳುತ್ತಾನೆ.

ಕಾರಂತರು ಮುನ್ನುಡಿಯಲ್ಲಿ ತಮ್ಮ ರಾಜಕೀಯ ಚಿಂತನೆಯ ಬಗ್ಗೆ ಕೆಲವು ಮಾತುಗಳನ್ನು ಹೇಳಿಕೊಂಡಿದ್ದಾರೆ. ಸಮಾಜವಾದ, ಸಾಮ್ಯವಾದ ಮುಂತಾದ ವಾಮಪಂಥೀಯ ಚಿಂತನೆಗಳ ಬಗ್ಗೆ ತಮಗೆ ಇರುವ ವಿರೋಧವನ್ನು ಒಪ್ಪಿಕೊಳ್ಳಲು ಅವರು ಹಿಂಜರಿದಿಲ್ಲ. ಅದರಿಂದಾಗಿಯೇ ಅವರು ಭಾರತದ ಪ್ರಗತಿಯ ಹಾದಿಯು ಅನ್ಯಾಯದ, ತರ್ಕಹೀನತೆಯ ಬುನಾದಿಯನ್ನು ಅವಲಂಬಿಸಿದೆ. ಎಂದು ವಾದಿಸಲು ತೊಡಗುವುದು. ಗುರೂಜಿಯೊಡನೆ ಕಾಳಪ್ಪ(ಕಾರ್ಮಿಕ ನಾಯಕ) ಅವರು ಅಂದರೆ ನಿರೂಪಕ – ನಡೆಸುವ ಸಂಭಾಷಣೆಗಳಲ್ಲಿ ಇದು ಖಚಿತಗೊಳ್ಳುತ್ತದೆ. ಹಾಗಾಗಿ ಕಾದಂಬರಿಯನ್ನು ಕುರಿತು ಮಾತನಾಡುವುದೆಂದರೆ ಕಾರಂತರ ರಾಜಕೀಯ ಚಿಂತನೆ ಗಳನ್ನು ಕುರಿತ ಚರ್ಚೆಯನ್ನು ಬೆಳೆಸಬೇಕಾಗುತ್ತದೆ. ಇದೂ ಕೂಡ ಕೇವಲ ವಿಚಾರ ಗಳ ಹಂತದಲ್ಲಿ ಹೊರಬೀಳುತ್ತಿರುವುದರಿಂದ ಹಾಗೂ ಕಾದಂಬರಿಯ ಬಂಧದ ಅಂಗವಾಗಿ ಕಾಣುತ್ತಿಲ್ಲವಾದ್ದರಿಂದ ನಮ್ಮ ಚರ್ಚೆ ಕೂಡ ನಿರುಪಯುಕ್ತವಾಗುವುದು.

ಇಡೀ ಕಾದಂಬರಿಯು ಒಂದು ದೀರ್ಘವಾದ ಸ್ವಗತದಂತಿದೆ ಎಂದು ಮೊದಲಲ್ಲೆ ಹೇಳಲಾಗಿದೆ. ಕಾರಂತರು ತಮಗೆ ಈಚಿನ ದಿನಗಳಲ್ಲಿ ಆದ ಮಾನಸಿಕ ಕ್ಷೋಬೆಯ ಪರಿಣಾಮವಾಗಿ ಕೇವಲ ಕಟಕಿಯನ್ನು ಮಾತ್ರ ಆಧರಿಸಿ ಒಂದು ಕೃತಿಯನ್ನು ರಚಿಸಲು ಯತ್ನಿಸಿದಂತೆ ಕಾಣುವುದಾದರೂ ಅವರ ಹಿಂದಿನ ಕೃತಿಗಳಾದ "ಗ್ನಾನ" "ದೇವದೂತರು" ಮುಂತಾದುವುಗಳಲ್ಲಿ ಯಶಸ್ವಿಯಾದಂತೆ ಇಲ್ಲಿ ಆಗುವುದಿಲ್ಲ. ಕಾರಣ (1) ಕಾದಂಬರಿಯ ಮೂಲಬಂಧವೇ ಕೃತಿಗೆ ದೊರಕದೇ ಹೋಗಿರುವುದು. (2) ಕಾರಂತರ ವಿಚಾರಗಳು ಕೇವಲ ಅಂಶಿಕ ಸತ್ಯವನ್ನು ಆಧರಿಸಿದ್ದು ವಾಸ್ತವವನ್ನು ಅದರ ಎಲ್ಲ ಆಯಾಮಗಳಲ್ಲೂ ಕಾಣಲು ಸಿದ್ಧವಿಲ್ಲದಿರುವುದು.

ಹೀಗಾಗಿ ಈ ಕಾದಂಬರಿ ಕಾರಂತರ ಕೃತಿಗಳ ಪಟ್ಟಿಗೆ ಒಂದು ಸೇರ್ಪಡೆ ಮಾತ್ರ ; ಮತ್ತೇನೂ ಅಲ್ಲ.

ಕರ್ವಾಲೋ : ಪೂರ್ಣಚಂದ್ರ ತೇಜಸ್ವಿ

ಬಹುಮಟ್ಟಿಗೆ ಸಣ್ಣ ಕತೆಗಳನ್ನು ಬರೆಯುತ್ತಿದ್ದ ತೇಜಸ್ವಿಯವರ ದೀರ್ಘಕೃತಿ ಇದು. ಈ ಕಾದಂಬರಿಗಾಗಿ ಅವರು ಸಾಂಪ್ರದಾಯಿಕ ನಿರೂಪಣಾ ವಿಧಾನವನ್ನೇ

ಅನುಸರಿಸಿದ್ದಾರೆ. ನಿರೂಪಕನೂ ಕ್ರಿಯೆಯಲ್ಲಿ ಭಾಗಿಯಾಗುತ್ತಾ ಹೋಗುವ ಕ್ರಮ ಇಲ್ಲಿದೆ. ವಾಸ್ತವವಾದಿ ನೆಲೆಗಳನ್ನು ಅವಲಂಬಿಸಿದ ಈ ಕಾದಂಬರಿಯ ತಾತ್ತ್ವಿಕ ಚೌಕಟ್ಟನ್ನು ಕುರಿತಂತೆ ಕೆಲವು ಮಾತುಗಳನ್ನು ಮೊದಲಲ್ಲಿ ಗಮನಿಸಬಹುದು. ದೈನಿಕಗಳಿಗೆ ಬದ್ಧವಾದ ಬದುಕಿನ ಲಯಗಳನ್ನು ಸ್ಥೂಲವಾಗಿ ನೋಡುವುದನ್ನು ಬಿಟ್ಟು, ಸೂಕ್ಷ್ಮಗಳಿಗೆ ತೆರೆದಾಗ ಅದು ನಮ್ಮೆದುರು ರಾಚುವ ವಿಚಿತ್ರ ಕ್ರಮಗಳನ್ನು ಇಲ್ಲಿ ಶೋಧಿಸುವ ಬಗೆ ಕಂಡುಬರುತ್ತದೆ. ಹಲವು ನೆಲೆಗಳಲ್ಲಿ ಕಾದಂಬರಿ ಇದನ್ನು ಸಾಧಿಸಲು ಯತ್ನಿಸಿದೆ. ಹಾರುವ ಓತಿಯೊಂದನ್ನು ಕಂಡುಹಿಡಿಯುವ ಸಾಹಸಕ್ಕೆ ಬದ್ಧರಾದವರ ಕತೆಯೊಡನೆ ಹೆಣೆದುಕೊಳ್ಳುವ ಜೀವನದ ಇನ್ನಿತರ ವಿವರಗಳು ನಮ್ಮ ಪರಿಸರವೇ ನಮಗೆ ಬೇರೊಂದು ಬಗೆಯಲ್ಲಿ ಕಾಣುವಂತೆ ಮಾಡುತ್ತವೆ. ಬೀಕೀಪರ್ ಮಂದಣ್ಣ (ಹೆಸರಿಗೂ ಅವನ ಸೂಕ್ಷ್ಮ ಪರಿಶೀಲನಾ ಶಕ್ತಿಗೂ ಹೊಡೆದು ಕಾಣುವ ವ್ಯಂಗ್ಯವಿದೆ) ಬಯಸುವ ಬದುಕು ಹಾಗೂ ಅವನ ಮೂಲಕ ನಿರೂಪಕನಿಗೆ ಮೊದಲಾಗಿ ಹಲವರಿಗೆ ತೋರುವ ಅದ್ಭುತ ಜಗತ್ತು ಕಾದಂಬರಿಯಲ್ಲಿ ಪರಸ್ಪರ ಮುಖಾಮುಖಿಯಾಗಿ ನಿಂತಿವೆ ; ಅವೆರಡರ ಪರಸ್ಪರ ಅರ್ಥಪೂರ್ಣತೆಯ ನಿರ್ಧಾರವೇ ಸತ್ಯದ ಅನ್ವೇಷಣೆಯಾಗುವುದು.

ಇದಕ್ಕೂ ಮಿಗಿಲಾಗಿ ಹಾರುವ ಓತಿಗೂ ಮಂದಣ್ಣನಿಗೂ ಇನ್ನೊಂದು ಬಗೆಯ ಸಂಬಂಧವಿದೆ. ಪ್ರಜ್ಞೆಯ ಬೆಳವಣಿಗೆಯ ಒಂದು ಹಂತದಲ್ಲಿ ಸ್ಥಗಿತಗೊಂಡ ಮಂದಣ್ಣನಂತವರು ಹಾಗೂ ನಿಸರ್ಗದ ವಿಕಾಸ ಪಥದಲ್ಲಿ ಸ್ಥಗಿತಗೊಂಡ ಹಾರುವ ಓತಿಯೂ ಒಂದು ನೆಲೆಯಲ್ಲೇ ನಿಲ್ಲುವುದು. ಕಾದಂಬರಿಯ ಕೊನೆಯಲ್ಲಿ ಬರುವ ಮಾತುಗಳನ್ನು ಗಮನಿಸಬಹುದು. "ಹಾರೋ ಪ್ರಯತ್ನದಲ್ಲಿ ಅದು ತಪ್ಪು ದಾರಿ ಹಿಡೀತು ಅಂತ ಕಾಣುತ್ತೆ. ಕೈಗಳ ಬದಲು ಪಕ್ಕೆ ಉಪಯೋಗಿಸಿತು ಸಾರ್. ಅದಕ್ಕೆ ಅದು ಹಾಗೇ ಉಳೀತು. ಮಿಕ್ಕವು ರೆಕ್ಕೆ ಪುಕ್ಕ ಬೆಳೆಸಿಕೊಂಡು ಹಕ್ಕಿಯಾಗಿ ಬಿಟ್ಟವು ಎಂದೆ. 'ತಪ್ಪು ಸರಿ ಹೇಗೆ ಹೇಳ್ತಿರಿ. ನಮಗೆ ಈ ಕ್ಷಣ, ಇಲ್ಲಿ ಹೀಗನ್ನಿಸಿದೆ. ಜೀವ ವಿಕಾಸಕ್ಕೆ ಎಲ್ಲಿದೆ ಕೊನೆ' ಎಂದರು ಕರ್ವಾಲೋ". ಇಲ್ಲಿ ಕರ್ವಾಲೋ ಅವರು ಹೇಳುತ್ತಿರುವ ಮಾತಿನ ಮೂಲಕ ಬರಲಿರುವ ದಿನಗಳಲ್ಲಿ ಸ್ಥಗಿತಗೊಂಡ ಪ್ರಜ್ಞೆಯ ಜೀವಿಗಳು ಪಡೆಯ ಬಹುದಾದ ಹೊಸ ಬದುಕನ್ನು ಕುರಿತಂತೆ ಕೂಡ ಚಿಂತನೆ ಇದೆ. ಇವರ ಕೈಗೆ ಸಿಕ್ಕದೆ ತಪ್ಪಿಸಿಕೊಂಡ ಹಾರುವ ಓತಿ ಹೊರಟ ಅಂತ ರಾಳದತ್ತಣ ಪಯಣ ಇದನ್ನೆ ಸೂಚಿಸುವಂತಿದೆ.

ಈಗಾಗಲೇ ಈ ಕಾದಂಬರಿಯ ಬಗ್ಗೆ ಸಾಕಷ್ಟು ದೀರ್ಘವಾದ ಚರ್ಚೆಗಳು ನಡೆದಿವೆ : ಪ್ರಮುಖ ವಿಮರ್ಶಕರು ಬರೆದಿದ್ದಾರೆ. ಕಾದಂಬರಿಯು ಒಂದು ಅಧ್ಯಾತ್ಮಿಕ ಶೋಧನೆಯ ಪರಿವಲಯವನ್ನು ತನ್ನ ನಿರೂಪಣೆಯ ಭಾಷೆಯಲ್ಲಿ ರೂಪಿಸಿಕೊಂಡಿದೆ ಎನ್ನುವ ಪೋಲಂಕಿ ರಾಮಮೂರ್ತಿಯವರ ಮಾತು ನಿಜ

(ನೋಡಿ : ರುಜುವಾತು—1) ಆದರೆ ಮುಖ್ಯವಾದ ಪ್ರಶ್ನೆ ಎಂದರೆ ಈ ಶೋಧನೆಯ ಹಿಂದಿರುವ ಉದ್ದೇಶವಂತೂ ಅಧ್ಯಾತ್ಮಿಕವಾದುದಲ್ಲ. ದೈನಿಕಗಳ ಬದುಕನ್ನು ಆದರ ಜಂಜಡಗಳನ್ನು ಗೊಂದಲಗಳನ್ನು ಚಿತ್ರಿಸುವ ಕಾದಂಬರಿಕಾರರು ಅವ್ಯಕ್ತವಾದುದನ್ನು ಶೋಧಿಸುವ ಆಕಾಂಕ್ಷೆಯತ್ತ ಕಾದಂಬರಿಯನ್ನು ಮುನ್ನಡೆಸುತ್ತಾ ಹೋಗುವುದು ಮೇಲು ನೋಟಕ್ಕೆ ಪಲಾಯನದಂತೆ ಕಾಣಬಹುದು. ಆದರೆ ಈ ಕಾದಂಬರಿ ದೈನಿಕಗಳಿಗೂ ಶೋಧಿತವಾಗುವುದಕ್ಕೂ ಇರುವ ಸಂಬಂಧವೇ ಮುಖ್ಯವಾದುದರಿಂದ ಇದು ಜೀವನದ ಅರ್ಥಗಳ, ಬೆಳವಣಿಗೆಯ ಸಾಧ್ಯತೆಗಳ ಶೋಧನೆಯಂತೆ ಕಾಣುತ್ತದೆ.

ತೇಜಸ್ವಿಯವರ ಸಾಹಿತ್ಯವನ್ನು ಚಿರವಾಸ್ತವ ಮತ್ತು ಚರವಾಸ್ತವಗಳ ಮುಖಾಮುಖಿಯಲ್ಲಿ ವಿವರಿಸಲು ಯತ್ನಿಸಿರುವ ಜಿ. ಎಚ್. ನಾಯಕರ ಅಭಿಪ್ರಾಯಗಳು (ನೋಡಿ : 'ಕರ್ವಾಲೋ ಕೊನೆಯ ಪುಟಗಳು) ಇನ್ನೂ ಸಾಕಷ್ಟು ಚರ್ಚಿತವಾಗಬೇಕಾಗಿದೆ. ಅದಕ್ಕಿಲ್ಲಿ ಅವಕಾಶವಿಲ್ಲ. ಆದರೆ ಹಾರುವ ಓತಿಯನ್ನೂ ಕೂಡಾ ಕಾದಂಬರಿ ಕೇವಲ ಸ್ಥಗಿತಗೊಂಡ ಆದರೆ ಚಲನೆ, ಬದಲಾವಣೆ ಸಾಧ್ಯವಿರುವ ಜೀವವೆಂದು ಪರಿಗಣಿಸುತ್ತದೆಂಬುದನ್ನು ಗಮನಿಸಿದಾಗ ಅದನ್ನು ಚಿರವಾಸ್ತವವೆಂದು ವೆಂದು ವ್ಯಾಖ್ಯಾನಿಸುವುದು ಹೇಗೆ ಎನ್ನುವ ಪ್ರಶ್ನೆಯು ಉಂಟಾಗುತ್ತದೆ.

ಮೌಮೌಬಿಗಳು, ಸಹಜಲಯದ ಜೀವನದಲ್ಲಿ ತಟಕ್ಕನೆ ನುಗ್ಗಿ ಅನಿರೀಕ್ಷಿತವಾದ ಪರಿಣಾಮಗಳಿಗೆ ಕಾರಣವಾಗುವಂತೆ ಸ್ಥೂಲ ಜಗತ್ತಿನ ಗ್ರಹಿಕೆಯ ಒಳಗೆ ಸೂಕ್ಷ್ಮ ಗ್ರಹಿಕೆಯ ವಿವರಗಳು ನುಗ್ಗಿ ಹೊಸ ಅರ್ಥವಂತಿಕೆಯತ್ತ ಮನುಷ್ಯ ಮುನ್ನುಗ್ಗುವಂತೆ ಮಾಡುತ್ತಿರುತ್ತವೆ. ಇದನ್ನು ಕಾದಂಬರಿ ತಿಳಿಸಿಕೊಡುವ ವಿಧಾನ ಅನನ್ಯವಾದುದು. ಬಂಧದಲ್ಲಿ ಯಾವ ಹೊಸತನವನ್ನೂ ರೂಪಿಸಿಕೊಳ್ಳದೆಯೇ ಸಾಂಪ್ರದಾಯಿಕ ಬಗೆಯಲ್ಲೆ ಇದನ್ನು ಕಾದಂಬರಿಕಾರರು ಸಾಧಿಸಿದ್ದಾರೆಂಬುದು ಮತ್ತಷ್ಟು ಗಮನಾರ್ಹವಾಗುತ್ತದೆ.

ಅಬ್ರಾಹ್ಮಣ : ಕೆ. ಟಿ. ಗಟ್ಟಿ

ಸಂಪ್ರದಾಯಸ್ಥನಾದ ಮೇಲುವರ್ಣದ ಕುಟುಂಬವೊಂದಕ್ಕೆ ಸೇರಿದ ನಾಯಕ ಕುಟುಂಬದ ಅಪೇಕ್ಷೆಗಳನ್ನು ಮೀರಿ ಹರಿಜನರ ಹುಡುಗಿಯೊಬ್ಬಳನ್ನು ಮದುವೆಯಾಗಿ, ವಿರೋಧಿಯಾದ ತಾಯಿಯು ಇಕ್ಕಿದ ಮದ್ದಿನಿಂದಲೇ ಸಾಯುವ ಕತೆಯನ್ನು ಈ ಕಾದಂಬರಿಕಾರರು ತಮ್ಮದೇ ಧಾಟಿಯಲ್ಲಿ ಹೇಳಿದ್ದಾರೆ. ಧಾರವಾಹಿಯಾಗಿ

ಪ್ರಕಟವಾದಾಗ ಓದುಗರು ಈ ಕೃತಿಯನ್ನು ಒಪ್ಪಿಕೊಂಡದ್ದು ಈ ಸಮೀಕ್ಷಕನ ಗಮನ ದಲ್ಲಿದೆ. ಜಾತಿಯ ಸಮಸ್ಯೆಯನ್ನು ಕುರಿತು ಜನಪ್ರಿಯ ಕಾದಂಬರಿಕಾರರು ಚಿಂತಿಸುವ ಕ್ರಮವೊಂದು ಇಲ್ಲಿ ಢಾಳಾಗಿ ಕಾಣುತ್ತದೆ. ಜಗದೀಶ ತತ್ತ್ವಶಾಸ್ತ್ರದ ವಿದ್ಯಾರ್ಥಿ ಯಾಗಿ ಕಾಲೇಜು ಉಪನ್ಯಾಸಕನಾಗಿ ಕೆಲಸಮಾಡುತ್ತಿದ್ದವನು ತನ್ನ ಅಣ್ಣನ ಕೊನೆ ಗಾಲದಲ್ಲಿ ಅವನ ಬಗ್ಗೆ ಸಹಾನುಭೂತಿ ತೋರಿದ ನರ್ಸ್ ಕಿಶೋರಿಯನ್ನು ಮದ ವೆ ಯಾಗುತ್ತಾನೆ. ಆದರೆ ಕಾದಂಬರಿಕಾರರು ಇಷ್ಟನ್ನು ನಮಗೆ ಹೇಳಲು ಹಲವಾರು ಉಪಕತೆಗಳನ್ನು ಹೊಂದಿಸಿಕೊಳ್ಳುತ್ತಾರೆ. ಅವುಗಳಲ್ಲಿ ಎಷ್ಟೋ ಕತೆಯ ಹರವನ್ನು ಸುಮ್ಮನೆ ಹೆಚ್ಚಿಸಲೆಂದು ಮಾತ್ರ ಬಂದವು. ಕೆಲವು ಕತೆ ಸಂಬಂಧ ತೋರಿದಂತೆ ಕಂಡು ಬಂದರೂ ಕಾದಂಬರಿಕಾರರು ಅದನ್ನು ಬೆಳೆಸುವ ಗೋಜಿಗೆ ಹೋಗುವುದಿಲ್ಲ. ಉದಾಹರಣೆಗಾಗಿ ಒಂದು ಪ್ರಸಂಗವನ್ನು ಗಮನಿಸಬಹುದು. ಜಗದೀಶನ ಅಣ್ಣ ಶಂಬುಭಟ್ಟ ತನ್ನ ಕೈಕೆಳಗಿನ ಹೆಣ್ಣೊಂದನ್ನು ಕೂಡಿದ್ದರಿಂದ ಅವಳು ಗರ್ಭಿಣಿಯಾಗು ತ್ತಾಳೆ. ಕೆಳಜಾತಿಯ ಆ ಹೆಣ್ಣಿನ ಸಂಬಂಧಿಕರ ಬಾಯನ್ನು ಹಣದ ಮೂಲಕ ನಾಯಕನ ತಂದೆ ಮುಚ್ಚಿಸುತ್ತಾನೆ. ಕಿಶೋರಿಯನ್ನು ಮದುವೆಯಾಗುವ ಜಗದೀಶ ನನ್ನು ಈ ಕುಟುಂಬ ವಿರೋಧಿಸಿದ್ದರಲ್ಲಿ ವಿಚಿತ್ರವೇನೂ ಇಲ್ಲ. ಆದರೆ ಇಡೀ ಪ್ರಸಂಗವನ್ನು ಜಗದೀಶನ ನೆಲೆಯಲ್ಲಿ ಮಾತ್ರ ಕಾಣಲು ಯತ್ನಿಸುತ್ತಿ ುವುದರಿಂದ ಅವನ ವಿರುದ್ಧ ಎಲ್ಲರೂ ಕತ್ತಿ ಮಸೆಯುತ್ತಿರುವುದನ್ನು ಮಾತ್ರ ಲೇಖಕರು ಕಾಣ ಬಯಸುವಂತಿದೆ. ಅದೂ ಎಲ್ಲಿ ಹೀಗೆ ಜಗದೀಶ ಮತ್ತು ಅವನ ಶತ್ರುಗಳು ಎಂಬ ವರ್ಗೀಕರಣ ಮಾತ್ರ ಕಾದಂಬರಿಯಲ್ಲಿ ಕಂಡುಬರುವುದೋ ಎಂಬ ನೆಲೆಯಲ್ಲಿ ಒಂದಿಬ್ಬರು ಸಹಾನುಭೂತಿಯನ್ನುಳ್ಳವರನ್ನು ಕೂಡ ಕಾದಂಬರಿಕಾರರು ಸೃಷ್ಟಿಸು ತ್ತಾರೆ....ನಾನು ಇದೆಲ್ಲವೂ ಘಟನೆಯ ಸರಣಿಗಾಗಿ ಬೇಕಾದ ವಾತಾವರಣವನ್ನು ರೂಪಿಸುತ್ತಾ ಹೋಗುವ ಈ ಕಾದಂಬರಿಕಾರರಿಗೆ ವಸ್ತು ಮಾತ್ರ ಗೋಚರಿಸುತ್ತ ದೆಯೇ ಹೊರತು ಅದರ ತಾತ್ತ್ವಿಕ ಸಾರವಲ್ಲ. ಆದ್ದರಿಂದ ಓದುಗರು ಯಾವುದೇ ನೈತಿಕ ಆಘಾತವನ್ನು ಎದುರಿಸದೇ ಈ ಕೃತಿಯನ್ನು ಓದಿ ಮುಗಿಸಿಬಿಡಬಹುದು.

ಇನ್ನು ಘಟನೆಗಳ ಸರಣಿಗೆ ಹಾಗೂ ಅವುಗಳ ಚಿತ್ರೀಕರಣ ಕ್ರಮವನ್ನು ಕುರಿತಂತೆ ಕೆಲವು ಮಾತುಗಳು. ಕಾಲೇಜು ಅದರ ಪರಿಸರ ಮುಂತಾದ ಸನ್ನಿವೇಶ ಚಿತ್ರಣದಲ್ಲಿ ಕಾದಂಬರಿಕಾರರು ವಿವರಗಳನ್ನು ತಮಗೆ ತೋಚಿದಂತೆ ರೂಪಿಸುತ್ತಾ ಹೋಗುತ್ತಾರೆ. ವಾಸ್ತವವನ್ನು ತಮಗೆ ಕಾಣುವ ವಿವರಗಳೆಂದು ವ್ಯಾಖ್ಯಾನಿಸುವ ಬಗೆ ಇದು. ಇದರಿಂದ ಆಳದ ಆಯಾಮಗಳನ್ನು ಕಳೆದುಕೊಂಡ ಚಪ್ಪಟೆಯಾದ ಜನರು ಮಾತ್ರ ಕಾಣತೊಡಗುತ್ತಾರೆ. ಇಲ್ಲಿ ಆಗಿರುವುದೂ ಅದೇ. ಕಿಶೋರಿಯನ್ನು ಮದುವೆಯಾಗಿ ಬಂದಮೇಲೆ ಜಗದೀಶನ ಕ್ಲಾಸ್‌ರೂಮ್ ಭಾಷಣಗಳ ಭಾಗಗಳನ್ನು ಇಲ್ಲಿ ಗಮನಿಸಬಹುದು.

ಅದರಿಂದಾಗಿ ಇಲ್ಲಿನ ಸಮಸ್ಯೆಯ ಮೂಲದಲ್ಲಿ ಇರುವ ವ್ಯಕ್ತಿಗಳು ಪ್ರಾತಿನಿಧಿಕವಾಗದೇ ಪ್ರತಿಯಾದ ಸಮರ್ಥ ಜಗತ್ತನ್ನು ರಚಿಸಿಕೊಳ್ಳದೇ ಹೋಗುತ್ತವೆ. ಕೇವಲ ವ್ಯಕ್ತಿ ಕಥನವಾಗುವ ಮೂಲಕ ಆಸಕ್ತಿಯನ್ನು ಉಳಿಸಿಕೊಂಡು ಓದುತ್ತಾ ಹೋಗಬಹುದು ಮಾತ್ರ.

ಬಿಸಿಲ್ಗುದುರೆ ; ಕೆ. ಟಿ. ಗಟ್ಟಿ

ಗಟ್ಟಿಯವರ ಈ ಕಾದಂಬರಿಯ ಕ್ಷೇತ್ರ ಕುಟುಂಬ. ಹುಸಿಯಾದ ಅಂತಸ್ತು, ಆಕಾಂಕ್ಷೆಗಳ ಬೆನ್ನು ಹತ್ತಿದ ಮಧ್ಯಮವರ್ಗದ ಚಿಂತನೆಗಳನ್ನು ಕುರಿತಂತೆ ಇಲ್ಲಿನ ವಿಚಾರಗಳು ರೂಪಿತವಾಗಿವೆ. ಶ್ರೀಮಂತ ಸಂಬಂಧಿಕರು ಬಡವರನ್ನು ಅವರು ತಮ್ಮವರೇ ಆದರು ನಿರ್ಲಕ್ಷ್ಯಿಸುವುದು; ಹಣದ ಮದದಿಂದ ನಿಧಾನವಾಗಿ ವಾಸ್ತವವನ್ನು ಕಾಣತೊಡಗುವುದು ಇವೇ ಮುಂತಾದ ಸಂಗತಿಗಳಿಗೆ ತಕ್ಕ ಘಟನೆಗಳನ್ನು ಹೆಣೆಯಲಾಗಿದೆ. ಇಲ್ಲಿನ ಪಾತ್ರಗಳು ಮಾತ್ರ ಗಟ್ಟಿಯವರ ಮನಸ್ಸಿನ ರಚನೆಗಳು ಮಾತ್ರ. ಹೀಗೆ ಯಾರೂ ವರ್ತಿಸುವುದಿಲ್ಲವೆ ಎಂಬ ಪ್ರಶ್ನೆಯನ್ನು ಯಾರೂ ಕೇಳಬೇಕಾಗಿಲ್ಲ. ಎಲ್ಲರ ವರ್ತನೆಯೂ ಕಾದಂಬರಿಗೆ ವಸ್ತುವಾಗುವುದಾದರೆ ಮಿತಿಇಲ್ಲದೆ ಕೃತಿಗಳು ರಚನೆಯಾಗುವುದು ಸಾಧ್ಯ. ಆದರೆ ಹಾಗಾಗದು. ರಮೇಶಾಳ್ವನ ಕುಟುಂಬದ ಪತನ ಕೇವಲ ನೀತಿಯ ಹಂತದಲ್ಲಿ ಮಾತ್ರ ನಿಜ. ಏಕೆಂದರೆ ಲೇಖಕರ ಪ್ರಕಾರ ಅವರು ಅವಾಸ್ತವಾದ ಆಸೆಗಳ ಬೆನ್ನು ಹತ್ತಿದವರು. ಆದರೆ ಬಡವರಾದವರು ಬದುಕಿನಲ್ಲಿ ಒಂದಲ್ಲ ಒಂದು ದಿನ ಗೆದ್ದೇ ಗೆಲ್ಲುವರು ಎಂಬ ಹುಂಬ ನಂಬುಗೆಯೂ ಬಿಡದೇ ವ್ಯಕ್ತವಾಗಿದೆ.

ಇದೂ ಕೂಡ ಒಂದು ಬಗೆಯಲ್ಲಿ ಜನಪ್ರಿಯ ನಂಬುಗೆಗಳ ನೆಲೆಯ ಕಾದಂಬರಿ. ಓದುಗರ ಅವ್ಯಕ್ತ ಆಶೋತ್ತರಗಳನ್ನು ಪೂರೈಸುವುದು. ಓದಿಸಿಕೊಳ್ಳುವ ಗುಣಕ್ಕೆ ಬಂದರೆ ಅದು ಈ ಕಾದಂಬರಿಯಲ್ಲಿ 'ಅಬ್ರಾಹ್ಮಣ'ದಲ್ಲಿ ಇರುವಷ್ಟು ಇಲ್ಲ.

ನೂರು ತಲೆ ಹತ್ತು ಕಾಲು : ರಂ. ಶಾ.

ತನ್ನಪಾಡಿಗೆ ತಾನು ಜೀವಿಸುತ್ತಿದ್ದ ಹಳ್ಳಿಗಳು ಹೊಸ ಬಗೆಯ ಜೀವನ ಕ್ರಮದ ಪ್ರವೇಶದಿಂದಾಗಿ ಎದುರಿಸುತ್ತಿರುವ ಸಮಸ್ಯೆಗಳು ಕನ್ನಡದಲ್ಲಿ ಬಹುಪಾಲು ಕಾದಂಬರಿಕಾರರಿಗೆ ವಸ್ತುವನ್ನು ಒದಗಿಸಿವೆ. ಇದೂ ಅಂಥದೇ ಒಂದು ವಸ್ತುವನ್ನು ಹೊಂದಿದೆ. ಸಮೃದ್ಧವಾಗಿದ್ದ ದಿನಗಳನ್ನು ಕಂಡ ಕಂಟಿಹಳ್ಳಿ ಬರಗಾಲವನ್ನು ಎದುರಿಸಲೆಂದು ತನ್ನ ವಾತಾವರಣದ ಆಚೆಗೆ ಇರುವ ಅಧಿಕಾರದ ಕೇಂದ್ರವನ್ನು ಆಶ್ರಯಿಸುತ್ತದೆ. ಇದರಿಂದಾಗಿ ಹಳ್ಳಿಯ ಬದುಕು ನಿಧಾನವಾಗಿ ಒಡೆಯುತ್ತಾ ಹೋಗಿ ಅದರ ಆಧಾರ ಬಿಂದುಗಳು ನಿಷ್ಕ್ರಿಯವಾಗುವುದನ್ನು ಇಲ್ಲಿ ಕಾದಂಬರಿಕಾರರು ಚಿತ್ರಿಸುತ್ತಾರೆ. ಆದರೆ ಅವರು ಇಲ್ಲಿ ಯಾವ ನೈತಿಕ ನಿಲುವುಗಳನ್ನೂ ತಳೆಯಹೋಗಿಲ್ಲ. ಅಂದರೆ

ಬದಲಾಗುತ್ತಿರುವ ದಿನಗಳ ಬಗ್ಗೆಯಾಗಲೀ, ಕಳೆದು ಹೋದ ದಿನಗಳ ಬಗ್ಗೆಯಾಗಲೀ ಪಕ್ಷಪಾತವನ್ನು ವಹಿಸುವ ಆಸಕ್ತಿ ಕಾದಂಬರಿಗೆ ಇಲ್ಲ. ಇದರಿಂದ ಅಪಾಯಗಳಿಂದ ಪಾರಾಗುವುದು ಕಾದಂಬರಿಕಾರರಿಗೆ ಸಾಧ್ಯವಾಗಿದೆ. ಧೂಮಕೇತುವನ್ನು ನೋಡುತ್ತಾ ಅದರ ಸ್ವರೂಪ, ಪರಿಣಾಮಗಳನ್ನು ತಮಗೆ ತೋಚಿದಂತೆ ವ್ಯಾಖ್ಯಾನ ಮಾಡುವ ಹಳ್ಳಿಗರು ಬರಲಿರುವದಿನಗಳಲ್ಲಿ ತಮ್ಮ ಬದುಕಿನ ಸೂತ್ರಗಳನ್ನು ಹಿಡಿಯಲಿರುವ ಮುಂಬೈ ಕೇಂದ್ರಿಕೃತ ಅಧಿಕಾರಅಮೂರ್ತ ಆಕಾರಗಳ ಬಗ್ಗೆಯೇ ಸೂಚನೆ ನೀಡುತ್ತಿರಬಹುದು; ತಕ್ಕಂತೆ ಕಾಲಜ್ಞಾನದ ಮಾತೂಬರುವುದು. ಆದರೆ ಕಾದಂಬರಿಯ ಕೊನೆಗೆ ದುಡಿಯುವ ಜನರು ಕಾಮಗಾರಿಯ ಪರವಾಗಿ ನಿಲ್ಲುವುದು ಗಮನಾರ್ಹ. ಏಕೆಂದರೆ ಇದನ್ನು ಹೇಳುವ ಮೂಲಕ ಕಾದಂಬರಿಯು ಸ್ಪಷ್ಟಪಡಿಸುತ್ತಿರುವುದೆನೆಂಬುದು ತಿಳಿಯುವುದು. ಬದಲಾದ ಜೀವನ ಕ್ರಮದಲ್ಲಿ ಜನ ಬೆಲೆಕೊಡುತ್ತಿರುವುದು ದುಡಿಮೆಗೆ ಪ್ರತಿಫಲ ನೀಡುವ ವ್ಯವಸ್ಥೆಗೆ, ಇದು ದುಡಿಯುವವರ ಮಾತಿಗಷ್ಟೇ ಅಲ್ಲ ; ದುಡಿಸಿಕೊಳ್ಳುವವರ ಮಾತಿಗೂ ನಿಜ. ಅವರೂ ಹೆಚ್ಚು ಉತ್ಪಾದನೆ ತರಬಲ್ಲ ಟ್ರಾಕ್ಟರುಗಳನ್ನು ಕೊಳವೆ ಬಾವಿಗಳನ್ನು ಆಶ್ರಯಿಸುತ್ತಾರೆ. ಹಳ್ಳಿಯ ಆರ್ಥಿಕ ವ್ಯವಸ್ಥೆಯಲ್ಲೇ ಇದರಿಂದ ಮೂಲಭೂತವಾದ ಬದಲಾವಣೆಯಾಗಿರುವುದು ಗೋಚರಿಸುವುದು. ಇದನ್ನು ಸೂಚಿಸುವಂತೆ ಮೊದಲು ಜನರ ಬದುಕಿನ ಭಾಗವಾಗಿದ್ದ ಹಸುಗಳು ಹುಲ್ಲಿಲ್ಲದೆ ಕಟುಕರ ಪಾಲಾಗುವುದನ್ನು ಭಾವುಕವಾದ ಸಂಬಂಧಗಳೂ ಸುಳ್ಳಾಗುವುದನ್ನೂ ಚಿತ್ರಿಸಲಾಗಿದೆ. ಸಂಬಂಧಗಳು ಶಂಕಿತವಾಗುತ್ತವೆ. ನಿಷ್ಠೆಗಳು ಪ್ರಶ್ನಿತವಾಗುತ್ತವೆ. ಶೀಲದ ಮೇಲೆ ಆಕ್ರಮಣವಾಗುತ್ತದೆ. ಕೊಲೆ ನಡೆದು ಯಾರಿಗೂ ತಿಳಿಯದಂತೆ ಮುಚ್ಚಿಹೋಗುತ್ತದೆ. ಮಳ್ಳನಂತಿದ್ದ ಹಳ್ಳಿಯ ಗೌಡ ಚಾಣಾಕ್ಷ ರಾಜಕಾರಣಿಯಾಗುವನು.

ವಾಸ್ತವವಾದಿ ನಿರೂಪಣಾ ಕ್ರಮದಲ್ಲಿ ರಚಿತವಾಗಿರುವ ಈ ಕೃತಿಯ ವಸ್ತು ಜಗತ್ತನ್ನು ಅಧಿಕೃತವೆನಿಸಲು ತಕ್ಕ ಸಾಮಗ್ರಿಯನ್ನು ಲೇಖಕರು ಒದಗಿಸಿದ್ದಾರೆ. ಪಾತ್ರಗಳು ಖಚಿತ ಆಕಾರಗಳನ್ನು ತಳೆದು ನಮ್ಮ ಮುಂದೆ ನಿಲ್ಲುತ್ತವೆ. ಅನುಭವವನ್ನು ಗ್ರಹಿಸುವ ಹಂತದಲ್ಲಿ ಈ ಕಾದಂಬರಿಯು ಸರಳ ಮಾರ್ಗವನ್ನು ಹಿಡಿದರೂ ಅವುಗಳ ಜೋಡಣೆಯಲ್ಲಿ ಅರ್ಥ ಪರಂಪರೆಯೊಂದನ್ನು ಹುಡುಕುವ ಬಗೆಯನ್ನು ಅವಲಂಬಿಸಿದೆ. ಈ ಧ್ವನಿತ ಅರ್ಥವೇ ಕಾದಂಬರಿಯ ತಾತ್ತ್ವಿಕ ನೆಲೆಗಳನ್ನು ಹೊರ ಹಾಕುತ್ತಿರುವುದು. ಒಂದು ಅಂಥ ಉದಾಹರಣೆಯನ್ನು ಗಮನಿಸಬಹುದು. ಊರಿನ ಅವ್ಯವಸ್ಥೆಯನ್ನು ಸರಿಪಡಿಸಲು ಬರುವ ಕಾಮಗಾರಿ ಹೊಸಬಗೆಯ ಅವ್ಯವಸ್ಥೆಯೊಂದನ್ನು ರೂಪಿಸುತ್ತಾ ಹೋಗುವುದು, ಊರಕೆಲಸವನ್ನು ಮಾಡಲು ಹಿಂಜರಿದ ಜನರು ಕೊನೆಗೆ ಅದಕ್ಕೆ ಬೆಂಬಲವನ್ನು ನೀಡುತ್ತಾರೆ. ಎಂದರೆ ನಿರೂಪಣೆಯ ಮೂಲಕ ಹೊರಡುವ ಹೊಸ ಅರ್ಥ ಪರಂಪರೆಯೊಂದು ಒಟ್ಟಾರೆ ಕಾದಂಬರಿಗೆ ಬಂಧವನ್ನು ನೀಡಿದೆ.

ಕರ್ನಾಟಕದ ವಾಯುವ್ಯ ಭಾಗದ ದೇಸಿಯಲ್ಲಿನ ಸಾಮರ್ಥ್ಯವನ್ನು ಕಾದಂಬರಿ ಕಾರರು ಸಮರ್ಥವಾಗಿ ಕಾದಂಬರಿಯಲ್ಲಿ ಬಳಸಿಕೊಂಡಿದ್ದಾರೆ. ಈ ವರ್ಷ ಪ್ರಕಟ ವಾದ ಉತ್ತಮ ಕಾದಂಬರಿಗಳಲ್ಲಿ ಇದೂ ಒಂದು ಎಂಬುದಂತೂ ನಿಸ್ಸಂಶಯ.

ದೌರ್ಬಲ್ಯ : ಅರ್ಜುನಪುರಿ ಅಪ್ಪಾಜಿಗೌಡ

ಲೇಖಕರ 'ಚೊಚ್ಚಲು' ಕಾದಂಬರಿ. ಹಾಗಾಗಿ ಕೆಲವು ವಿನಾಯಿತಿಗಳನ್ನು ಬಯಸುವುದು ಸಹಜ. ಸುಮಾರು ಅರವತ್ತು ವರ್ಷಗಳ ಕಥೆಯನ್ನು ಇಲ್ಲಿ (ಸುಮಾರು 200 ಪುಟಗಳು) ಚಿತ್ರಿಸಲು ಹೊರಟಿದ್ದಾರೆ. ಈ ಕಾಲದ ಹರವನ್ನು ನಿರ್ವಹಿಸುವ ಸಾಮರ್ಥ್ಯ ಲೇಖಕರ ಪ್ರತಿಭೆಗೆ ದಕ್ಕಿಲ್ಲವೆಂಬುದು ಓದಿದ ಯಾರಿ ಗಾದರೂ ಸ್ಪಷ್ಟವಾಗುತ್ತದೆ. ತುಂಡುತುಂಡಾಗಿ ಹರಿಯುವ ಇಲ್ಲಿನ ಕಥನ ಕ್ರಮದ ವೇಗದಲ್ಲಿ ಅಸಹನೀಯ ಏರುಪೇರುಗಳಿವೆ.

ಹೆಣ್ಣಿನ ಆಕರ್ಷಣೆಯಿಂದಾಗಿ, ವೈಯುಕ್ತಿಕ ಸಾಮರ್ಥ್ಯದಿಂದ ಯಶಸ್ವಿಯಾಗಿದ್ದ ವ್ಯಕ್ತಿಯೊಬ್ಬ ಅನುಭವಿಸಿದ ಬೀಳು ಇಲ್ಲಿನ ಮುಖ್ಯ ವಸ್ತು. ಘಟನೆಗಳನ್ನು ಲೇಖಕರು ಬದುಕಿನಿಂದಲೇ ಆಯ್ದುದ್ದು ಸ್ಪಷ್ಟವಾಗಿ ಗೋಚರಿಸುತ್ತದೆ. ಆದರೆ ಘಟನೆಗಳ ಹೆಣಿತದಲ್ಲಿ ಕಾದಂಬರಿಕಾರನಿಗೆ ಇರಬೇಕಾದ ನಿರ್ಮಾಣ ಶಕ್ತಿಮಾತ್ರ ಇವರಲ್ಲಿ ಇಲ್ಲವಾಗಿದೆ. ಘಟನೆಗಳು ವರದಿಯಾಗಿವೆ.

ಆಡುಮಾತಿನ-ಕರ್ನಾಟಕದ ಬಯಲು ಸೀಮೆಯ ಉಪಭಾಷೆ-ಲಯ, ಧಾಟಿ, ನುಡಿಕಟ್ಟುಗಳನ್ನು ಲೇಖಕರು ಮುಖ್ಯ ಆಸ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಅಲ್ಲಿ ಅವರಿಗೆ ತಕ್ಕ ಸಾಧನೆಯೂ ಇದೆ. ಆದರೆ ನಿರೂಪಣೆಯ 'ವರದಿತನ'ದಿಂದಾಗಿ ಇದೂ ಕೂಡ ನಿರರ್ಥಕವಾಗಿದೆ.

ಇಷ್ಟೂ ಅಲ್ಲದೆ ಕಾದಂಬರಿ ಎತ್ತಿಕೊಂಡ ಸಮಸ್ಯೆಯಲ್ಲಿ ಒಂದು ಬಗೆಯ ಕಾಕತಾಳೀಯ ಕಾವ್ಯನ್ಯಾಯವನ್ನೂ ಕಾಣ ಹೊರಡುತ್ತಾರೆ. ಶಿವಪ್ಪನ ಅತ್ಯಾಚಾರ ಗಳ ಪಾಪದ ಫಲವನ್ನು ಅವನ ಹೆಂಡತಿ, ಮಗಳು ಉಣಬೇಕಾಗಿ ಬಂತೆಂಬುದು ಕಾದಂಬರಿ ತರ್ಕ. ಇದು ಬದುಕನ್ನು ಸರಳಗೊಳಿಸಿದ ಕ್ರಮದಂತೆ -ಕಾಣುವುದು. ಇದೇ ಬಗೆಯಲ್ಲಿ ರಾಜು-ಸುಶೀಲರ ಸಂಬಂಧವನ್ನು ಕೇವಲ ಮಾತಿನಮೇಲೆ ಕಟ್ಟ ಲಾಗಿದೆ.

ಈ ಕಾದಂಬರಿಯು ಹೀಗಾಗಿ ಲೇಖಕರ ಬಗ್ಗೆ ಅಷ್ಟೇನೂ ಭರವಸೆ ಮೂಡಿಸು ವುದಿಲ್ಲ. ಆಸಕ್ತಿ ಏನಿದ್ದರೂ, ಉಪಭಾಷೆಯ ಮೇಲೆ ಕಾದಂಬರಿಕಾರರಿಗೆ ಇರುವ ಹಿಡಿತದಲ್ಲಿದೆ.

ಜವನೂರಿನ ವೃತ್ತಾಂತ : ಎಂ. ಶಿವನಂಜಯ್ಯ

ಈ ಕಾದಂಬರಿಯ ನಾಯಕ ಓದಿ, ನಿರುದ್ಯೋಗಿಯಾಗಿ ಹಳ್ಳಿಯಲ್ಲಿ ಜೀವಿಸಲು ಬಂದವನು. ನಾಗರಿಕ ಬದುಕು ಯಾವುದೇ ಕೇಂದ್ರವಿಲ್ಲದೆ ಭಗ್ನಗೊಳ್ಳುತ್ತಿರುವುದನ್ನೂ, ತಾನು ಜೀವಿಸಲು ಬಂದ ಹಳ್ಳಿಯ ಬದುಕು ಕೂಡ ಬದಲಾವಣೆಗೆ ಕಡುವಿರೋಧಿಯಾಗಿದ್ದನ್ನು ಕಂಡು ರೋಸಿಹೋಗುತ್ತಾನೆ. ಪ್ರಜ್ಞೆಯ ಅಂತರವನ್ನು ಸೃಷ್ಟಿಸಿ ನಾಯಕನಲ್ಲಿ ದುರಂತದ ಲಕ್ಷಣಗಳನ್ನು ಕಾಣುವುದು ಈ ಬಗೆಯ ಕಾದಂಬರಿಗಳ ಸಾಮಾನ್ಯ ಲಕ್ಷಣ. ಇಲ್ಲಿಯೂ ಹಾಗೇ ಆಗಿದೆ. ಎಲ್ಲಿಯೂ ನಾಯಕನ ದೃಷ್ಟಿಕೋನಕ್ಕೆ ಪರ್ಯಾಯವಾದ, ಸಾಧುತ್ವವನ್ನು ಹೊಂದಿದ ಚಿಂತನೆಗಳನ್ನು ಕೃತಿ ಕಾಣಲು ಯತ್ನಿಸುವುದಿಲ್ಲ. ಹಾಗಾಗಿ ಕಾದಂಬರಿಯು ರೂಪಿಸಿದ ನಾಯಕ 'ಸೋತ'ವನಂತೆ ಕಂಡರೂ ಕಾರಣಗಳು ಅವನೊಳಗೇ ಇವೆ ; ಅವನ ವಿಶ್ಲೇಷಣಾ ಕ್ರಮದಲ್ಲಿ ಇವೆ.

ರಂಗೇಗೌಡನನ್ನು ಕಾದಂಬರಿಕಾರರು ಸದ್ಗುಣಗಳ ಸಾಕಾರಮೂರ್ತಿ ಎಂದೇನೂ ಕಂಡಿಲ್ಲ. ದೌರ್ಬಲ್ಯಗಳು ಸಣ್ಣತನಗಳು ಇರುವ ವ್ಯಕ್ತಿ. ಹಾಗಾಗಿ ಅವನಲ್ಲಿ ಹಳ್ಳಿಯ ಬದುಕಿನಲ್ಲಿ ಬೇರುಬಿಡುವ ಯತ್ನ ಕೇವಲ ಜೀವನೋಪಾಯವಾಗಿದೆಯೇ ಹೊರತು, ಮರಳಿ ಜೀವನ ಕೇಂದ್ರಕ್ಕೆ ಹಿಂತಿರುಗುವ ಮೂಲಮಾದರಿಯ ತುಡಿತವಾಗಿ ಕಂಡುಬರುವುದಿಲ್ಲ. ಆದ್ದರಿಂದ ಕಾದಂಬರಿಯ ನಾಯಕನ ಸೋಲು, ಇನ್ನೊಂದು ಕಾರಣದಿಂದಾಗಿ, ಅವನ ಸ್ವಂತದ್ದೇ ಹೊರತು ಪರಿಸರದ ವೈರುದ್ಧ್ಯಗಳಿಂದ ಉಂಟಾದದ್ದಲ್ಲ.

ನಿರೂಪಣೆಯ ಕ್ರಮದಲ್ಲಿ ಲೇಖಕರು 'ಹೊರನಿಂತು' ನೋಡುವ ಕ್ರಮವನ್ನು ಅನುಸರಿಸಿದ್ದರೂ, ಎಷ್ಟೋ ಕಡೆ ರಂಗೇಗೌಡನ ಅಂತರ್ಮುಖತೆಯೊಡನೆ ತಾದಾತ್ಮ್ಯವನ್ನು ಪಡೆಯುವುದುಂಟು. ಅವನ ಓದುವ ದಿನಗಳ ಜೀವನದ ವಿವರಗಳು ಕೇವಲ ಹಸಿಯಾಗಿವೆಯೇ ಹೊರತು ಬಂಧಕ್ಕೆ ಒಳಪಡುವಂತೆ ಮಾರ್ಪುಗೊಂಡಿಲ್ಲ. ಅತಿ ವಾಸ್ತವತೆಯಿಂದ ಏನನ್ನು ಸಾಧಿಸಲಾಗದಷ್ಟೆ.

ಹೆಜ್ಜೆಮೂಡಿದ ಹಾದಿ : ಸುರೇಶ ಪಾಟೀಲ

ಈ ಕಾದಂಬರಿಯಲ್ಲೂ ಹಳ್ಳಿ ಹಾಗೂ ಓದಿದ ತರುಣ ನಾಯಕನ ಮುಖಾಮುಖಿಯಿದೆ. ಗಾಂಧಿಯ ಆದರ್ಶಗಳ ಬೆನ್ನು ಹತ್ತಿದ ನಾಯಕ ಶೇಖರ ಊಳಿಗಮಾನ್ಯ ಪದ್ಧತಿಯ ಪ್ರತಿನಿಧಿಗಳ ಸಂಚುಗಳನ್ನು ಎದುರಿಸಬೇಕಾಗುವುದು. ಇಲ್ಲಿ ಆತ ಅನುಸರಿಸುವ ಮಾರ್ಗ ಅವನಿಗೆ ಅಣಕು ನಾಯಕನ ಪಟ್ಟವನ್ನು ಒದಗಿಸುವುದು. ತನ್ನ ವಿರೋಧಿಗಳನ್ನು ಹಾದಿಗೆ ತರುವ ಬಗೆಯಲ್ಲಿ ನಾಯಕ ತನ್ನ ಮೇಲೆ 'ಗಾಂಧಿ ಮುತ್ಯಾ' ಆವಾಹನೆಯಾಗುವನೆಂದು ನಟಿಸತೊಡಗುತ್ತಾನೆ. ತಮ್ಮ ಹೊರಗಿನ ಅಮೂರ್ತ ಶಕ್ತಿಯ ಪ್ರತಿನಿಧಿಯಾಗಿ ಕಾಣುವ ಶೇಖರನನ್ನೂ ಜನರು, ಎಲ್ಲರೂ

ಸೇರಿ ಗೌರವಿಸುತ್ತಾರೆ. ಇದು ವಸ್ತು ಸ್ಥಿತಿಯ ವ್ಯಂಗ್ಯ-ಕಟಕಿ ಎಂಬಂತೆ ತೋರುವುದು. ಕೇಂದ್ರೀಕೃತ ಅಮೂರ್ತ ಶಕ್ತಿಗೆ ಎಲ್ಲ ಅಧೀನರಾಗುವ ಜನರ ಬಯಕೆಯನ್ನು ಬಿಂಬಿಸಲೆಂದು ಬಂದ ತಂತ್ರ ಆದರೆ, ಗಾಂಧಿಯ ಅವಾಹನೆ ದೇವಾಲಯ ನಿರ್ಮಾಣ, ಇವೇ ಮುಂತಾದವು. 'ಮುನ್ನುಡಿಯ' ಮಾತುಗಳಲ್ಲಿ ಗೋ.ಕೃ. ಅಡಿಗರು ಸೂಚಿಸಿದಂತೆ, ಈ ತಂತ್ರದಿಂದಾಗಿ ನಾಯಕನ ಪಾತ್ರಕ್ಕೆ ತೀವ್ರವಾದ ಹಿಂಜರಿತ ಉಂಟಾಗಿದೆ. ಇದು ಲೇಖಕರ ಮೊದಲ ಕೃತಿ. ಆದರೆ ಹಾಗೆನಿಸದಷ್ಟು ಸೊಗಸಾದ ನಿರೂಪಣಾ ಕ್ರಮವಿದೆ. ಅವರ ಆಯ್ದುಕೊಂಡ ಕಥನ ಕ್ರಮ, ಕತಾಸರಣಿಯ ಅವಶ್ಯಅಂಶಗಳನ್ನು ವಿವರವಾಗಿಸುವುದು. ಅದನ್ನವರು ಪಳಗಿದವರಂತೆ ನಿರ್ವಹಿಸಿದ್ದಾರೆ. ಪಾತ್ರಗಳ ಬಗ್ಗೆ ನೀಡುವ ವಿವರಗಳು ಖಚಿತವಿದ್ದು ಉದ್ದೇಶಿತ ಆಕಾರವನ್ನು ನಮ್ಮ ಎದುರು ತಂದಿಡುತ್ತವೆ.

ಇಡೀ ಕಥನವನ್ನು ಲೇಖಕರು 'ತಾವು ಕಂಡಂತೆ' ನಿರೂಪಿಸುತ್ತಾರೆ. ಹೀಗೆ ಹೊರಗೆ ನಿಲ್ಲುವ ಕಥನಕ್ರಮ ವಿವರ ಬಾಹುಳ್ಯಕ್ಕೆ ಎಡೆಮಾಡಿಕೊಡಲೂಬಹುದು. ಆದರೆ ಅದಕ್ಕೆ ಮಿತಿಗಳಿವೆ. ಈ ಕಾದಂಬರಿಯಲ್ಲೇ ನೋಡಿದರೆ ಹಾಲಳ್ಳಿಯ ಈ ಜನರು ಕಾದಂಬರಿಯೊಳಗೆ ಕಟ್ಟಿಕೊಳ್ಳುವ ಲೋಕ ನಮ್ಮಲ್ಲಿ ದೂರನಿಂತು ಚಿಂತಿಸುವ ಬಗೆಯನ್ನು ಉದ್ದೀಪನಗೊಳಿಸುತ್ತವೆ ; ಆದರೆ ಅಲ್ಲಿನ ಯಾವ ಕೇಂದ್ರಪ್ರಜ್ಞೆಯೂ ನಮಗೆ ಮುಖಾಮುಖಿಯಾಗಿ ಸವಾಲಾಗುವುದಿಲ್ಲ. ಇದನ್ನು ಕಾದಂಬರಿ ರೂಪವನ್ನು, ಈ ಲೇಖಕರು ಮತ್ತಷ್ಟು ಗಾಢವಾಗಿ-ಅರಿತಾಗ ಮಾತ್ರ ಸಾಧಿಸಲು ಸಾಧ್ಯ.

### ಸೀಳುನೆಲ : ಬರಗೂರು ರಾಮಚಂದ್ರಪ್ಪ

ಸಾಮಾಜಿಕ ಬದಲಾವಣೆಯ ಕಾರ್ಯಕ್ರಮದ ನೀಲನಕಾಶೆಯನ್ನು ಆಧರಿಸಿ ಜೀವನವನ್ನು ನೋಡುವ ಪರಿಕ್ರಮವೊಂದನ್ನು 'ಸೀಳುನೆಲ' ಕಾದಂಬರಿಯಲ್ಲಿ ಕಾಣಬಹುದಾಗಿದೆ. ಹೊಸ ಬದುಕಿನ ನಿರ್ಮಾಣಕ್ಕೆ ಟೊಂಕಕಟ್ಟುವವರು ಯಾವ ವರ್ಗದಲ್ಲಿದ್ದರೂ ಅದರ ಮುಂಚೂಣಿಯಲ್ಲಿ ಮಾತ್ರ ದಲಿತರೇ ಇರಬೇಕೆಂಬ 'ಕ್ರಾಂತಿಪಾಠ'ವನ್ನು ಕಂಡುಕೊಂಡ ಇಲ್ಲಿನ ನಾಯಕ ರಾಜೂ ಅದರ ಒಂದು ಪ್ರಯೋಗವನ್ನು ಕಾಣುತ್ತಾನೆ. ಸದ್ಯದ ಪರಿಸರದಲ್ಲಿ ಕಾದಂಬರಿಯ ಕೊನೆಯ ಘಟನೆ ಒಂದು ಬಂಡಾಯವೆಂಬಂತೆ ತೋರುತ್ತದೆ. ಅದಕ್ಕೆ ಆಳಕ್ಕೆ ಬೇರುಬಿಡುವ ಕ್ರಾಂತಿಯ ಸಾಧ್ಯತೆಗಳಿಲ್ಲ. ಆದರೆ ಲೇಖಕರು, ಕಾದಂಬರಿಯೊಂದು ತನ್ನ ಕಾಲದ ಆಚೆಗೂ ಕಣ್ಣಾಡಿಸಬೇಕೆಂಬ ಪಂಥದಿಂದ ಇದನ್ನು ರಚಿಸಿರುವ ಸಾಧನೆಗಳೂ ಇಲ್ಲದಿಲ್ಲ.

ರಚನೆಯ ದೃಷ್ಟಿಯಿಂದ ಕಾದಂಬರಿಯಲ್ಲೇ ಒಂದು ಸೀಳಿದೆ. ಭರತ-ರಾಜು, ಸುಜಾತ ಈ ಮೂವರ ತ್ರಿಕೋನ ರಚನೆ ಮತ್ತು ಭಗ್ನಗೊಳ್ಳುವ ಮೊದಲ ಭಾಗಕ್ಕೂ, ರಾಜುವಿನ ಕೊಳಗೇರಿಯ ವಾಸದ ಭಾಗಕ್ಕೂ ಬಂಧದ ದೃಷ್ಟಿಯಿಂದ ವ್ಯತ್ಯಾಸವಿರುವುದು ಓದುವಾಗಲೇ ಗೋಚರಿಸುತ್ತದೆ. ಮೊದಲ ಭಾಗ ಕಾಲ್ಪನಿಕ ಹಾಗೂ

ಸಂಕೇತಗಳ ವಿವರಗಳನ್ನೇ ಆಧರಿಸಿ ನಡೆವರೆ ಕೊನೆಯ ಭಾಗವಲ್ಲಿ ವಾಸ್ತವ ವಿವರಗಳನ್ನೇ ಆಧರಿಸುವ ಬಗೆ ಇದೆ. ರಾಜೂ ಕೊಳಗೇರಿಯ ಜನರೊಡನೆ ಒಂದಾಗಲು ಯತ್ನಿಸುವುದರಲ್ಲೂ, ಆತ ತನ್ನ ಹೊರಗಿನ ಚಿಂತನೆಗಳಿಂದಲೇ ಬದ್ಧನಾದಂತೆ ಕಂಡರೂ, ವಿವರಗಳಲ್ಲಿ ಅದನ್ನು ಅವನು ಹೊಂದಿಕೊಳ್ಳುವುದನ್ನು ನಿಜವೆಂಬಂತೆ ಚಿತ್ರಿಸಲು ಬಗೆದಿದ್ದಾರೆ. ಆದರೆ ಮೊದಲ ಭಾಗದ ವಿವರಗಳು ಕೇವಲ ತಾರ್ಕಿಕವಾದ ಸಂಗತಿಗಳಲ್ಲಿ ಮಾತ್ರ ಬೆಳೆಯುತ್ತವೆ.

ಈ ಬಗೆಯ ಕಾದಂಬರಿಗಳಲ್ಲಿ ಪಾತ್ರಗಳ ಅಂತರ್ಮುಖತೆಯೂ ಕೂಡ ನಿಯಂತ್ರಿತವಾಗಿ ಬಿಡುತ್ತದೆ. 'ಭರತನ' ಅಂತರ್ಮುಖತೆ ಸೋಗಿನದಾಗಿದ್ದು, ಕಾದಂಬರಿಕಾರರು ಆ ಪಾತ್ರದ ಬಗ್ಗೆ ಹೊಂದಿರುವ ಅಸಹನೆಯನ್ನೆ ಸೂಚಿಸಿರುವುದು. ಈ ಮೊದಲೇ ಹೇಳಿದಂತೆ ರಾಜೂ ಕಾದಂಬರಿಯ ಉದ್ದಕ್ಕೂ ಪ್ರವೃತ್ತನಾಗುವುದು, ಕ್ರಿಯಾಶೀಲನಾಗುವುದು ಹೊರಗಿನ ವೈಚಾರಿಕ ಪ್ರೇರಣೆಗಳಿಂದ, ಅದಕ್ಕಾಗಿಯೇ ಅವನನ್ನು ಸಾಮಾಜಿಕವಾಗಿ ಒಂಟಿಯನ್ನಾಗಿ ಮಾಡಲಾಗಿದೆ. ಇನ್ನೊಂದು ಮಾತು ಜೀವನದ ಮೂಲಭೂತ ಬದಲಾವಣೆಗಾಗಿ ಆಶಿಸುವ ಈ ಕಾದಂಬರಿಯಲ್ಲಿ ಅರ್ಥಪೂರ್ಣವಾದ ಯಾವ ಹೆಣ್ಣುಪಾತ್ರವೂ ಇಲ್ಲದಿರುವುದು ಸೋಜಿಗದ ವಿಷಯ. 'ಸುಜಾತ' ನಿಜವಾಗುವುದು ಚಿಂತನೆಗಳಲ್ಲಿ ಮಾತ್ರ. ಆಕೆಯನ್ನು ಮುಖ್ಯ ಪ್ರವಾಹದಿಂದ ಕಾದಂಬರಿಯಲ್ಲಿ ದೂರವಿಡಲಾಗಿದೆ ; ಅವಕಾಶಗಳನ್ನು ಮಿತಗೊಳಿಸಲಾಗಿದೆ.

'ಸೀಳುನೆಲ'ದಂಥ ಕಾದಂಬರಿಯನ್ನು ಸಮರ್ಥಿಸಲು ಸಾಹಿತ್ಯೇತರವಾದ ಕಾರಣಗಳನ್ನು ಹುಡುಕುವುದು ಸುಲಭ. ಆದರೆ ಅದರಿಂದ ಕೃತಿಯನ್ನು ಕೇವಲ ಸಮಕಾಲೀನ ಅರ್ಥಗಳಲ್ಲಿ ಮಾತ್ರ ಬಂಧಿಸಲು ಯತ್ನಿಸಿದಂತಾಗುವುದು. ಸಾಹಿತ್ಯ ಕೃತಿಗೆ ಅದಕ್ಕೂ ಮಿಗಿಲಾಗಿ ಕರ್ತವ್ಯವಿಲ್ಲವೇ ?

—ಕೆ. ವಿ. ನಾರಾಯಣ

ನೆರಳಾಚೆಯ ಬೆಳಗು : ಎಚ್. ತಿಪ್ಪೇರುದ್ರಸ್ವಾಮಿ

ಎಚ್. ತಿಪ್ಪೇರುದ್ರಸ್ವಾಮಿಯವರ ನೆರಳಾಚೆಯ ಬೆಳಗು ಶಿವಶರಣರನ್ನು ಕುರಿತು ಬರೆದ ಕಾದಂಬರಿ ಮಾಲೆಯಲ್ಲಿ ಶಿವಯೋಗಿ ಸಿದ್ಧರಾಮನನ್ನು ಕುರಿತ ಕಾದಂಬರಿ. ಜಿ. ಎಸ್. ಶಿವರುದ್ರಪ್ಪನವರು 1956ರಲ್ಲೇ ಕರ್ಮಯೋಗಿ ಸಿದ್ಧರಾಮನ ಜೀವನ ಚಿತ್ರವನ್ನು ತಮ್ಮ 'ಕರ್ಮಯೋಗಿ' ಎಂಬ ವಿಶಿಷ್ಟ ಕೃತಿಯಲ್ಲಿ ಕೊಟ್ಟಿರುವರು. ಅವರು ಆ ಕೃತಿರಚನೆಗೆ ರಾಘವಾಂಕನ 'ಸಿದ್ಧರಾಮ ಚಾರಿತ್ರ'ದಿಂದ ಸ್ಫೂರ್ತಿಪಡೆದಿರುವರು. ಆದಾಗ್ಯೂ ಅವರು ತಮ್ಮ ಕೃತಿಯಲ್ಲಿ ಹಲವು ಹೊಸ ಸನ್ನಿವೇಶ ಸೃಷ್ಟಿಮಾಡಿ ಅದು ವಿಶಿಷ್ಟ ನೂತನ ಕೃತಿಯಾಗಿ ಕಾಣುವಂತೆ ರಚಿಸಿದವರು. ಸಿದ್ಧರಾಮನು ಮಾಡಿರಬಹುದಾದ ಪವಾಡಗಳೆಲ್ಲವನ್ನೂ ಹೇಳದೆ ಸಹಜವಾಗಿರಬಹುದಾದ ಒಂದೆರಡನ್ನು ಮಾತ್ರ ಆಯ್ದುಕೊಂಡು ಕೃತಿನಾಯಕನ ಬದುಕು ಪವಾಡಗಳಿಂದ ಮುಚ್ಚಿ ಹೋಗಬಹುದಾಗಿದ್ದ ಅಪಾಯವನ್ನು ತಪ್ಪಿಸಿರುವರು. ತಮ್ಮ ಕಲ್ಪನೆಗೆ ಮೀರಿದ, ಅನುಭವ ಮಂಟಪದಲ್ಲಿ ಸಿದ್ಧರಾಮ ಕೆಲಕಾಲವಿದ್ದ ವಿವರಗಳನ್ನು

ಚಿತ್ರಿಸಲು ಸಾಧ್ಯವಾಗದೆ ಲೇಖಕರು ಓದುಗರ ಊಹೆಗೇ ಬಿಟ್ಟಿರುವರು. ತಮ್ಮ ಇತಿಮಿತಿ ಅರಿತ ಲೇಖಕರ ಈ ಪ್ರಾಮಾಣಿಕತೆ ಮೆಚ್ಚಬೇಕಾದುದು. ಇಲ್ಲಿನ ಕಾವ್ಯಮಯವಾದ ಆಕರ್ಷಕ ಬರವಣಿಗೆ ಓದುಗರ ಮನಸ್ಸನ್ನು ಸೂರೆಗೊಳ್ಳುತ್ತದೆ.

'ನೆರಳಾಚೆಯ ಬೆಳಗು' ಕಾದಂಬರಿಯಲ್ಲಿ ಸಿದ್ಧರಾಮನ ಜೀವಿತ ವೃತ್ತಾಂತಗಳು ನೆನಪಿನ ನೆರಳು, ನೆಲದ ಮರೆಯು ವಿಧಾನ, ಶಿಲೆಯೊಳಗಣ ಪಾವಕ, ಸಿಡಿದ ಕಿಡಿ ಬೆಳೆವ ಕುಡಿ, ಬಯಲ ಮೂರ್ತಿಯಾಗಿ, ಶೂನ್ಯಸಿಂಹಾಸನ ಹಾಗೂ ನೆರಳಿನಾಚೆಯ ಬೆಳಕು—ಈ ಏಳು ಆಕರ್ಷಕ ಶೀರ್ಷಿಕೆಯುಳ್ಳ ಅಧ್ಯಾಯಗಳಲ್ಲಿ ಹರಡಿಹೋಗಿದೆ. ಕಾದಂಬರಿಯಲ್ಲಿ ಸಿದ್ಧರಾಮನ ಬದುಕಿನ ನೇರ ನಿರೂಪಣೆಯಿಲ್ಲ. ತಂತ್ರದೃಷ್ಟಿಯಿಂದ, ಕಾದಂಬರಿಯಲ್ಲಿನ ಕಥೆಯು ಹಂದರ ಮೇಲೆ ಹೇಳಲಾದ ಏಳು ಆಕರ್ಷಕ ಅಧ್ಯಾಯ ಗಳಲ್ಲಿ ವಿಂಗಡಣೆಗೊಂಡಿದೆ; ಕಥಾವಾಹಿನಿ ಹಲವು ಮಜಲುಗಳಲ್ಲಿ ನಿಂತು ಸಾಗುತ್ತದೆ. ಸಿದ್ಧರಾಮನ ಬದುಕಿನೊಡನೆ ಸಮರಸವಾಗಿ ಬೆರೆತವರ ಮುಖೇನ ಸಿದ್ಧರಾಮನ ಜೀವಿತ ವೃತ್ತಾಂತ ತನ್ನ ಸುಳಿ ಬಿಚ್ಚುತ್ತದೆ. ಸಿದ್ಧರಾಮನೇ ಒಂದು ಘಟ್ಟದಲ್ಲಿ ಮರುಕಳಿಸಿದ ತನ್ನ ಬದುಕಿನ ಸಿಹಿ-ಕಹಿಗಳನ್ನು ತಿಳಿಯಪಡಿಸುವನು. ಕಾದಂಬರಿ ಯಲ್ಲಿ ಸಿದ್ಧರಾಮನ ಬದುಕನ್ನು ಅದರ ವ್ಯಾಪಕ ಹರಹಿನಲ್ಲಿ ಚಿತ್ರಿಸು ವುದಷ್ಟೇ ಅಲ್ಲದೆ ಕಥಾನಾಯಕನಿಗೆ ಸಮಕಾಲೀನವಾದ ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಗತಿಗಳನ್ನು ದಾಖಲಿಸುವುದು ಕಾದಂಬರಿಕಾರರ ಉದ್ದೇಶ ವಾಗಿರುವಂತೆ ತೋರುತ್ತದೆ. ಇಲ್ಲಿ ಮೊದಲ ಉದ್ದೇಶದೊಂದಿಗೆ ಎರಡನೆಯದು ಪೂರಕವಾಗಿ ಬರುತ್ತದೆ. ಕಲ್ಯಾಣದ ಕಾರ್ಯವನ್ನು ಬಸವಣ್ಣನ ನಂತರ ಒಂದು ರೀತಿಯಲ್ಲಿ ಮುಂದುವರಿಸಿ ಅದನ್ನು ನಾಡಿನ ಉದ್ದಗಲಕ್ಕೂ ಹರಡಿದವನು ಸಿದ್ಧರಾಮ ಎಂಬಂತೆ ಕಾದಂಬರಿಯ ಕೊನೆಯ ಸುಮಾರು ನೂರು ಪುಟಗಳಲ್ಲಿ ಚಿತ್ರಿಸಲಾಗಿದೆ. ಆದರೂ ಕಾದಂಬರಿಯಲ್ಲಿ ಸಿದ್ಧರಾಮನ ಜೀವನದ ಮೊದಲ ಭಾಗವೇ ಪ್ರಧಾನ ವಾಗಿ ಬರುತ್ತದೆ. ಸಿದ್ಧರಾಮನ ಬಹುಮುಖ ವ್ಯಕ್ತಿತ್ವದ ವಿಕಸನ ಕಾದಂಬರಿಯಲ್ಲಿ ಚೆನ್ನಾಗಿ ಬಂದಿದೆ. ಸಿದ್ಧರಾಮನ ಬದುಕನ್ನು ನಿರೂಪಿಸುವ ಕೃತಿ ಕಣ್ಣಮುಂದಿರು ವುದರಿಂದ ಸಿದ್ಧವಾದ ಕಥಾ ಚೌಕಟ್ಟಿನಲ್ಲಿಯೇ ಕಾದಂಬರಿ ಚಿತ್ರಿತವಾಗಿದೆ. ಸಿದ್ಧ ರಾಮ ಹಾಗೂ ಅವನ ಸಮಕಾಲೀನ ಶರಣರ ಬಗೆಗೆ ಬೇರೆ ಕೃತಿಗಳೂ (ಬಸವ ಪುರಾಣ, ಪ್ರಭುಲಿಂಗಲೀಲೆ, ಶೂನ್ಯಸಂಪಾದನೆ, ರಾಘವಾಂಕ ಕಾವ್ಯ ಇತ್ಯಾದಿ...) ಸಾಮಗ್ರಿಗಳನ್ನು ಒದಗಿಸುವುದರಿಂದ ಕಾದಂಬರಿಯ ರಚನೆ ನಿರಾಯಾಸದಿಂದ ಆಗಿದೆ. ಸಿದ್ಧರಾಮಚಾರಿತ್ರ, ಪ್ರಭುಲಿಂಗಲೀಲೆ, ಶೂನ್ಯಸಂಪಾದನೆಗಳ ನೆರಳು ಕಾದಂಬರಿಯ ಉದ್ದಕ್ಕೂ ಕವಿದಿದೆ. ಇದರಿಂದಾಗಿ ಕಾದಂಬರಿಕಾರರ ಪ್ರತಿಭೆ ವ್ಯಕ್ತಗೊಳ್ಳಲು ತಕ್ಕ ಅವಕಾಶ ಒದಗಿಲ್ಲ. ಕಾದಂಬರಿಕಾರರು ಸಂದರ್ಭೋಚಿತವಾಗಿ ವಚನಗಳನ್ನು ಬಳಸಿಕೊಂಡು ಉಪಯುಕ್ತ ಸನ್ನಿವೇಶ ನಿರ್ಮಾಣ ಮಾಡುವ ತಮ್ಮ ಹಿಂದಣ ಕ್ರಮವನ್ನು ಇಲ್ಲಿ ಕೈಬಿಟ್ಟಿರುವರು. ಸಿದ್ಧರಾಮನ ವಚನಗಳನ್ನು ಅವನ ವ್ಯಕ್ತಿತ್ವದ ಶೋಧನೆಗೆ ಪರಿಣಾಮಕಾರಿ ಸಾಧನವಾಗಿ ಬಳಸಿಕೊಳ್ಳಬಹುದಿತ್ತು.

—ಎಸ್. ವಿದ್ಯಾಶಂಕರ್

ಪ್ರೇಮಜ್ವಾಲೆ : ತುಮಕೂರು ಮಹದೇವಯ್ಯ

ಚಲನಚಿತ್ರವಾಗಿರುವ ಕಾದಂಬರಿ ಎಂಬ ತಲೆಬರಹವನ್ನು ಹೊತ್ತುಕೊಂಡು ಪ್ರಕಟವಾಗಿರುವ ಕಾದಂಬರಿ. ಲೇಖಕರು ತುಮಕೂರ್ ಮಹದೇವಯ್ಯ. ನಿರೂಪಕರು ಮಹೇಂದ್ರ. ಸಲಹೆ ಚೌಡಯ್ಯ ಅವರದು. ಕಾದಂಬರಿ ಚಲನಚಿತ್ರಕ್ಕೆ ಬರೆದ ಚಿತ್ರಪಟದ ಕಥೆಯಂತಿದೆ (Screen Play). ಇಪ್ಪತ್ತರ ಹರೆಯದ ವಿಶ್ವ ಅನಿರೀಕ್ಷಿತವಾಗಿ ಮಠವೊಂದರ ಸ್ವಾಮಿಯಾಗಿ, ಕೊಳೆತು ನಾರುವ ವ್ಯವಸ್ಥೆಯ ವಿರುದ್ಧ ಸೆಣಸಲು ಹೋಗಿ ಸೋಲುವುದೇ ಇದರ ಕಥೆ. ಈ ಕಥೆಗೆ ನೇರವಾಗಿ ಸಂಬಂಧಿಸದ ಅನೇಕ ಘಟನೆಗಳು ಬರುತ್ತವೆ. ಹರಿಜನ ಕೇರಿಗೆ ಸ್ವಾಮಿಜಿಗಳ ಪ್ರವೇಶ, ಗೇಣಿದಾರರಿಗೇ ಸ್ವಾಮೀಜಿಗಳು ಭೂಮಿಯನ್ನು ಬಿಟ್ಟುಕೊಡುವುದು ಮೊದಲಾದುವುಗಳ ಜೊತೆಗೆ ಒಂದೆರಡು ಪ್ರೇಮ ಪ್ರಕರಣಗಳು ಅತ್ಯಾಚಾರದ ಪ್ರಸಂಗಗಳು ಇವೆ. ಪ್ರೇಮ ಅಥವಾ ಅತ್ಯಾಚಾರದ ನಿರೂಪಣೆ ಜಿಗುಪ್ಸೆಯನ್ನುಂಟು ಮಾಡುತ್ತೆ. ಆದರೆ ದೂರಿನ ಗಂಟೆ ಎಂಬ ಕೊನೆಯ ಪುಟದಲ್ಲಿ 'ನಮ್ಮ ಭಾಷೆಯ ಸಾಹಿತ್ಯದಲ್ಲಿ ಯಾವುದೇ ಪದ ಅಥವಾ ಪದಪುಂಜಕ್ಕೆ ಸೀಮಿತ, ಸಂಕುಚಿತ ಅರ್ಥ ಇರುವುದಿಲ್ಲ' ಎಂದು ನಿರೂಪಕರು ಹೇಳಿದ್ದಾರೆ. ಅಂದಮೇಲೆ ಈ ಕೃತಿಯನ್ನು ಕುರಿತ ವಿಮರ್ಶೆ ವ್ಯರ್ಥವಾಗುತ್ತದೆ.

ಪ್ರೇಮ ಮಲ್ಲಿಗೆ : ಎ. ವೆಂಕಟೇಶ್

ಇದು ಅವರ ಮೊದಲ ಕಾದಂಬರಿ. ಕೋಲಾರ ಜಿಲ್ಲೆಯ ಪೂರ್ವಭಾಗದ ಗ್ರಾಮೀಣ ಬದುಕು ಇಲ್ಲಿನ ಕಥಾವಸ್ತು. ಅದರಲ್ಲೂ ಅಲ್ಲಿನ ಮೂಲ ನಿವಾಸಿಗಳಾದ ಜಂಗಾಲರ ಬದುಕನ್ನು ಈ ಕಾದಂಬರಿ ಚಿತ್ರಿಸಹೊರಟಿದೆ. ಆದರೆ ಆ ಆಶಯ ಅಷ್ಟಾಗಿಯಶಸ್ಸು ಕಂಡಿಲ್ಲ. ಕಾರಣ ಜಂಗಾಲರ ಬದುಕಿಗಿಂತಲೂ ಮಿಗಿಲಾಗಿ ಅಲ್ಲಿನ ಒಕ್ಕಲಿಗ ಜನಾಂಗದ ಚಿತ್ರಣವೇ ಹೆಚ್ಚಾಗಿದೆ. ಹಾದರದ, ಅತ್ಯಾಚಾರದ ಪ್ರಸಂಗಗಳು ನಾಲ್ಕಾರಿವೆ. ಅದಕ್ಕೂ ಹೆಚ್ಚಿನ ಕೊಲೆಗಳಾಗುತ್ತವೆ. ಆದರೆ ಅವು ಯಾವೂ ಪ್ರಕಾಶಕ್ಕೆ ಬರುವುದಿಲ್ಲ. ಇದು ಸ್ವಲ್ಪಮಟ್ಟಿಗೆ ಅಸಂಭವ. ಇಷ್ಟಕ್ಕೆಲ್ಲಾ ಕಾರಣ ನಂಜುಂಡ ಮತ್ತು ನಾಗಣ್ಣರ ನಡುವೆ ಹೆಣ್ಣಿಗಾಗಿ ಹುಟ್ಟಿಕೊಂಡ ದ್ವೇಷ. ಅದು ನಾಗಣ್ಣನ ಕೊಲೆಯಿಂದ ಆರಂಭವಾಗಿ ನಂಜುಂಡನ ಸಾವಿನಲ್ಲಿ ಕೊನೆಗೊಳ್ಳುತ್ತದೆ. ಇಂದಿನ ಹಳ್ಳಿಗಳಲ್ಲಿ ಕಂಡುಬರುವ ದ್ವೇಷಾಸೂಯೆಗಳ, ರಾಜಕೀಯದ, ಕ್ಷುದ್ರತನದ ಬದುಕಿನ ಚಿತ್ರಣ ಇಲ್ಲಿದೆ. ಕಾದಂಬರಿಯ ಕೊನೆಯಲ್ಲಿ ಬರುವ ಡಾಕ್ಟರ್ ನವೀನಳ ಪಾತ್ರ ಕಾದಂಬರಿಗೆ ತಿರುವು ಕೊಡಲೆಂದೇ ತಂದಿರುವಂತಿದೆ. ಹಾಗೆಯೆ ಜಂಗಾಲ ಗಂಗಾರಾಮನ ಪಾತ್ರ ಮೊದಲಿನಿಂದಲೂ ಆದರ್ಶೀಕೃತವಾಗಿದೆ. ಡಾಕ್ಟರ್ ನವೀನ ಗಂಗಾರಾಮನನ್ನು ವಿವಾಹವಾಗುವುದು ತೀರ ಅಸಹಜ. ಚೊಚ್ಚಲ ಕೃತಿಯಲ್ಲಿ ಕಂಡುಬರಬಹುದಾದ ಬಂಧದಲ್ಲಿನ ಶಿಥಿಲತೆ ಈ ಕಾದಂಬರಿಯಲ್ಲಿ ಕಂಡುಬಂದರೂ

ಓದಿಸಿಕೊಂಡು ಹೋಗುತ್ತದೆ. ಈ ಕಾದಂಬರಿಗೆ ನಾಲ್ಕು ಹರಕೆಯ ಮಾತುಗಳನ್ನು ಬರೆದಿರುವ ಎಚ್. ಎಲ್. ನಾಗೇಗೌಡರು ಈ ದೋಷಗಳನ್ನು ಗಮನಿಸಿ ಮುಂದೆ ಸಮಗ್ರ ಜೀವನಾನುಭವದಿಂದ ಗ್ರಾಮೀಣ ಬದುಕಿನ ಮತ್ತೊಂದು ಮುಖವೂ ಚಿತ್ರಿತವಾಗಲಿ ಎಂದು ಹಾರೈಸಿದ್ದಾರೆ. ಅವರ ಜೊತೆಗೆ ನಮ್ಮ ದನಿಯನ್ನೂ ಸೇರಿಸಬಹುದು.

ಆಶ್ರಯ : ಕೆ. ವಿ. ಕೃಷ್ಣಯ್ಯ

"ಆಗು ಹೋಗುಗಳನ್ನು ಯಾರಿಂದಲೂ ತಡೆಯಲು ಸಾಧ್ಯವಿಲ್ಲ...ಆಗುವುದು ಆಗಿಯೇ ಆಗುತ್ತದೆ, ಅದನ್ನು ತಡೆಯಲಾರದ ಕಾರಣ ಆಗು ಹೋಗು ನಮಗೆ ನಿಲುಕದ್ದು." ಮತ್ತು "ಹೆಣ್ಣಿಗೆ ಗಂಡಿನ ಆಶ್ರಯ, ಗಂಡಿಗೆ ಹೆಣ್ಣಿನ ಆಶ್ರಯ ಅಷ್ಟೇ ಅಗತ್ಯ." ಈ ಅಭಿಪ್ರಾಯಗಳ ಸಮರ್ಥನೆಯಾಗಿ ಕೆ. ವಿ. ಕೃಷ್ಣಯ್ಯನವರ 'ಆಶ್ರಯ' ಕಾದಂಬರಿ ಶ್ರಮಿಸುತ್ತದೆ. ಎರಡು ಹೆಣ್ಣು ಒಂದುಗಂಡು ಈ ತ್ರಿಕೋನದ ಕಥೆಯಲ್ಲಿ ಸುಧಾಕರನಿಂದ ಪರಿತ್ಯಕ್ತಳಾದ ನಿರ್ಮಲಳ ಸ್ಥಾನವನ್ನು ಅವಳ ಗೆಳತಿ ಬಾಲ ವಿಧವೆಯಾಗಿದ್ದ ಶಾರದ ತುಂಬುತ್ತಾಳೆ. ಆದರೆ ಅವಳೇ ಶಾಶ್ವತವಾಗಿದ್ದರೆ ನಿರ್ಮಲಳ ಗತಿಯೇನು? ಅದಕ್ಕಾಗಿ ಸುಧಾಕರನಿಗೊಂದು ಮಗುವನ್ನು ಕೊಟ್ಟು ಸ್ವರ್ಗಸ್ಥಳಾಗುತ್ತಾಳೆ. ಮತ್ತೆ ಆ ಜಾಗಕ್ಕೆ ನಿರ್ಮಲ ಬರುತ್ತಾಳೆಂದು ಹೇಳಬೇಕಾಗಿಲ್ಲವಷ್ಟೆ? ಈ ಕಾದಂಬರಿಯಲ್ಲಿ ಖಳನಾಯಕನಿಲ್ಲದಿದ್ದರೆ ಹೇಗೆ? ಪ್ರಭಾಕರ ಆ ಪಾತ್ರವನ್ನು ನಿರ್ವಹಿಸುತ್ತಾನೆ. ಇವನಿಂದಾಗಿ ಕಾದಂಬರಿಯಲ್ಲಿ ಮಂತ್ರವಾದಿಗಳ ಪ್ರವೇಶವಾಗುತ್ತದೆ. ಮಾಟದಿಂದಾಗಿ ನಿರ್ಮಲಳ ಬಾಳು ಹಾಳಾಗಿದ್ದುದ್ದು ಮತ್ತೆ ಪ್ರತಿ ಮಾಟ ಮಾಟದಿಂದಾಗಿ ಸರಿಹೋಗುತ್ತದೆ. ಕಾದಂಬರಿಯ ಪ್ರಾರಂಭದಲ್ಲಿ ನಿರ್ಮಲಳ ಸೋದರತ್ತೆಯ ಯಜಮಾನರ ಸಂಬಂಧಿಯಾದ ಪ್ರಭಾಕರ ಕೆಲವಾರು ಅಧ್ಯಾಯಗಳಾದ ಮೇಲೆ ಅದೇ ಸೋದರತ್ತೆಯ ತಮ್ಮನಾಗುತ್ತಾನೆ. ಅಂದರೆ ಸಂಬಂಧದಲ್ಲಿ ನಿರ್ಮಲಳಿಗೆ ಚಿಕ್ಕಪ್ಪನಾಗಬೇಕಾಗುತ್ತದೆ. ಅವನು ನಿರ್ಮಲಳಿಗಾಗಿ ಬಾಯಿಬಾಯಿ ಬಿಡುತ್ತಿರುತ್ತಾನೆ. ಹೀಗೆ ತಾವೇ ಸೃಷ್ಟಿಸಿದ ಪಾತ್ರಗಳ ಹಿಂದುಮುಂದುಗಳನ್ನು ಮರೆಯುವ ಲೇಖಕರಿಂದ ಏನನ್ನು ತಾನೆ ಓದುಗರು ನಿರೀಕ್ಷಿಸಬಹುದು? ವಿಧವೆಯಾದ ಸೊಸೆಯನ್ನು ಓದಿಸಿ, ಕೆಲಸಕ್ಕೆ ಸೇರಿಸಿ ಮರುಮದುವೆ ಮಾಡಿಕೊಡುವ ಆದರ್ಶ ಅತ್ತೆಮಾವಂದಿರು ಬೇಕೆ? ಇಲ್ಲಿದ್ದಾರೆ. ವಿನಾಕಾರಣ ಸೊಸೆಯ ಮೇಲೆ ದ್ವೇಷ ಸಾಧಿಸುವ ಅತ್ತೆಮಾವಂದಿರು ಬೇಕೆ? ಇಲ್ಲಿದ್ದಾರೆ. ಕೊನೆಗೆ ಕ್ರೂರ ಅತ್ತೆಮಾವಂದಿರ, ಗಂಡನ ಮನಸ್ಸು ಪರಿವರ್ತನೆಯಾಗುತ್ತದೆ. ಅಂದರೆ ಸುಖಾಂತವಾಗುತ್ತದೆ. ಇದು ಲೇಖಕರ ಒಂಬತ್ತನೆಯ ಕಾದಂಬರಿಯಾದರೂ ಕಾದಂಬರಿಯಲ್ಲಿ ಅಶುದ್ಧ ಪದ ಪ್ರಯೋಗಗಳಿರುವುದು ವಿಷಾದದ ಸಂಗತಿ.

ಆಕಾಂಕ್ಷೆಯ ಅಲೆಗಳು : ತ. ಪು. ವೆಂಕಟರಾಮ್

ಇದು ಅವರ ಸಿದ್ಧ ಸೂತ್ರದಡಿಯಲ್ಲಿ ನೇಯ್ದ ಕಾದಂಬರಿ. ನಾಯಕಿ ಸುಮಾ ಗತಿಸಿದ ಶಾಲಾ ಮಾಸ್ತರೊಬ್ಬರ ಮಗಳು. ಅಪೂರ್ವ ಲಾವಣ್ಯವತಿ. ತನ್ನ ಲಾವಣ್ಯಕ್ಕೆ

ತಕ್ಕಂತೆ ತನಗಿಂತಲೂ ಮಿಗಿಲಾದ ರೂಪವಂತನನ್ನು ಶ್ರೀಮಂತನನ್ನು ಕೈಹಿಡಿಯುವ ಕನಸನ್ನು ಹೊಂದಿದಾಕೆ. ತನ್ನನ್ನು ವರಿಸಲು ಬಂದ ಪ್ರೌಢಶಾಲಾ ಅಧ್ಯಾಪಕನನ್ನು ತಿರಸ್ಕರಿಸುತ್ತಾಳೆ. ತಾನು ಕೆಲಸಕ್ಕೆ ಸೇರಿದ ಫ್ಯಾಕ್ಟರಿಗೆ ವ್ಯವಹಾರ ನಿಮಿತ್ತ ಬರುತ್ತಿದ್ದ ಸುರೇಂದ್ರಕುಮಾರನನ್ನು ಪ್ರೇಮಿಸಿ ವರಿಸಲು ಸಿದ್ಧಳಾಗುತ್ತಾಳೆ. ಆದರೆ ತಾನು ಮೋಸ ಹೋದದ್ದು ತಡವಾಗಿ ತಿಳಿಯುತ್ತದೆ. ತಾನು ತಿರಸ್ಕರಿಸಿದ್ದ ವ್ಯಕ್ತಿಯಾದ ಸುರೇಶನನ್ನೇ ವರಿಸುತ್ತಾಳೆ. ಅವಳ ಶೀಲದ ಬಗ್ಗೆ ಡಾಕ್ಟರೊಬ್ಬರು ಸರ್ಟಿಫಿಕೇಟ್ ಕೊಡುತ್ತಾರೆ. ಕಾದಂಬರಿ ಸುಖಾಂತವಾಗುತ್ತದೆ. ಪ್ರೌಢಶಾಲಾ ಉಪಾಧ್ಯಾಯನಾಗಿದ್ದ ಸುರೇಶ ಆ ವೇಳೆಗೆ (ಕಾಲಾವಧಿ ಅವಧಿ ಐದುವರ್ಷವೆಂದು ಕೆಲವೆಡೆಯೂ ಹದಿನೈದು ವರ್ಷವೆಂದು ಒಂದೆಡೆಯೂ ಬಂದಿದೆ). ಮೈಸೂರಿನಲ್ಲಿ ಶ್ರೀಮಂತ ಕೈಗಾರಿಕೋದ್ಯಮಿಯಾಗಿ ಜನಾನುರಾಗಿ ಉದಾರಿಯೂ ಅಗಿರುತ್ತಾನೆ. ಹೆಣ್ಣುಗಳನ್ನು ಮರುಳುಮಾಡಿ ಮೋಸಗೊಳಿಸುವುದರಲ್ಲಿ ನಿಸ್ಸೀಮನಾದ ಸುರೇಂದ್ರ ತನ್ನ ಎಲ್ಲಾ ವ್ಯವಹಾರಗಳಲ್ಲೂ ನಷ್ಟವನ್ನು ಅನುಭವಿಸಿ ಅಪಘಾತದಲ್ಲಿ ಮರಣಹೊಂದುತ್ತಾನೆ. ಪಾತ್ರಗಳು ಕಾದಂಬರಿಕಾರರಿಗೆ ಬೇಕಾದಂತೆ ಕುಣಿಯುತ್ತವೆ. ಒಂದು ಉದಾಹರಣೆ : ಖಳನಾಯಕನಾದ ಸುರೇಂದ್ರಕುಮಾರ ಸುಮಳನ್ನು ಕುರಿತು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವ್ಯಕ್ತಿಗಳೊಂದಿಗೆ ಹೇಳುವ ಈ ಮಾತುಗಳನ್ನು ಗಮನಿಸಿ—"ನಾನ್ಸೆಸ್ ! ಷೇರು ಕೊಡುವಂತ ವಸ್ತುವಲ್ಲ ಅದು. ಆಕೆ ನನ್ನ ಕೈ ಸೇರುವ ರತ್ನದ ಹರಳು !..." (ಪು. 59) "ಮದುವೇನೇ ! ಯಾಕೋ ಈ ಸಂಸಾರದ ತಾಪತ್ರಯ ? ಹಾಲು ಅಗ್ಗವಾಗಿ ಸಿಗಬೇಕಾದ್ರೆ ಹಸು ಯಾಕೆ ಕಟ್ಟಬೇಕು ?" (ಪು. 94). ಸರ್ವಗುಣ ಸಂಪನ್ನ ತ್ಯಾಗಶೀಲ ಪಾತ್ರಗಳೊಂದು ಕಡೆ, ಎಲ್ಲ ದುಷ್ಟಗುಣಗಳೂ ಮೈವೆತ್ತ ಧೂರ್ತ ಪಾತ್ರಗಳೊಂದುಕಡೆಯಿರುವ ಸರಳ ಸಿದ್ಧಾಂತದ ಈ -ಕಾದಂಬರಿಯನ್ನೊಮ್ಮೆ ಓದಿ ಸುಲಭವಾಗಿ ಮರೆಯಬಹುದು. ಇದು ತ. ಪು. ವೆಂಕಟರಾಮ್ ಅವರ ಇಪ್ಪತ್ತೆರಡನೆಯ ಕಾದಂಬರಿ. ಇನ್ನೂ ಹೆಚ್ಚಿನ ಜೀವನಾನುಭವದಿಂದ ಒಳ್ಳೆಯ ಕಾದಂಬರಿಗಳನ್ನು ಈ ಲೇಖಕರು ಯಾವಾಗ ಕೊಡುತ್ತಾರೋ ನೋಡಬೇಕಾಗಿದೆ.

ಸಂಪ್ರದಾಯ : ಡಾ. ಎ. ನಾಗರಾಜ

ಧಾರವಾಹಿಯಾಗಿ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ ನಾಲ್ಕು ಕಾದಂಬರಿಗಳಲ್ಲಿ ಡಾ. ಎ. ನಾಗರಾಜರ 'ಸಂಪ್ರದಾಯ' ಪುಸ್ತಕರೂಪದಲ್ಲಿ ಪ್ರಕಟವಾದ ಎರಡನೆಯ ಕಾದಂಬರಿ. "ಮದ್ದು ಹಾಕುವ ವಿಚಿತ್ರ ಸಂಪ್ರದಾಯದ ಬಗ್ಗೆ ನಾನು ಕುತೂಹಲನಾಗಿ ಈ ಬಗ್ಗೆ ಸಂಶೋಧನೆ ನಡೆಸಲು ಯತ್ನಿಸಿದೆ...ಪ್ರಾಚೀನ ಹಲವು ಗ್ರಂಥಗಳಲ್ಲಿ ಈ ವಿಚಾರವಾಗಿ ಸಾಕಷ್ಟು ವಿವರ ದೊರಕಿದವು...ಪ್ರಾಚೀನ ಆಯುರ್ವೇದ ಶಾಸ್ತ್ರಗಳಲ್ಲಿ ಈ ಶಿಕ್ಷೆಗೆ ಒಳಗಾದವರ ಲಕ್ಷಣ, ಅವುಗಳನ್ನು ತೆಗೆಯುವ ವಿಧಾನದ ವಿವರಗಳು

ದೊರಕಿದಾಗ ಇದರ ಸತ್ಯಾಂಶದ ಅರಿವಾಯಿತು. ಈ ಗ್ರಂಥಗಳಲ್ಲಲ್ಲದೆ 'ಮನ್ಮಥ ವಿಜಯ', 'ಕಂಠೀರವ ನರಸರಾಜ ವಿಜಯ', 'ಖಗೇಂದ್ರಮಣಿ ದರ್ಪಣ' ಮುಂತಾದ ಪ್ರಾಚೀನ ಕೃತಿಗಳಲ್ಲಿ ಈ ಸಂಪ್ರದಾಯದ ಬಗ್ಗೆ ಹೇಳಿರುವ ವಿಚಾರಗಳು ಕುತೂಹಲ ಕೆರಳಿಸಿದವು..." ತಮ್ಮ ಕಾದಂಬರಿಯ ಬಗೆಗೆ ಲೇಖಕರ ಈ ಮಾತುಗಳನ್ನು ನೋಡಿದಾಗ ಕಾದಂಬರಿಯ ಬಗೆಗೆ ಒಂದು ರೀತಿಯ ಕುತೂಹಲಭರಿತ ನಿರೀಕ್ಷೆ ಮೂಡುತ್ತದೆ. ಆದರೆ ಕಾದಂಬರಿಯನ್ನು ಓದಿದಮೇಲೆ ತೀವ್ರ ನಿರಾಶೆ ಮೂಡುತ್ತದೆ. ಹಸಿದ ನಾಯಿಯೂ ಮೂಸದ ಮುಗ್ಗಲು ಕಥಾವಸ್ತು. ಯದ್ವಾತದ್ವಾ ನಿರೂಪಣಾ ವಿಧಾನ. ಕಥಾನಾಯಕಿ ತನ್ನ ತಾಯಿ 'ಮದ್ದು ಹಾಕುವು'ದನ್ನು ವಿರೋಧಿಸಿದರೂ ಪ್ರತಿಭಟಿಸಲಾರಳು. ತನ್ನ ತಾಯಿಯ ಈ ಅನಿಷ್ಟ ಪದ್ಧತಿಯಿಂದ ತನ್ನ ಗೆಳತಿಯರು ಒಬ್ಬೊಬ್ಬರಾಗಿ ಸಾಯುತ್ತಿದ್ದರೂ ಬರಿಯ ಮಾತಿನಲ್ಲಲ್ಲದೆ ಕ್ರಿಯಾತ್ಮವಾಗಿ ಪ್ರತಿಭಟಿಸಲಾರಳು. ತನ್ನ ತಾಯಿ ಇಟ್ಟುಕೊಂಡವವನನ್ನೇ ಚಿಕ್ಕಪ್ಪನೆಂದು ಸ್ವೀಕರಿಸಿದವಳು ಇಂತಹ ವಿಷಯಕ್ಕೆ ಹೇಗೆ ಪ್ರತಿಭಟಿಸಿಯಾಳು? ಆಹಾರದಲ್ಲಿ ಸೇವಿಸಿದ ಮದ್ದಿನಿಂದಾಗಿ ಈ ಕಾದಂಬರಿಯಲ್ಲಿ ಆರು ಸಾವಾಗುತ್ತದೆ. ಕಥಾನಾಯಕಿ ಲಕ್ಷ್ಮಿಗಾಗಿ ಇಬ್ಬರು ತಮ್ಮ ಹೆಂಡತಿಯರನ್ನು ಕೊಲೆ ಮಾಡುತ್ತಾರೆ. ಅವರಲ್ಲಿ ಒಬ್ಬ ಅವಳ ಚಿಕ್ಕಪ್ಪನೆ! ಮೂರು ಆತ್ಮಹತ್ಯೆಯಿಂದ ಒಂದು ಹೃದಯಾಘಾತದಿಂದ ಸಾವುಂಟಾಗುತ್ತದೆ. ಕಾದಂಬರಿಯ ಪ್ರಾರಂಭದಲ್ಲಿ ಲಕ್ಷ್ಮಿಯ ಪ್ರಿಯಕರ ಚಂದ್ರು ತನ್ನ ಪ್ರೇಮವನ್ನು ತೋಡಿಕೊಂಡಾಗ ತಮ್ಮ ವಿವಾಹಕ್ಕೆ ಜಾತಿ ಅಡ್ಡಿಯಾಗಬಾರದೆಂದಾಗ "...ಜಾತಿ ಮತಗಳನ್ನು ನಿರ್ಮೂಲ ಮಾಡುವ ಮೊದಲು ಎಷ್ಟೋ ಹಳೆಯ ಸಂಪ್ರದಾಯಗಳನ್ನು ನಿರ್ಮೂಲ ಮಾಡಬೇಕಾಗಿದೆ..." (ಪು. 40) ಎನ್ನುತ್ತಾಳೆ ಲಕ್ಷ್ಮಿ. ಅದೇ ಲಕ್ಷ್ಮಿ ಕಾದಂಬರಿಯ ಕೊನೆಯಲ್ಲಿ "ಜಾತಿ ಯಾವುದಾದರೇನು ಪ್ರೇಮ ದೊಡ್ಡದು" (ಪು. 122) ಎನ್ನುತ್ತಾಳೆ. ಅವಳ ಪ್ರಿಯಕರ ಡೇನಿಸ್ "...ಮನ ಒಪ್ಪಿದರೆ ಜಾತಿ ಯಾವುದಾದರೇನು?" (ಪು. 144) ಎನ್ನುತ್ತಾನೆ. ಈ ಮಾತುಗಳ ಬಗ್ಗೆ ವ್ಯಾಖ್ಯಾನ ಬೇಕಿಲ್ಲ. ಲಕ್ಷ್ಮಿ ಅನಾಥಳಾದಾಗ ಅವಳಿಗೆ ಅವಳ ಗೆಳತಿಯರಿಂದ ಸಿಗುವ ಆಶ್ರಯ, ನೆರವು ಈ ಕಾದಂಬರಿಯಲ್ಲಲ್ಲದೆ ಬೇರೆಲ್ಲೂ ಸಿಗಲಾರದು. ತಿಂಗಳುಗಟ್ಟಲೆ ಮನೆಯಲ್ಲಿಟ್ಟುಕೊಂಡು ಆದರಿಸುತ್ತಾರೆ. ಚಿತ್ರ ಕಲಾಶಾಲೆಗಳಿಗೆ, ಕಾಲೇಜುಗಳಿಗೆ ಸೇರಿಸುತ್ತಾರೆ. ಇವಳ ಬಳಿ ಎಸ್.ಎಸ್.ಎಲ್‌ಸಿ.ಯ ಸರ್ಟಿಫಿಕೇಟ್ ಇಲ್ಲದಿದ್ದರೂ ಅಧ್ಯಾಪಕಿಯ ಕೆಲಸ ಸಿಗುತ್ತದೆ, ಕಾಲೇಜಿಗೆ ಪ್ರವೇಶ ದೊರಕುತ್ತದೆ. ಹೀಗೆ ಹೇಳುತ್ತಾ ಹೋದರೆ ಕೊನೆಮೊದಲೆಲ್ಲಿ?

ನಿರೀಕ್ಷೆ : ಬಿ. ಎಲ್. ವೇಣು

ಸರಾಗವಾಗಿ ಓದಿಸಿಕೊಂಡು ಹೋಗುವ ಬಿ. ಎಲ್. ವೇಣು ಅವರ 'ನಿರೀಕ್ಷೆ'ಯಲ್ಲಿ ಮೂರು ಪ್ರೇಮದ ಕಥೆಗಳು ಬರುತ್ತವೆ. ತಾರ-ಶ್ರೀಧರ, ವಸುಂಧರೆ-ಶೇಖರ ಮತ್ತು

ಕಮಲ-ಮಧೂಸೂಧನ ಈ ಮೂರು ಜೋಡಿಗಳಲ್ಲಿ ತಾರ-ಶ್ರೀಧರರ ಪ್ರಕರಣವನ್ನು ಪ್ರೇಮಪ್ರಕರಣವೆನ್ನುವಂತಿಲ್ಲ. ಅಕ್ಕನ ಮದುವೆಯಲ್ಲಿ ಪರಿಚಯವಾದ ಶ್ರೀಧರನ ಸೌಂದರ್ಯಕ್ಕೂ ವಾಕ್ಚಾತುರ್ಯಕ್ಕೂ ಮರುಳಾಗಿ ತಾರ ಒಂದು ನಿಮಿಷ ಎಚ್ಚರತಪ್ಪಿ ಜಾರುತ್ತಾಳೆ. ಶ್ರೀಧರನ ಬೂಟಾಟಿಕೆ ಬಯಲಾದಾಗ ಆತ್ಮಹತ್ಯೆ ಮಾಡಿಕೊಳ್ಳು ತ್ತಾಳೆ. ಗೆಳತಿ ತಾರಳ ಪ್ರಕರಣದಿಂದ ಬಹು ಎಚ್ಚರವಾಗಿದ್ದ ವಸುಂಧರ ದುಡುಕದೆ ಸಾವಧಾನದಿಂದ ಭರವಸೆ ಸಿಕ್ಕಿದಮೇಲೆ ಶೇಖರನನ್ನು ಪ್ರೀತಿಸುತ್ತಾಳೆ. ವಸುಂಧರ ಶೇಖರರ ಪ್ರೇಮ ಹಿರಿಯರಿಗಿಷ್ಟವಿಲ್ಲದ್ದರಿಂದ ಓಡಿಹೋಗಿ ಮದುವೆಯಾಗುತ್ತಾರೆ. ಬಡತನದ ಬೇಗೆಯಿಂದ ಬೆಂದ ಶೇಖರ ಮತ್ತೆ ತಂದೆಯ ಮಾತಿಗೆ ಮರುಳಾಗಿ ಗರ್ಭಿಣಿ ವಸುಂಧರೆಯನ್ನು ತೊರೆದು ಮತ್ತೊಂದು ವಿವಾಹವಾಗುತ್ತಾನೆ. "...ಪ್ರೇಮಿಸುವುದು ತಪ್ಪಲ್ಲ. ಆದರೆ ಅನುಸರಿಸುವ ಮಾರ್ಗ ಮಾದರಿಯಾಗಿರ ಬೇಕು..." "ಪ್ರೇಮಕ್ಕೆ ಅಂತ್ಯವೇ ಇಲ್ಲ. ಲವ್ ಈಸ್ ಇಮ್ಮಾರ್ಟಲ್" ಎಂದು ಹೇಳಿದ ಶೇಖರ ನೆಮ್ಮದಿಯ ಬಾಳಿಗಾಗಿ ವಸುಂಧರಳನ್ನು ತ್ಯಜಿಸಿದ್ದುಅಷ್ಟಾಗಿ ಸಮರ್ಥನೀಯವಲ್ಲ ಕಮಲ ವಸುಂಧರೆಯ ಮಗಳು. ತಾಯಿಯ ದುರಂತ ಬದುಕನ್ನು ಕಂಡು ಬಲು ಎಚ್ಚರದಿಂದಿರುವಾಕೆ. ಆದರೂ ವಯೋಧರ್ಮಕ್ಕನುಗುಣವಾಗಿ ಮಧುಸೂಧನನ್ನು ಪ್ರೀತಿಸುತ್ತಾಳೆ. ಇವರ ಮದುವೆಗೆ ಹಿರಿಯರ ಆಶೀರ್ವಾದವೂ ದೊರಕುವಷ್ಟರಲ್ಲಿ ವಸುಂಧರೆ ಮರಣವನ್ನಪ್ಪುತ್ತಾಳೆ. ಸಾಯುವ ಮುನ್ನ ವಸುಂಧರೆ ತನ್ನ ಗಂಡನೂ ಮಧುಸೂಧನನ ಭಾವನೂ ಆದ ಶೇಖರನನ್ನು ಕಂಡು ಕಣ್ಮುಚ್ಚುತ್ತಾಳೆ. ಅವಳ (ಪತಿಯ) ನಿರೀಕ್ಷೆ ಫಲಿಸುತ್ತದೆ. ವಸುಂಧರೆಯ ಸಾವು ಅನಿವಾರ್ಯವಾಗೇನಿರಲಿಲ್ಲ. ಕೊನೆಯ ಭಾಗದ ಅಂದರೆ ಕಮಲ ಮತ್ತು ಮಧುಸೂದನರ ಪ್ರೇಮ ಪ್ರಕರಣ ಸಿನಿಮೀಯವಾಗಿ ಭಾವುಕರ ಹೆಂಗರುಳನ್ನು ಮಿಡಿಯುವ ರೀತಿಯಲ್ಲಿದೆ. ಕಾದಂಬರಿ ಕಾರರ ಧೋರಣೆಯೂ ಪ್ರೇಮ/ಪ್ರೇಮ ವಿವಾಹ ತಪ್ಪಲ್ಲ ಆದರೆ ಅದಕ್ಕೆ ಹಿರಿಯರ ಆಶೀರ್ವಾದ ಅಥವಾ ಒಪ್ಪಿಗೆ ಬೇಕು ಎಂಬಂತೆ ಕಾಣುತ್ತದೆ. ಇದು ಕಾದಂಬರಿಕಾರರ ಪ್ರಥಮ ಕಾದಂಬರಿ. ಸುಮಾರು ಹತ್ತು ವರ್ಷಗಳ ಹಿಂದೆ ಬರೆದದ್ದು. ಈಗ ಪ್ರಕಟವಾಗುತ್ತಿದೆ. "ಸಾಮಾನ್ಯವಾಗಿ ಪ್ರಥಮ ಕೃತಿಯಲ್ಲಿ ಕಾಣಬರುವ ನ್ಯೂನತೆ ಕೊರತೆಗಳಿಂದ 'ನಿರೀಕ್ಷಣೆ' ನಿರೀಕ್ಷಿಸಿದಷ್ಟು ಸಫಲವಾಗಿಲ್ಲವೆಂಬ ಅರಿವು ನನಗಿದೆ" ಎಂದು ಕಾದಂಬರಿಕಾರರೇ ಹೇಳಿಕೊಂಡಿದ್ದಾರೆ. ಬೆರಳಿಟ್ಟು ತೋರಿಸುವಂತಹ ದೋಷಗಳು ಇಲ್ಲವಾದರೂ ಸಣ್ಣ ಪುಟ್ಟ ನ್ಯೂನತೆಗಳಿಲ್ಲವೆನ್ನುವಂತಿಲ್ಲ. ಉದಾ ಹರಣೆಗೆ ಈ ಕಾದಂಬರಿಯಲ್ಲಿನ ಪ್ರಧಾನವಾದ ಮೂರೂ ಸ್ತ್ರೀ ಪಾತ್ರಗಳು— ತಾರ, ವಸುಂಧರೆ ಮತ್ತು ಕಮಲ—ಆದರ್ಶದ ಅಪರಾವತಾರಗಳು. ತಾವು ಮೆಚ್ಚಿದವನಿಗಾಗಿ ಎಂತಹ ತ್ಯಾಗಕ್ಕೂ ಸಿದ್ಧರಾದವರು. ಇಂತಹ ಅತಿ ಭಾವುಕ ಆದರ್ಶ ಪಾತ್ರಗಳನ್ನು ಲೇಖಕರು ಸಂಯಮದಿಂದ ಚಿತ್ರಿಸಬಲ್ಲರಾದರೆ ಇವರಿಂದ ಇನ್ನೂ ಉತ್ತಮ ಕಾದಂಬರಿಗಳನ್ನು ನಿರೀಕ್ಷಿಸಬಹುದು.

ಹೊಂಗಿರಣ : ದಯಾನಂದ ತೋರ್ಕೆ

ದಯಾನಂದ ತೋರ್ಕೆ ಅವರ 'ಹೊಂಗಿರಣ'ವನ್ನು ಓದಿ ಮುಗಿಸಿದ ಮೇಲೆ ಅದರಲ್ಲಿ ಯಾವ ಕಿರಣವನ್ನೂ ಕಾಣದೆ ಹೋದೆವು. ಈ ಕಾದಂಬರಿಯ ಕಥೆಯನ್ನು ಹೇಳಿದರೆ ಸಾಕು ಅದರ ವಿಮರ್ಶೆಮಾಡಿದಂತೆ. ವಿಧವೆ ತಾಯಿ, ಇಬ್ಬರು ತಂಗಿಯರು ಮತ್ತು ಒಬ್ಬ ತಮ್ಮನ ಜವಾಬ್ದಾರಿಯನ್ನು ಹೊತ್ತು ನೂರು ರೂಪಾಯಿ ಸಂಬಳದಲ್ಲಿ ಕಾಲ ನೂಕಬೇಕಾದ ಪರಿಸ್ಥಿತಿ ಮುವ್ವತ್ತೈದರ ಶಾಮಣ್ಣನವರು, ಮನೆಯ ಬಡತನದ ಅರಿವಿಲ್ಲದೆ ಮಜಾ ಉಡಾಯಿಸುವ ರತ್ನಾಕರ ಮತ್ತು ತಂಗಿ ರೇವತಿ ತನ್ನ ಪ್ರೇಯಸಿ ಸುಮಂಗಲಿಯ ಜೊತೆ ಹಣವನ್ನು ಕುರಿತು "ಹೋಗ್ಲಿಬಿಡೆ, ಹ್ಯಾಗೆ ಬಂತೋ ಹಾಗೆ ಹೋಗುತ್ತೆ. "ಇದ್ದಾಗ ಮಜಾಮಾಡ್ಬೇಕು." ಎನ್ನುವ ರತ್ನಾಕರ ತನ್ನ ಪ್ರೇಯಸಿ ಸೂಳೆಯ ಮಗಳೆಂದು ತಿಳಿದಮೇಲೆ "...ಸೂಳೆಯ ಮಗಳು... ಅಂದರೆ ಸೂಳೇನೇ..." ಎಂದು ಕೈಜಾಡಿಸಿಕೊಳ್ಳುತ್ತಾನೆ. ಇವನ ಗೆಳೆಯ ಶ್ಯಾಮ ಸುಂದರ್ ಲೋಫರ್ ಎಂದು ಗೊತ್ತಿದ್ದರೂಅವನು 'ರತ್ನಾಕರ ಐ ಲವ್‌ಯುವರ್ ಸಿಸ್ಟರ್" ಎಂದಾಗ "ಐ ಹ್ಯಾವ್ ನೋ ಅಬ್ಜಕ್ಷನ್" ಎನ್ನುತ್ತಾನೆ. ತಂಗಿಯನ್ನು ಸ್ನೇಹಿತನ ರೂಮಿಗೆ ಕರೆದುಕೊಂಡು ಹೋಗಿ ಬಿಡುತ್ತಾನೆ. ಹತ್ತಾರು ಹೆಣ್ಣನ್ನು ಹಾಳುಮಾಡಿದ್ದ ಶ್ಯಾಮಸುಂದರ ರೇವತಿಗೂ ಕೈಕೊಡಲು ಹೋದಾಗ ರೇವತಿ ಕಪಾಳಕ್ಕೆ ಬಿಗಿಯುತ್ತಾಳೆ. ಶ್ಯಾಮಸುಂದರನಿಗೆ ಜ್ಞಾನೋದಯವಾಗಿ ರೇವತಿಯನ್ನು ಮದುವೆಯಾಗುತ್ತಾನೆ. ತಾನು ಕೊಟ್ಟ ಸಾಲ ಹತ್ತು ಸಾವಿರ ರೂಪಾಯಿಯನ್ನು ಒಂದು ವಾರದೊಳಗೆ ಕೊಡು ಇಲ್ಲವೆ ಹೆಂಡತಿಯನ್ನು ಕೊಡು ಎಂದು ಕೇಳುತ್ತಾನೆ ಶಾಮಣ್ಣನ ಧಣಿ, ವಿಷಕಂಠಯ್ಯ. ಯಾರನ್ನು ಸೂಳೆಯೆಂದು ತಿರಸ್ಕರಿಸಿದ್ದರೊ ಆ ಸುಮಂಗಲಿಯಿಂದಲೇ ಶಾಮಣ್ಣ ಈ ಕುತ್ತಿನಿಂದ ಪಾರಾಗುತ್ತಾನೆ. ಬಾಳಿನಲ್ಲಿ ಹೊಂಗಿರಣವನ್ನು ಕಾಣುತ್ತಾನೆ ! ಈ ಅಪ್ರಬುದ್ಧ ಬಾಲಿಶ ಕಥೆ ಹಾಗಿರಲಿ, ಕಾದಂಬರಿ ಕಾರರಿಗೆ ನಮ್ಮ ಸಾಮಾಜಿಕ ವ್ಯವಸ್ಥೆಯ ಕಟ್ಟುಪಾಡುಗಳೂ ಗೊತ್ತಿಲ್ಲವೆನ್ನುವುದಕ್ಕೆ ಒಂದು ನಿದರ್ಶನ: ಶಾಮಣ್ಣನ ಭಾವನಾದ ಸೀತಾರಾಮಯ್ಯ ತನ್ನ ತಮ್ಮನ ಮಗನಿಗೆ ತನ್ನ ಹೆಂಡತಿಯ ತಂಗಿಯನ್ನು ತಂದುಕೊಳ್ಳುವುದಾಗಿ ಹೇಳುತ್ತಾನೆ ! ಇತಂಹ ಸಾಮಾಜಿಕ ಪರಿಜ್ಞಾನವಿರುವ ಕಾದಂಬರಿಕಾರರಿಂದ ಒಳ್ಳೆಯ ಕಾದಂಬರಿಯನ್ನು ನಾವು ನಿರೀಕ್ಷಿಸಬಹುದೆ ? ಇದು ಲೇಖಕರ ಹತ್ತನೆಯ ಕಾದಂಬರಿ. ಇತಂಹ ಕಾಗಕ್ಕ ಗುಬ್ಬಕ್ಕಗಳ ಕಥೆಯನ್ನು ಕಾದಂಬರಿಯಾಗಿ ಹೊಸೆಯುವುದನ್ನು ನಿಲ್ಲಿಸಿದರೆ ಯಾರಿಗೂ ನಷ್ಟವಿಲ್ಲ.

ಬದುಕ ಮನ್ನಿಸೊ...ಪ್ರಭುವೆ : ಹ. ಮ. ಶಿವಲಿಂಗಯ್ಯ

ಈ ಕಾದಂಬರಿಯ ಕಥಾನಾಯಕ ಬದುಕನ್ನು ಅದು ಬಂದಂತೆ ಸ್ವೀಕರಿಸಿ ತನ್ನ ತನವನ್ನೇ ತೋರದೆ ನಿರಂತರ ದುರಂತದತ್ತ ತುಡಿಯುತ್ತಿರುವವನು. ಕಥಾನಾಯಕ

ಅನಂತ ತನ್ನ ಅಂತರಂಗ ಪರಿವೀಕ್ಷಣೆ ಮಾಡಿಕೊಳ್ಳುತ್ತಲೆ ತನ್ನಂತೆಯೆ ದುರಂತ ಬಾಳನ್ನು ಬಾಳಿದ ಬಾಳುತ್ತಿರುವ ಗತಿಸಿದ, ಇರುವ ಸ್ನೇಹಿತರ ಬದುಕನ್ನೂ ವಿಶ್ಲೇಷಿಸುತ್ತಾ ಹೋಗುತ್ತಾನೆ. ಈ ಎಲ್ಲರ ದುರಂತಕ್ಕೆ ಇಂದಿನ ಕಲುಷಿತ ಸಮಾಜ ವ್ಯವಸ್ಥೆ ಸ್ವಲ್ಪಮಟ್ಟಿಗೆ ಕಾರಣವಾಗಿರಬಹುದಾದರೂ ಅದೇ ಇವರೆಲ್ಲರ ದುರಂತದ ಮೂಲವಲ್ಲ. ಅನಂತನ ದುರಂತಕ್ಕೆ ಬದುಕನ್ನು ಎದುರಿಸುವ ಎದೆಗಾರಿಕೆಯಿಲ್ಲದ ಮತ್ತು ಅವನು ಅತಿ ಪ್ರೀ ಯಿಂದ ಬೆಳೆಸಿಕೊಂಡು ಬಂದ ಸಿನಿಕತನವೇ ಕಾರಣ. ಅವನ ಅಂತರಂಗ ಪರಿವೀಕ್ಷಣೆಯಲ್ಲಿ ಅವನ ಆಲೋಚನೆಗಳು ಇದ್ದಕ್ಕಿದ್ದಂತೆ ಬದಲಾಗುತ್ತವೆ. ಎಲ್ಲಿಂದ ಎಲ್ಲಿಗೋ ಹಾರುತ್ತವೆ. ಯಾವುದೋ ಕಾವ್ಯದ, ಯಾವುದೋ ನಾಟಕದ ಪಾತ್ರಗಳ, ಸನ್ನಿವೇಶ, ಚರ್ಯೆ, ಮಾತುಗಳು ಅರ್ಥಹೀನವಾಗಿ ಇಲ್ಲಿ ಬರುತ್ತವೆ. ಕೆಲವೆಡೆ ಕಾದಂಬರಿಕಾರ ಅನವಶ್ಯಕ ಭಾಷಣದಲ್ಲಿ ತೊಡಗುತ್ತಾರೆ. ಕಥಾವಸ್ತುವಿನಲ್ಲಿ 'ಹ್ಯಾಮ್ಲೆಟ್' ಅಥವಾ 'ರಕ್ತಾಕ್ಷಿಯ' ಛಾಯೆಯನ್ನು ಕಾಣಬಹುದು. ಈ ಕಾದಂಬರಿಗೆ ಬಹುಭಾರವಾದ ಮುನ್ನುಡಿಯನ್ನು ಸಿದ್ಧಲಿಂಗ ಪಟ್ಟಣಶೆಟ್ಟಿ ಬರೆದಿದ್ದಾರೆ. ಆದರೂ ಕೊನೆಯಲ್ಲಿ ಹೇಳಿಕೆಯನ್ನು ಸಾರ್ವತ್ರಿಕಗೊಳಿಸಿ ಸೂಚ್ಯವಾಗಿ ಲೇಖಕರಲ್ಲಿನ ಅರಕೆ ಕೊರತೆಗಳನ್ನು ಹೇಳಿದ್ದಾರೆ. ಲೇಖಕರೇ "ನನ್ನ ಮೊದಲಿನ ಕಾದಂಬರಿಯಲ್ಲೇ ನಾನು ಪಾಕಗೊಂಡಿದ್ದೇನೆ ಎಂಬ ಅಗ್ಗಳಿಕೆ ನನಗಿಲ್ಲ. ಕಾದಂಬರಿಯಲ್ಲಿ ಅಲ್ಲಲ್ಲಿ ಯಾವುದೇ ರೀತಿಯ ದೋಷಗಳಿರಬಹುದ" ಎಂದು ಹೇಳಿಕೊಂಡಿದ್ದಾರೆ. ಅವರ ಅನ್ನಿಸಿಕೆ ನಿಜ. ಲೇಖಕನ ಕಲೆಯುಬಗ್ಗೆ ಅವರ ಕೈ ಇನ್ನೂ ಪಳಗಬೇಕಾಗಿದೆ. ಲೇಖಕನಿಗೆ ಎಲ್ಲಿ ಆಡುನುಡಿ, ಎಲ್ಲಿ ಗ್ರಾಮ್ಯ ಭಾಷೆ, ಎಲ್ಲಿ ಶಿಷ್ಟ ಭಾಷೆ ಬಳಸಬೇಕೆಂಬ ಸ್ಪಷ್ಟ ಕಲ್ಪನೆಯಿರಬೇಕು. ಯಾವುದನ್ನು ಆವರಣ ಚಿಪ್ಪೆಯೊಳಗೆ ಕೊಡಬೇಕು ಯಾವುದನ್ನು ಕೊಡಬಾರದು ಎಂಬ ಸಾಮಾನ್ಯ ಅರಿವು ಲೇಖಕನಿಗಿರಬೇಕು. ಕನ್ನಡ ಎಂ. ಎ. ಪದವೀಧರರಾದ ಈ ಲೇಖಕರು ಹೆಕ್ಕಡ, ಆಕ್ರುಂಧನ, ಪತಿವೃತೆ ಎಂದು ಮೊದಲಾಗಿ ತಪ್ಪು ಪ್ರಯೋಗ ಮಾಡಿರುವುದು ವಿಷಾದನೀಯ. ಈ ಕಾದಂಬರಿಯ ತಂತ್ರವನ್ನು 'ನಾಟ್ಯ ಕಲೆಯ ಸ್ವಪ್ನತಂತ್ರ' ಎಂದು ಸಿದ್ಧಲಿಂಗ ಪಟ್ಟಣಶೆಟ್ಟರಂಥ ವಿಮರ್ಶಕರು ಮುನ್ನುಡಿಯಲ್ಲಿ ಕರೆದಿರುವುದು ಆಶ್ಚರ್ಯ ! ಹೊಸಬರಿಗೆ ಪ್ರೋತ್ಸಾಹಿಸಬೇಕು ನಿಜ ! ಆದರೆ ಹೀಗೆ ಹಿಗ್ಗಾಮುಗ್ಗಾ ಹೊಗಳುವುದು ಆತ್ಮೀಯತೆಗೆ, ವಿಶ್ವಾಸಕ್ಕೆ ತಮ್ಮನ್ನು ತಾವು ಮಾರಿಕೊಂಡಂತೆ. ಇದರಿಂದ ಬೆಳೆಯಬೇಕಾದ ಲೇಖಕನಿಗೆ ಪೆಟ್ಟು. ಈಗಾಗಲೆ ತಿಳಿಸಿರುವ ಕುಂದು ಕೊರತೆಗಳನ್ನು ನೀಗಿಕೊಂಡು ಈ ಲೇಖಕರು ಇನ್ನೂ ಉತ್ತಮ ಕೃತಿಗಳನ್ನು ನೀಡಲಿ ಎಂದು ಹಾರೈಸೋಣ.

ವ್ಯವಸ್ಥೆ : ಪಾ. ಸಂಜೀವ ಬೋಳಾರ:

ವ್ಯವಸ್ಥೆಯ ವಿರುದ್ಧ ಸೆಟೆದು ನಿಂತವನನ್ನು ವ್ಯವಸ್ಥೆ ಹೇಗೆ ನುಂಗಿ ನೊಣೆದು ಜೀರ್ಣಿಸಿಕೊಳ್ಳುತ್ತದೆಂಬುದನ್ನು ಚಿತ್ರಿಸಿರುವ ಕಾದಂಬರಿ. ಕಾದಂಬರಿಯ ಪ್ರಥ

ಮಾರ್ಗದಲ್ಲಿ ಕೋದಂಡಪ್ಪ ಮತ್ತು ಮೈಥಿಲಿಯರ ಪ್ರೇಮ ಸಹಜ ಸುಂದರವಾಗಿ ವಿಕಸಿತಗೊಳ್ಳುತ್ತದೆ. ಆದರೆ ವ್ಯವಸ್ಥೆಯ ಕ್ರೂರ ಕಬಂಧ ಬಾಹು ಆ ಎಳೆಯ ಪ್ರೇಮಿಗಳನ್ನು ನಿರ್ದಯವಾಗಿ ಬೇರ್ಪಡಿಸುತ್ತದೆ. ಪ್ರೇಮವಂಚಿತನಾದ ಕೋದಂಡಪ್ಪನ ಮುಂದಿನ ಬದುಕಿನಲ್ಲಿ ವ್ಯವಸ್ಥೆಯ ವಿರುದ್ಧ ತಿರುಗಿಬೀಳುವ ಯಾವ ಪ್ರಯತ್ನವೂ ಇಲ್ಲ. ಅವನ ಮಾನವೀಯತೆಯ ಆದರ್ಶಗಳ ಜಾಗದಲ್ಲಿ ಧೂರ್ತತನ ತುಂಬಿಕೊಳ್ಳು ತ್ತದೆ. ಈ ಎಲ್ಲವೂ ಸಹಜ ಸುಂದರವಾಗಿ ಚಿತ್ರಿತವಾಗಿರುವ ಈ ಕಾದಂಬರಿಯಲ್ಲಿ ಇನ್ನಷ್ಟು ನಯಗಾರಿಕೆ ಕಲಾಕೌಶಲ್ಯ ಇದ್ದಿದ್ದರೆ ಚೆನ್ನಾಗಿರುತಿತ್ತು. ಕಾಲೇಜಿನಿಂದ ಹೊರ ದೂಡಲ್ಪಟ್ಟ ಕೋದಂಡಪ್ಪನಿಗೆ ಅಪರಿಚಿತನಾದ ವಿನಾಯಕ ನೆರವಾಗುವುದು ಅಸಹಜ ವೆನಿಸುತ್ತದೆ. ಹಾಗೆಯೆ ತಾನು ಮದುವೆಯಾಗಲಿರುವ ಹೆಣ್ಣು ಮತ್ತೊಬ್ಬನಲ್ಲಿ ಅನುರಕ್ತಳಾಗಿದ್ದಾಳೆಂದು ತಿಳಿದೂ, ಅವಳು ಪ್ರೇಮಿಯ ಹಿಂದೆ ಓಡಿ ಹೋದ ಮೇಲೂ ಅವಳನ್ನು ಹಿಡಿದು ತಂದು ಮದುವೆಯಾಗುವ ಇನ್ಸ್‌ಪೆಕ್ಟರ್ ಚಂದ್ರ ಶೇಖರನಂಥವರು ಸಮಾಜದಲ್ಲಿ ಅಪರೂಪ. ಇಂತಹ ಒಂದೆರಡು ಗೌಣವಾದ ಲೋಪಗಳನ್ನು ಬಿಟ್ಟರೆ ಇದೊಂದು ಒಳ್ಳೆಯ ಕಾದಂಬರಿ. ಕಾಲೇಜಿನ ವಾತಾವರಣ, ಅಲ್ಲಿಯ ಅಧ್ಯಾಪಕರ, ವಿದ್ಯಾರ್ಥಿಗಳ ನಡವಳಿಕೆಗಳು ಸಹಜ ಸುಂದರವಾಗಿವೆ. ವಿದ್ಯಾಕ್ಷೇತ್ರದಲ್ಲಿನ ರಾಜಕೀಯ ವಾಸ್ತವತೆಯ ಚಿತ್ರಣದಂತಿದೆ. ವರ್ತಮಾನದೊಂದಿಗೆ ಭೂತಕಾಲದ ಘಟನೆಗಳು ನೆನಪಿನೋಪಾದಿಯಲ್ಲಿ ಕೋದಂಡಪ್ಪನ ಮನೋರಂಗದಲ್ಲಿ ಹಾಯ್ದು ಹೋಗುವ ರೀತಿ, ತಂತ್ರ ಸಹಜವಾಗಿ ಬಂದಿದೆ. ಕಾದಂಬರಿ ದುರಂತವಾಗು ವುದು ಅನಿವಾರ್ಯವಾಗೇನಿರಲಿಲ್ಲ. ಕೋದಂಡಪ್ಪನ ಗೆಳೆಯನಾಗಿ ಹಿತೈಷಿಯಾಗಿ ವಾಸ್ತವವಾದಿಯಾಗಿ ವ್ಯವಸ್ಥೆಯ 'ಪ್ರವಾಹಕ್ಕೆ ಎದುರು ಒಂಟಿ ದೋಣಿಯ ಪಯಣ ತುಂಬ ಅಪಾಯ' ಎಂದು ಹೇಳುವ ವಿಜಯ ಅನೇಕ ಕಡೆಗಳಲ್ಲಿ ಅಜಯನಾಗಿ ಬಿಡುತ್ತಾನೆ. ಹಾಗೇ 'ಆಘೂತ' ಎಂಬಂತಹ ಅಶುದ್ಧ ಪ್ರಯೋಗಗಳು ಕಾಣಿಸಿ ಕೊಳ್ಳುತ್ತವೆ ಇವುಗಳ ಜೊತೆಗೆ ಮುದ್ರಾರಾಕ್ಷಸನ ಹಾವಳಿ ಬೇರೆ. ಈ ನ್ಯೂನತೆಗಳ ಕಡೆಗೂ ಲೇಖಕರು ಗಮನ ಕೊಟ್ಟಿದ್ದರೆ ಕಾದಂಬರಿಗೆ ಇನ್ನೂ ಹೆಚ್ಚಿನ ಕಳೆ ಬರುತ್ತಿತ್ತು ಬೆಲೆ ಬರುತ್ತಿತ್ತು.

ಹದ್ದು : ನಾ. ಮೊಗಸಾಲೆ

ಈ ಕಾದಂಬರಿ ಕನಸಿನ ಪ್ರಸ್ತಾಪದಿಂದ ಪ್ರಾರಂಭವಾಗಿ ಕನಸಿನ ಪ್ರಸ್ತಾಪದೊಂದಿಗೆ ಮುಕ್ತಾಯವಾಗುತ್ತದೆ. ಸಾಂಕೇತಿಕವಾದ -ಈ ಕನಸುಗಳು ಅರ್ಥಪೂರ್ಣವಾಗಿವೆ. ಮೊದಲ ಕನಸಿನಲ್ಲಿ ಅಕ್ಕನ ಊರಿನ ಕೃಷ್ಣಶಾಸ್ತ್ರಿ ಗಳ ಮಗಳು ಜಾನಕಿ ತನಗೆ ದಕ್ಕದೆ ಹೋಗಬಹುದಾದ ಸೂಚನೆಯಿದ್ದರೆ ಕೊನೆಯಲ್ಲಿ ಬರುವ ಕನಸಿನಲ್ಲಿ ತಾನು ಊರಿನಲ್ಲಿಯೆ ಉಳಿದರೆ ಏನಾಗಬಹುದೊ ಎಂಬ ಭಯ ಕನಸಿನ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಈ ಕಾದಂಬರಿಯಲ್ಲಿ ಜೈನರವಳಾದ ಪಟೇಲರ ಮಗಳು ವಿಜಯ ಮತ್ತು ಹೊಲೆಯರ ಕಿನ್ನಿಗ' ಕೃಷ್ಣಶಾಸ್ತ್ರಿಗಳ ಮಗಳು ಜಾನಕಿ

ಮತ್ತು ಮನೆಯ ಆಳು ಶೂದ್ರ ಮಾಲಿಂಗ ಮತ್ತು ಕಥಾ ನಾಯಕನಾದ ವಿಶ್ವನಾಥ ಮತ್ತು ಕಿಲಿಸ್ತರ ಗಾಬ್ರುವಿನ ಮಗಳು ಲಿಲ್ಲಿಯರ ಕಾಮ ಪ್ರೇಮ ಪ್ರಕರಣಗಳು ಬರುತ್ತವೆ. ಇವರೆಲ್ಲರೂ ಜಾತಿಯಲ್ಲಿ ಮತ್ತು ಅಂತಸ್ತಿನಲ್ಲಿ ಬೇರೆ ಬೇರೆ ವರ್ಗಕ್ಕೆ ಸೇರಿದವರು. ಇದರಿಂದ ಕಾಮ ನಿಸರ್ಗ ಸಹಜವಾದದ್ದು ಅದಕ್ಕೆ ಜಾತಿ ಭೇದಗಳ ಅಂತಸ್ತಿನ ಕಟ್ಟುಪಾಡಿಲ್ಲ ಎಂಬುದು ವೇದ್ಯವಾಗುತ್ತದೆ. ಇದನ್ನು ಹೇಳ ಬೇಕೆಂಬುದೇ ಲೇಖಕರ ಉದ್ದೇಶ. ಅದು ಯಶಸ್ವಿಯಾಗಿದೆ. ಈ ಕಾದಂಬರಿಯಲ್ಲಿನ ಪಾತ್ರಗಳ ಬಾಯಲ್ಲಿ ಬರುವ ಮಾತುಗಳು ಆ ಪ್ರಸಂಗಗಳಿಗೆ ಸಹಜವಾಗಿದ್ದರೂ ಧ್ವನಿಯುಕ್ತವಾಗಿ ಮತ್ತೊಂದು ಅರ್ಥವನ್ನು ವ್ಯಂಜಿಸುತ್ತವೆ. ಕಾದಂಬರಿಯ ಆರಂಭ ದಲ್ಲಿ ಬರುವ ನಾಗರ -ಹಾವು ಕಾಮಕ್ಕೆ ಸಂಕೇತವಾಗುವಂತೆಯೇ ಕೃಷ್ಣಶಾಸ್ತ್ರಿಗಳ ಕರು ಸೀತೆಯನ್ನು ಹಿಡಿದಿರಬಹುದಾದ ಹುಲಿ, ಆ ಸತ್ತ ಕರು ಸೀತೆಯನ್ನು ಕುಕ್ಕಿ ಕುಕ್ಕಿ ತಿನ್ನುವ ಹದ್ದುಗಳೂ ಕಾಮಕ್ಕೆ ಸಂಕೇತವಾಗುತ್ತವೆ. ಆದರೆ ಇವು ಹಾವಿನ ಸಂಕೇತ ದಷ್ಟು ಪರಿಣಾಮಕಾರಿಯಾಗಿಲ್ಲ ಎನಿಸುತ್ತದೆ. 'ಘಟನೆಗಳಿಗೆ ಕಾರಣವಾಗುವ ಪಾತ್ರ ಗಳ ಮನೋ ವಿಶ್ಲೇಷಣೆ ತಾನು ಮಾಡಿಲ್ಲ. ನಡವಳಿಕೆ ಹೊರಗಿನವರಿಗೆ ಕಾಣುವಷ್ಟು ಮಾತ್ರ ನಿರೂಪಿಸಿದ್ದೇನೆ.' ಎಂದು ಲೇಖಕರು ಹೇಳಿದರೂ ಕೃಷ್ಣಶಾಸ್ತ್ರಿಗಳ, ವಿಶ್ವ ನಾಥನ ಮತ್ತು ಶಂಕರರಾಯರ ಪಾತ್ರಗಳಲ್ಲಿ ಮನೋವಿಶ್ಲೇಷಣೆಯಿದೆ. ಈ ವಿಶ್ಲೇಷಣೆ ಜಾನಕಿಯ ಪಾತ್ರದಲ್ಲಿಲ್ಲದಿರುವುದು ಒಂದು ಕೊರತೆ. ಜಾನಕಿ ಮಾಲಿಂಗನ ಜೊತೆ ಓಡಿ ಹೋಗುವುದನ್ನು ಅವಳ ಹೊರಗಿನ ನಡವಳಿಕೆಯಿಂದ ಸಮರ್ಥಿಸುವುದು ಕಷ್ಟ. ಮಾಲಿಂಗ ಮತ್ತು ಜಾನಕಿಯ ನಡುವೆ ಅಂತಹ ಸಂಬಂಧ ಇದ್ದಿರಬಹುದೆಂಬ ವಿವರ ಅಲ್ಲಲ್ಲಿ ಸೂಚ್ಯವಾಗಿ ಬಂದರೂ ಅವಳು ವಿಶ್ವನಾಥನೊಡನೆ ನಡೆದುಕೊಂಡ ರೀತಿಯಿಂದಾಗಿ ಅವಳು ಮಾಲಿಂಗನೊಡನೆ ಓಡಿ ಹೋದುದನ್ನು ಸಮರ್ಥಿಸ ಲಾಗುವುದಿಲ್ಲ. ಈ ನಿಟ್ಟಿನಿಂದ ನೋಡಿದಾಗ ಅಂತರಂಗ ವಿಶ್ಲೇಷಣೆಯಿದ್ದಿದ್ದರೆ ಆ ಪಾತ್ರಕ್ಕೆ ನ್ಯಾಯ ದೊರಕುತ್ತಿತ್ತು. ಪಾತ್ರಗಳ ಹೊರಗಿನ ನಡವಳಿಕೆಯ ಚಿತ್ರಣ ಕೊಡುವುದರಲ್ಲಿಯೂ, ಕೃಷ್ಣಶಾಸ್ತ್ರಿಗಳ ವಿಚಾರದಲ್ಲಿ ಲೇಖಕರು ಸ್ವಲ್ಪ ಎಚ್ಚರತಪ್ಪಿದಂತಿದೆ. ನಾಗಬನದಲ್ಲಿ ಪಟೇಲರ ಮಗಳು ವಿಜಯ ಮತ್ತು ಕಿನ್ನಿಗ ಕಾಮಕೇಳಿ ನಿರತರಾಗಿದ್ದು ಶಾಸ್ತ್ರಿಗಳ ಆಗಮನದಿಂದಾಗಿ ರಸಭಂಗವಾದಾಗ 'ಯಾರು ಶಾಸ್ತ್ರಿಗಳೆ ? ಇದೇನು ಈ ಹೊತ್ತಿಗೆ ಕಾಡಿನಲ್ಲಿ ?' ಎಂದು ವಿಜಯ ಕೇಳಿದಾಗ ಮತ್ತು ಅಂದೇ ಮಧ್ಯಾಹ್ನ ಪಟೇಲರ ಉಗ್ರಾಣಿ ಶಾಸ್ತ್ರಿಗಳನ್ನು ಕರೆಯಲು ಬಂದಾಗ ತಪ್ಪಿತಸ್ಥರಲ್ಲದ ಅವರು ಸಣ್ಣಗೆ ನಡುಗಬೇಕಿರಲಿಲ್ಲ. ಇದೊಂದು ಸಣ್ಣ ಲೋಪವನ್ನು ಬಿಟ್ಟರೆ ಇದು ಅಚ್ಚುಕಟ್ಟಾಗಿ ನೇಯ್ದ ಕಾದಂಬರಿ. ಕಾದಂಬರಿ ಎನ್ನುವುದಕ್ಕಿಂತ ಹೆಚ್ಚಾಗಿ ನೀಳ್ಗತೆ ಎಂದರೆ ಹೆಚ್ಚು ಸಮಂಜಸವಾಗಬಹುದು. ಹೆಣ್ಣು ಗಂಡಿನ ಸಮಸ್ಯೆಯ ಜೊತೆಗೆ ದಕ್ಷಿಣ ಕನ್ನಡ ಜಿಲ್ಲೆಯ ಹಳ್ಳಿಗಾಡಿನ ಜೀವನದ ಚಿತ್ರಣವೂ ಇಲ್ಲಿದೆ. ಸುಮಾರು ಎಂಟು ವರ್ಷಗಳ ಹಿಂದೆ ಬರೆದಿದ್ದ ಕಾದಂಬರಿಯನ್ನು ಪರಿಷ್ಕರಿಸಿ ಪ್ರಕಟಿಸುತ್ತಿರುವುದಾಗಿ ಲೇಖಕರು ಹೇಳಿಕೊಂಡಿದ್ದಾರೆ. ಕಾದಂಬರಿಯ ಅಚ್ಚುಕಟ್ಟುತನಕ್ಕೆ ಇದೂ ಒಂದು ಕಾರಣವೆನ್ನಬಹುದು.

**ಜೀತದ ಜೀವ : ತ.ರಾ.ಸು.**

ನೂತನ ಮುದ್ರಣ ಹೊಂದಿರುವ 'ಜೀತದ ಜೀವ' ಕಾದಂಬರಿ ರಚನೆಯಲ್ಲಿ ಸಿದ್ಧ ಹಸ್ತರಾದ ತ.ರಾ.ಸು. ಅವರ ಕಾದಂಬರಿ. ಪ್ರತಿಯೊಬ್ಬ ಮನುಷ್ಯನೂ ಪ್ರಧಾನವಾದ ಒಂದು ರಾಗದ ಆಳಾಗಿರುತ್ತಾನೆಂಬ ಅರ್ಥದಲ್ಲಿ ಈ ಕಾದಂಬರಿಗೆ 'ಜೀತದ ಜೀವ' ಎಂಬ ಹೆಸರಿಟ್ಟಿರುವುದಾಗಿ ತ.ರಾ.ಸು. ಹೇಳಿದ್ದಾರೆ. ಈ ಅರ್ಥಕ್ಕಿಂತ ಹೆಚ್ಚಾಗಿ ಅಪ್ಪ ಮಾಡಿದ ಸಾಲದ ತೀರುವೆಗಾಗಿ ಸಾಹುಕಾರ ವೀರಭದ್ರಯ್ಯನ ಮನೆಗೆ ಆಳಾಗಿ ಬಂದ ಬಡಪಾಲನ ಮಗ ಹಾಲುಗೆನ್ನೆ ಮಾಸದ ಹನ್ನೆರಡು ವರ್ಷದ ಓಬನ ದುಃಖಮಯ ಜೀತದ ಬದುಕೇ ಪ್ರಧಾನವಾಗಿ ಆ ಅರ್ಥದಲ್ಲಿಯೆ ಕಾದಂಬರಿಯ ಶೀರ್ಷಿಕೆ ಅರ್ಥಪೂರ್ಣವಾಗುತ್ತದೆ. ಓಬನ ಪ್ರವೇಶದೊಂದಿಗೆ ಅದುವರೆಗೂ ನೆಮ್ಮದಿಯಿಂದಿದ್ದ ವೀರಭದ್ರಯ್ಯನ ಸಂಸಾರ ಛಿದ್ರವಾಗುತ್ತದೆ. ವೀರಭದ್ರಯ್ಯನ ಹೆಂಡತಿ ನೀಲಮ್ಮ ಮತ್ತು ಓಬ ಒಂದು ಪಕ್ಷವಾಗಿಯೂ ವೀರಭದ್ರಯ್ಯ ಮತ್ತು ಅವನ ಮನೆಯ ಅಡಿಗೆಯ ಆಳು ಶಾಂತವೀರ ತಮಗರಿವಿಲ್ಲದೆಯೇ ಮತ್ತೊಂದು ಪಕ್ಷವಾಗಿಯೂ ಗುಂಪಾಗುತ್ತಾರೆ. ಮಕ್ಕಳಿಲ್ಲದ, ಮಕ್ಕಳನ್ನು ಪಡೆಯಲಾರದ ನೀಲಮ್ಮ ಸಹಜವಾಗಿಯೆ ಪುತ್ರವಾತ್ಸಲ್ಯವನ್ನು ಓಬನ ಮೇಲೆ ತೋರುತ್ತಾಳೆ. ಅದುವರೆಗೆ ಅಖಂಡವಾದ ಪತ್ನೀ ಪ್ರೇಮವನ್ನು ಪಡೆದ ವೀರಭದ್ರಯ್ಯ ಈಗ ಅದಕ್ಕೆ ಓಬನಿಂದ ಚ್ಯುತಿ ಬಂದುದರಿಂದ ವ್ಯಗ್ರನಾಗುತ್ತಾನೆ. ಹೀನ ಸಂಸ್ಕಾರದ ಮತ್ತು ಹೀನ ಅಭಿರುಚಿಯ ಶಾಂತವೀರ ಓಬನ ಮೇಲೆ ಅಧಿಕಾರ ಚಲಾಯಿಸಲು ಹೋಗಿ ಮೊದಲಿಗೇ ನೀಲಮ್ಮನಿಂದ ಅವಮಾನಿತನಾಗಿ ಓಬನ ಮೇಲೆ ದ್ವೇಷ ಸಾಧಿಸುತ್ತಾನೆ. ಕಾರಣಾಂತರದಿಂದ ನೀಲಮ್ಮ ತೌರುಮನೆಗೆ ಹೋಗಿದ್ದಾಗ ಆಕೆಯ ಮೇಲಿನ ದ್ವೇಷ ಮತ್ತು ಸಿಟ್ಟಿನಿಂದ ವೀರಭದ್ರಯ್ಯ ಎದುರು ಮನೆಗೆ ಬಂದು ಬಿಡಾರ ಹೂಡಿದ್ದ ನಾಟಕ ಮಂಡಳಿಯ ನಟಿ ಶಾಂತಾದೇವಿಯ ಸಹವಾಸ ಮಾಡುತ್ತಾನೆ. ಮರುಕ್ಷಣದಲ್ಲೇ ತನ್ನ ತಪ್ಪಿನ ಅರಿವಾಗುತ್ತದೆ ಅವನಿಗೆ. ಆದರೆ ಕಾಲ ಮಿಂಚಿರುತ್ತದೆ. ಓಬ ಇವರ ಕ್ರೂರ ಹಿಂಸೆಯನ್ನು ತಾಳಲಾರದೆ ಓಡಿ ಹೋಗಿರುತ್ತಾನೆ. ವೀರಭದ್ರಯ್ಯನಿಗೆ ಹೃದಯ ಸ್ಥಂಬನವಾಗುತ್ತದೆ. ವೀರಭದ್ರಯ್ಯನ ಮರಣ ಅನಿವಾರ್ಯವಾಗಿರಲಿಲ್ಲ. ವಾತ್ಸಲ್ಯ, ಪ್ರೇಮ, ದ್ವೇಷ ಈ ಭಾವನೆಗಳನ್ನು ಅತಿಯಾಗಿ ಲಂಬಿಸಿದಂತೆ ವಿಚಾರವಂತ ಓದುಗನಿಗೆ ಅನ್ನಿಸುತ್ತದೆ. ರೋಚಕವಾಗಿ ಕಥಾನಿರೂಪಣೆ ಮಾಡಬಲ್ಲ ತ.ರಾ.ಸು. ಭಾವುಕತೆಯಿಂದ ಲೋಕರೂಢಿಯ ಮತ್ತು ಗಾದೆ ಮಾತುಗಳನ್ನು ಪರಿಣಾಮಕಾರಿಯಾಗಿ ಬಳಸುತ್ತಾ ಸನ್ನಿವೇಶ ನಿರ್ಮಾಣ ಮಾಡುವಲ್ಲಿ ಅದರ ಪರಿಣಾಮ ಗಾಢವಾಗಿ ಆಗುವಂತಹ ಸೂಕ್ತ ಉಪಮಾನಗಳನ್ನು ಕೊಡುತ್ತಾ ಹೆಂಗರುಳು ಮಿಡಿಯುವಂತೆ ಸರಾಗವಾಗಿ ಕಥೆಯನ್ನು ಹೇಳಿಕೊಂಡು ಹೋಗಿದ್ದಾರೆ.

ಅಂತರ : ಪಿ. ವಿ. ನಾರಾಯಣ

ಹಳ್ಳಿಯ ಮುಖವನ್ನೇ ಕಂಡರಿಯದ ಒಂಬತ್ತು ವರ್ಷದ ಬಾಲಕ ಸೀನು ಹಳ್ಳಿಯಲ್ಲಿ ನಾಲ್ಕು ವರ್ಷಗಳನ್ನು ಕಳೆಯಬೇಕಾಗಿ ಬಂದಾಗ ಅವನಲ್ಲಿ ಹುಟ್ಟುವ ಕುತೂಹಲ, ವಿಸ್ಮಯ, ಬೆರಗುಗಳ ಚಿತ್ರಣ 'ಅಂತರ' ಕಾದಂಬರಿಯಲ್ಲಿದೆ. ಈ ಕುತೂಹಲ, ವಿಸ್ಮಯ, ಬೆರಗುಗಳು ಬಾಲಕ ಸೀನುವಿನ ಮುಗ್ಧ ಮನಸ್ಸಿನ ಮೂಲಕ ದಾಖಲಾಗುತ್ತವೆ. ದಾಖಲಾಗುತ್ತ ದಾಖಲಾಗುತ್ತಲೆ ನಗರದ ಮತ್ತು ಹಳ್ಳಿಯ ಬದುಕಿನ ಅಂತರ ಸ್ಫುಟವಾಗುತ್ತದೆ. ನಾಲ್ಕು ವರ್ಷಗಳ ನಂತರ ನಗರಕ್ಕೆ ಬಂದ ಸೀನುವಿಗೆ ಸಾವಿರದಲ್ಲೊಬ್ಬ ತಾನಾಗಿ ಅಸ್ತಿತ್ವವಿಲ್ಲದಂತಾಗಿ ಅನಾಥನಂತಾಗಿ ಪ್ರೀತಿ ವಾತ್ಸಲ್ಯಗಳ ಸೆಲೆಯೂಡುವ ಹಳ್ಳಿಯ ಬದುಕು ಕೈಬೀಸಿ ಕರೆದಂತಾಗುತ್ತದೆ. ಕಾದಂಬರಿಯ ನಿರೂಪಣಾ ತಂತ್ರ ಕನ್ನಡ ಸಾರಸ್ವತ ಲೋಕಕ್ಕೆ ಪರಿಚಿತವಾದ ತಂತ್ರ. ಗಿಡ ಮರಗಳು, ಪೈರು ಪಚ್ಚೆಯ ಬಗೆಗಿನ ಕುತೂಹಲ, ಕತ್ತಲು ಹಾವುಗಳ ಬಗೆಗಿನ ಭೀತಿ, ಸಾವಿನ ಬಗೆಗಿನ ವಿಸ್ಮಯ, ಬೇರೆಯವರು ತನ್ನನ್ನು ಕೈಲಾಗದವರು ಚಿಕ್ಕವನು ಎಂದಾಗ ತನ್ನಲ್ಲಿ ಉಂಟಾಗುವ ಹೀನಾಯ, ಹರಕೆಯ ತೀರುವೆಗಾಗಿ ಎಂಜಲೆಲೆಯ ಮೇಲೆ ಹೊರಳುವ ಭಕ್ತರನ್ನು ಕಂಡಾಗ ಬೆರಗು, ಊರದೇವಿ ಕರಿಯಮ್ಮನಿಗೆ ಕೋಣನ ಬಲಿ ಕೊಡುವುದನ್ನು ಕಂಡಾಗ ಭಯ ಮಿಶ್ರಿತ ಅಸಹ್ಯ ಇವೆಲ್ಲವುಗಳೂ ಸೀನುವಿನ ಮೇಲೆ ತಮ್ಮದೇ ಆದ ಪ್ರಭಾವವನ್ನು ಬೀರುತ್ತದೆ. ಬಾಲ ಸಹಜವಾದ ಮರ ಹತ್ತುವುದು, ಈಜು ಕಲಿಯುವುದು, ಮುತ್ತಗದೆಲೆ ಕುಯ್ಯಲು ಹೋದಾಗ ಕಾಫಿ ಮಾಡುವುದು, ಬೀಡಿ ಸೇದುವುದು, ಹೆಣ್ಣಿನ ಬಗೆಗಿನ ಕುತೂಹಲ, ಹಣದ ಬಗೆಗಿನ ವ್ಯಾಮೋಹ ಮತ್ತು ಅದಕ್ಕಾಗಿ ಸುಳ್ಳು ಹೇಳುವುದು ಇವು ಅವನ ಅನುಭವದ ಗಡಿಗಳನ್ನು ವಿಸ್ತರಿಸುತ್ತವೆ. ಶಾಲೆಯಲ್ಲಿ ತಾನು ಉತ್ತರಿಸಲಾಗದ ಪ್ರಶ್ನೆಗೆ ಉತ್ತರಿಸಿದ ಮಾದಿಗರ ಝುಂಜನಿಂದ ಕಪಾಲಕ್ಕೆ ಏಟು ತಿಂದಾಗ ಸೋದರ ಮಾವ ಕಾಶೀಪತಯ್ಯ ಮಾಡುವ ಆರ್ಭಟ, ಅರಳೀ ಮರದ ರೆಂಬೆಗಳನ್ನು ಕಡಿಯುತ್ತಿದ್ದ ಕುರುಬರ ಬಸವನ ಮೇಲೆ ಹರಿಹಾಯ್ದು ಹಳ್ಳಿಯ ಸಮಸ್ತರು ಪ್ರಾಣಿಗಳನ್ನು ದೇವಿಗೆ ಬಲಿ ಕೊಡುವಾಗ ಅದು ಸಹಜವೋ ಎಂಬಂತೆ ವರ್ತಿಸುವುದು, ಶಾಲೆಯನ್ನು ಕಟ್ಟಿಸಿ ಕೊಟ್ಟ ಲಕ್ಷ್ಮೀಕಾಂತ ಶೆಟ್ಟಿಯನ್ನು ಸಾರ್ವಜನಿಕವಾಗಿ ಸಮಾರಂಭದಲ್ಲಿ ಹೊಗಳಿ ವೈಯಕ್ತಿಕವಾಗಿ ತೆಗಳುವ ಮಾವನ ನಡತೆ ಈ ಎಲ್ಲ ಭಾವಗಳ ವಿಚಾರಗಳ ತಾಕಲಾಟದೊಂದಿಗೇ ಸೀನುವಿನ ವ್ಯಕ್ತಿತ್ವ ವಿಕಾಸಗೊಳ್ಳುತ್ತಾ ಹೋಗುತ್ತದೆ. ಸೀನುವಿನ ಮುಗ್ಧ ಮನಸ್ಸಿನ ಸರಳ ತರ್ಕಕ್ಕೆ ನಿಲುಕದ ಆದರೆ ಆಚರಣೆಯಲ್ಲಿರುವ ಅನೇಕ ವಿಚಾರಗಳು, ಘಟನೆಗಳು ಅವನನ್ನು ಗೊಂದಲಕ್ಕೆ, ದ್ವಂದ್ವಕ್ಕೆ ದೂಡುತ್ತವೆ. ಸೀನುವಿನ ಮನೋ ಮಂದಿರದಲ್ಲಿ ದಾಖಲಾದ ಈ ಎಲ್ಲ ವಿಚಾರಗಳಲ್ಲಿ, ಘಟನೆಗಳಲ್ಲಿ ಹಿಂದು ಮುಂದಾದರೆ ಅಥವಾ ಒಂದೆರಡನ್ನು ಬಿಟ್ಟರೆ ಕಾದಂಬರಿಗೆ ಏನೂ ಭಾದಕವಿಲ್ಲ. ಅಂದರೆ ಅವು ಕಾದಂಬರಿಯ ಅನಿವಾರ್ಯ ಅವಿಭಾಜ್ಯ ಭಾಗವಾಗಿ ಬಂದಿಲ್ಲ. ಗ್ರಾಮೀಣ ಸಂಸ್ಕೃತಿಯನ್ನು ಪರಿಚಯಿಸಬೇಕೆಂಬ ಲೇಖಕರ ಹುಮ್ಮಸ್ಸಿನಿಂದ ಬಂದಂತೆ

ಕಾಣುತ್ತದೆ. ಸಂಕೀರ್ಣವಾದ ಗ್ರಾಮೀಣ ಸಂಸ್ಕೃತಿಯ ಚಿತ್ರಣ ಲೇಖಕರ ಆಶಯ ವಿರಬಹುದಾದರೂ ಮಧ್ಯಮವರ್ಗದ ಬ್ರಾಹ್ಮಣ ಸಮಾಜದ ಚಿತ್ರಣ ಕಾದಂಬರಿ ಯಲ್ಲಿ ಕಂಡು ಬರುತ್ತದೆ. ನಗರ ಜೀವನ ಮತ್ತು ಹಳ್ಳಿಯ ಬದುಕಿನ ಅಂತರವನ್ನು ತೋರುವ ಈ ಕಾದಂಬರಿ ಬರಗೂರು ರಾಮಚಂದ್ರಪ್ಪನವರು 'ಹೇಳುವಂತೆ ಜನಪ್ರಿಯ ಪಟ್ಟುಗಳಿಂದ ಪಾರಾದ ನಾಟಕೀಯ ತಿರುವುಗಳಿಂದ ಮುಕ್ತವಾದ ನೇರ ನಿರೂಪಣೆಯ ಪ್ರಾಮಾಣಿಕ ಕೃತಿ.' ಎಲ್. ಎಸ್. ಶೇಷಗಿರಿರಾಯರು ಹೇಳುವಂತೆ '......ನಿರಾಡಂಬರವಾದ ಸುಭಗವಾದ ಭಾಷೆಯ ಈ ಕಾದಂಬರಿಯನ್ನು ಓದು ವುದರಲ್ಲಿ ಲಾಭವುಂಟು, ಸಂತೋಷವುಂಟು."

—ಹು. ಕಾ. ಜಯದೇವ್

ಉಮಾಪತಿ: ಆದ್ಯರಾಮಾಚಾರ್ಯ

'ಉಮಾಪತಿ'ಯೆಂಬ ಅರೆಹುಚ್ಚ ದಿನೇಶ್ ಎಂಬ ಪೋಲೀಸ್ ಆಫೀಸರನಿಗೆ ಪಾಕೀಸ್ತಾನೀ ಗೂಢಚಾರಿಯನ್ನು ಹಿಡಿದು ಕೊಡುವ ನಿಗೂಢ ಕಥೆಯುಳ್ಳ ಕಾದಂಬರಿ ಇದು. ಸಾಮಾನ್ಯವಾಗಿ ಪತ್ತೇದಾರಿ ಕಾದಂಬರಿಗಳಲ್ಲಿ ಬರುವ ಮಸಾಲೆಗಳೆಲ್ಲವೂ ಇದರಲ್ಲಿವೆ. ಫೈಟಿಂಗಂತೆ, ನಿಗೂಢ ಕೊಲೆಗಳಂತೆ, ಮಾದಕ ಹೆಣ್ಣುಗಳಂತೆ ಇತ್ಯಾದಿ ಇತ್ಯಾದಿ. ಇಲ್ಲಿ ಬರುವ ಉಮಾಪತಿ ಪಾತ್ರ ತುಂಬ ಕುತೂಹಲಕಾರಿಯಾಗಿದ್ದು ರಾಜಕುಮಾರ ಅಭಿನಯಿಸಿದ 'ಭಲೇಹುಚ್ಚ' ಚಿತ್ರದ ನಾಯಕ ಪಾತ್ರವನ್ನು ನೆನಪಿಗೆ ತರುತ್ತದೆ. ಕಾದಂಬರಿ ಕೊನೆಯವರೆಗೂ ಓದುಗರ ಆಸಕ್ತಿಯನ್ನು ಕೆರಳಿಸುತ್ತದೆ. ಆದರೆ ಉಮಾಪತಿ ಅಷ್ಟೆಲ್ಲಾ ಬುದ್ಧಿವಂತನಿದ್ದೂ ಆ ರೀತಿ ಹುಚ್ಚನಂತೆ ಅಭಿನಯಿ ಸಲು ಕಾರಣವೇನೆಂದು ಮಾತ್ರ ಕೊನೆಯವರೆಗೂ ತಿಳಿಯುವುದಿಲ್ಲ.

ಕೇರಳಸಿಂಹ : ಕೆ. ಎಂ. ಫಣಿಕ್ಕರ್ ಅನು : ಎಂ. ನಾರಾಯಣಮೂರ್ತಿ

ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದ ಕೆ. ಎಂ. ಫಣಿಕ್ಕರ್ ಅವರ ಮಲಯಾಳೀ ಜನಪ್ರಿಯ ಕಾದಂಬರಿಯ ಅನುವಾದವಿದು. ಪಳಶ್ಶಿರಾಜ ತಂಬೂರಾನ ಕೇರಳವರ್ಮ ತಮ್ಮ ವೀರನಾಯರು, ನಂಬಿಯಾರು ಮತ್ತು ಕುರಿಚ್ಯರೊಂದಿಗೆ ಸೇರಿ ಇಂಗ್ಲಿಷರ ವಿರುದ್ಧ ಹೋರಾಡಿದ ತಂಡವೇ ಇದರ ವಸ್ತು, ಬ್ರಿಟಿಷರ ಮಹಾನ್‌ಯೋಧ ವೆಲ್ಲೆಸ್ಲಿಯ ತಂತ್ರಕ್ಕೆ ಬಲಿಯಾಗಿ ರಾಜಧಾನಿ ಯಿಂದ ವಂಚಿತರಾಗಬೇಕಾದ ವೀರರು ಅರಣ್ಯವಾಸಿಗಳಾಗಿ, ಅದನ್ನೇ ತಮ್ಮ ಹೋರಾಟದ ಕೇಂದ್ರವನ್ನಾಗಿ ಮಾಡಿಕೊಳ್ಳಬೇಕಾಗಿ ಬಂದಿತು. ಮೈಸೂರು ಮಹಾ ರಾಣಿಯಾಗಿದ್ದ ಲಕ್ಷಮ್ಮಣ್ಣಿಯವರೂ ಈ ವೀರರಿಗೆ ಸಹಾಯ ನೀಡುತ್ತಾರೆ. ಇಂಥ ಸ್ವಾತಂತ್ರ ಸಂಗ್ರಾಮದ ಉಜ್ವಲ ಚಿತ್ರಣ ತುಂಬ ಮನದುಂಬುವಂತೆ ಇಲ್ಲಿ ಮೂಡಿ ಬಂದಿದೆ. ವಾಸ್ತವಿಕ ಘಟನೆಗಳೊಂದಿಗೆ ಸೇರಿದ ಲೇಖಕರ ಕಾಲ್ಪನಿಕ ಘಟನೆಗಳು

ವ್ಯಕ್ತಿಗಳು, ತೀವ್ರತರವಾದ ಪ್ರಣಯ ಘಟನೆಗಳು – ಇವೆಲ್ಲ ಈ ಕಾದಂಬರಿಯ ಓದನ್ನು ಕುತೂಹಲಕಾರಗೊಳಿಸುತ್ತವೆ. ಅನುವಾದ ತುಂಬ ಸುಂದರವಾಗಿದೆ.

ಸುಧಾಮಯಿ : ವೆಲ್ಲಾಲ ಸತ್ಯಂ

ತುಂಬ ಆಸಕ್ತಿಯನ್ನು ಕೆರಳಿಸುವ ಬಗೆಬಗೆಯ ಪಾತ್ರಗಳನ್ನುಳ್ಳ ಕಾದಂಬರಿ ಇದು. ಆದರ್ಶ ಪ್ರೇಮದಲ್ಲಿ ನಂಬಿಕೆಯಿಟ್ಟುಕೊಂಡು ತನ್ನ ಪ್ರಿಯಕರನಿಗಾಗಿ ತಹತಹಿಸುವ ಮೇನಕಾ, ಅನುಕೂಲಕ್ಕೊಬ್ಬ, ಲಾಭಕ್ಕೊಬ್ಬನನ್ನು ಹೊಂದಿ, ಅವರ ದೌರ್ಬಲ್ಯಗಳನ್ನು ಹಿಡಿದು ಸೂತ್ರದ ಗೊಂಬೆಗಳಂತೆ ಕುಣಿಸುವ ಕಾಂಚನಾ, ಪ್ರೀತಿಯ ಆಳವನ್ನರಿಯದೆ ಕುರುಡನಾಗುವ ಆನಂದ – ಇಂಥ ಪಾತ್ರಗಳು ಸಾಲಾಗಿ ಬರುತ್ತವೆ. ರೋಮಾಂಚಕ ಘಟನೆಗಳಿವೆ. ಸ್ವಾರಸ್ಯಮಯ ಕಥೆಯಿದೆ. ಇಷ್ಟಿದ್ದೂ ನಿರೂಪ ಣೆಯ ಬಿಗಿ ಸಾಲದೆಂಬುವುದು ಮಾತ್ರ ನಿಜ. ಸ್ವಂತಮಗ ಕಪಟಿಯೆಂದು ಕಂಡುಬಂದಾಗ ನಿರ್ದಾಕ್ಷಿಣ್ಯವಾಗಿ ಶಿಕ್ಷೆ ವಿಧಿಸುವ ಸೈತಾನ್ ಶಿವಪ್ರಸಾದನ'ನಡೆ ಖಾತ್ರಿಯಾಗುವುದಿಲ್ಲ. ಕುತಂತ್ರಿಯಾದ ಜಯದೇವ ಮಗಳಂತಿದ್ದ ಅಬಲೆಯನ್ನು ಕೆಡಿಸುವ ದೃಶ್ಯವೂ ಹೀಗೇ ಆಗಿದೆ. ಆದರೂ ಕಾದಂಬರಿ ಓದಿಸಿಕೊಂಡು ಹೋಗುತ್ತದೆಂಬ ಮಾತನ್ನು ಒಪ್ಪಬೇಕು.

ನಾನೇ ಪತ್ತೇದಾರಪ್ರಕಾಶ್ ! : ಮಾ.ಭೀ.ಶೇ.

ನಗುಹಳ್ಳಿ ಎಸ್ಟೇಟಿನಲ್ಲಿ ಒಂದರ ಮೇಲೊಂದರಂತೆ ಕೊಲೆಗಳಾಗಿ ಪೋಲೀಸ್ ಇಲಾಖೆಗೇ ದೊಡ್ಡ ಸಮಸ್ಯೆಯಾದಾಗ ಪ್ರಕಾಶನೆಂಬ ಖಾಸಗಿ ಪತ್ತೇದಾರ ಇದನ್ನೆಲ್ಲ ಶೋಧಿಸಿ ನೆರವಾಗುತ್ತಾನೆ. ಮಧ್ಯದಲ್ಲಿ ಆಸಕ್ತಿ ಕೆರಳಿಸುವ ಹೆಣ್ಣುಗಳು, ಅದರಲ್ಲಿ ನಿಗೂಢವಾಗಿ ಆಗುವ ಶಾರದಳ ಕೊಲೆ, ಶ್ರೀಕಾಂತನ ಕೊಲೆ, ಶಾಮರಾಯನ ನಟನೆ, ಕೊಲೆಗಳನ್ನು ಮುಚ್ಚಿಡುವಲ್ಲಿ ಅನುಸರಿಸುವ ಕುತಂತ್ರಗಳು – ಹೀಗೆ ಅನೇಕ ಮಸಾಲೆಗಳಿವೆ. ಅನೇಕ ಕಡೆ ಇದು ಸಿನಿಮಾ ಸ್ಕ್ರಿಪ್ಟ್‌ದಂತೇ ಇದೆ. ಒಮ್ಮೆ ಓದ ಬಹುದಾದ ಕಾದಂಬರಿ.

ರಂಭಾ : ಆದ್ಯರಾಮಾಚಾರ್ಯ

ಐತಿಹಾಸಿಕ ಕಾದಂಬರಿಯಿದು. ತುರ್ಕಸ್ಥಾನದಿಂದ ಭಾರತಕ್ಕೆ ಬಂದ ಸಾಹಸಿ ಯೊಬ್ಬ ಇಲ್ಲಿ ಮಲ್ಲಯುದ್ಧ ಪರಿಣತನಾಗಿ ಮುಂದೆ ಆದಿಲ್‌ಶಾಹಿ ಸಾಮ್ರಾಜ್ಯ ಸ್ಥಾಪಕನಾಗುವುದು ಈ ಕಾದಂಬರಿಯ ವಸ್ತು. ರಾಜತಂತ್ರ, ಧರ್ಮ ಸಾಮರಸ್ಯ, ತೀವ್ರ ಪ್ರಣಯ, ಶಿಲ್ಪಕಲಾ ಸಾಮರಸ್ಯ ಮುಂತಾದ ಅನೇಕ ಅಂಶಗಳು ಕಾದಂಬರಿ ಯಿಡೀ ಮಿನುಗುತ್ತವೆ ; ಬಾದಶಹನ ಹಿಂದೂ ಪತ್ನೀಯಾದ ರಂಭಾರಾಣಿಯ

ಪಾತ್ರವಂತೂ ತುಂಬ ಅಪರೂಪದ ಚಿತ್ರಣವಾಗಿ ಮೂಡಿದೆ. ಇಬ್ಬರ ದಾಂಪತ್ಯ ಸಾಮರಸ್ಯವೇ ಈ ಕಾದಂಬರಿಯ ಜೀವನಾಡಿಯೆಂದರೂ ಸಲ್ಲುತ್ತದೆ.

ಅಜಿತ : ವಿಜಯ ಸಾಸನೂರ

ಈ ಕೃತಿಯ ಲೇಖಕರು ಸ್ವಯಂ ಪೋಲಿಸ್ ಅಧಿಕಾರಿಯಾಗಿರುವುದರಿಂದ ನಮ್ಮ ಯಾವುದೇ ಪತ್ತೇದಾರಿ ಕೃತಿಗಿಲ್ಲದ ಅಥೆಂಟಿಸಿಟಿ ಅಜಿತಕ್ಕಿದೆಯೆಂದು ಧಾರಾಳ ವಾಗಿ ಹೇಳಬಹುದು. ಇಲ್ಲಿ ಬರುವ ನಾನಾ ಗುಣ ಬಣ್ಣ ವೇಷಗಳ ಜನರು ಕೇವಲ ಸಾಹಿತ್ಯಕ್ಕೆ ಹುಟ್ಟಿದವರಾಗಿರದೆ ರಕ್ತ ಮಾಂಸ ತುಂಬಿದ ನಿಜವಾದ ಜನಗಳಾಗಿರು ವುದರಿಂದ ಇವರನ್ನು ನಾವೆಲ್ಲೋ ನೋಡಿದ ಹಾಗಿದೆಯಲ್ಲಾ ಎಂದು ಅನ್ನಿಸುತ್ತದೆ. ಇವರು ಸಾಕಾರಗೊಳ್ಳುವ ಹಿನ್ನೆಲೆಯ ವಾತಾವರಣ, ಅದನ್ನು ನಿರೂಪಿಸುವ ಶೈಲಿ ಎಷ್ಟು ಮನೋಜ್ಞವಾಗಿವೆಯೆಂದರೆ ಈ ಕೃತಿಯ ಪ್ರತಿಯೊಂದು ಘಟನೆ ಕಣ್ಣೆದುರು ತನ್ನೆಲ್ಲ ಬಣ್ಣಗಳೊಂದಿಗೆ ಪ್ರತ್ಯಕ್ಷವಾಗಿ ಬಿಡುತ್ತದೆ. ಅಜಿತ, ಈ ಕಾದಂಬರಿಯ ರಮ್ಯ ನಾಯಕ. ತನ್ನ ಜೀವವನ್ನೇ ರಿಸ್ಕಿಗೊಡ್ಡಿ ದ್ರೋಹಿಗಳ ತಂತ್ರಕ್ಕೆ ಪ್ರತಿತಂತ್ರ ಹೊಡುತ್ತ, ಹಂತಹಂತದಲ್ಲಿ ಅವರನ್ನಾಕ್ರಮಿಸುತ್ತ ಕೊನೆಗೆ ಜಯಶಾಲಿಯಾಗಿ ಓದುಗರ ಮೈನವಿರೇಳಿಸುವ ಈತ ಈ ಬಗೆಯ ಕಾದಂಬರಿಗಳಿಗೆ ಮಾದರಿ ಪಾತ್ರ ವಾಗಿದ್ದಾನೆ. ಕನ್ನಡದಲ್ಲಿ ಸ್ವತಂತ್ರ ಪತ್ತೇದಾರಿ ಕಾದಂಬರಿಗಳನ್ನು ಬರೆಯುವುದು ಸಾಧ್ಯವೆಂದು ಪ್ರಥಮಬಾರಿ ತೋರಿಸಿದ್ದಕ್ಕಾಗಿ ಈ ಲೇಖಕರನ್ನು ಅಭಿನಂದಿಸ ಬೇಕಾಗಿದೆ.

ನಾಣಿ-ನಂದಿನಿ : ಕೆ. ಪದ್ಮನಾಭರಾವ್

ಇದೊಂದು ಸಾಮಾಜಿಕ ಕಾದಂಬರಿ ; ನಾಲ್ಕು ದಶಕಗಳ ಹಿನ್ನೆಲೆಯನ್ನುಳ್ಳ ಈ ಕೃತಿಯಲ್ಲಿ ಸ್ವಾತಂತ್ರ್ಯಾನಂತರದ ನಿರಾಸೆ, ಹತಾಶೆಗಳ ಚಿತ್ರಣವಿದೆ. ಲಂಚದ ಲಾಲಸೆಯಲ್ಲಿರುವ ಅಧಿಕಾರಿಗಳು, ಕಾರ್ಮಿಕರನ್ನು ಶೋಷಿಸುವ ಉದ್ಯಮಿಗಳು, ಲಾಭಕ್ಕಾಗಿ ಮಾನವೀಯತೆಯನ್ನೇ ತ್ಯಜಿಸಿದ ವರ್ತಕರು-ಇವರೆಲ್ಲ ಸೇರಿ ಬದುಕನ್ನು ಹೇಗೆ ಅಸಹನೀಯವಾಗಿ ಮಾಡಿದ್ದಾರೆಂಬುದನ್ನು ಮಾರ್ಮಿಕವಾಗಿ ಚಿತ್ರಿಸಲಾಗಿದೆ. ಇಲ್ಲಿ ಬರುವ ಹಳ್ಳಿ ನಗರಗಳ ಜೀವನ ಸಹಜತೆಯಿಂದ ಕೂಡಿದೆ.

ಎಲ್ಲಿ ಸಲ್ಲುವರು ? : ಬಿ. ಎಸ್. ಸ್ವಾಮಿ

ನಪುಂಸಕರನ್ನು ಕುರಿತ ಸಾಮಾಜಿಕ ಕಾದಂಬರಿಯಿದು. ನಪುಂಸಕತೆಯ ವೈದ್ಯ ಕೀಯ, ಧಾರ್ಮಿಕ ಕಾರಣಗಳನ್ನು ಅಲ್ಲಲ್ಲಿ ವಿವೇಚಿಸಿದ್ದಾರೆ. ಇಡೀ ಸಮಸ್ಯೆಯನ್ನು ವೈಜ್ಞಾನಿಕವಾಗಿ ನೋಡಿದ್ದೊಂದು ಇದರ ವಿಶೇಷವೆಂದು ಹೇಳಬೇಕು. ನಿರೂಪಣೆ

ಅಲ್ಲಲ್ಲಿ ಅಚ್ಚುಕಟ್ಟಾಗಿದೆ. ಸಂಭಾಷಣೆಗಳ ಅತಿಯನ್ನು ಕಡಮೆ ಮಾಡಬಹುದಿತ್ತೆಂದೂ ಅನ್ನಿಸುತ್ತದೆ. ಭಿನ್ನ ಜಾಡಿನ ಕಾದಂಬರಿಯಾದ್ದರಿಂದ ಇದನ್ನು ಒಮ್ಮೆ ಓದಬಹುದು.

ರಾಧೇಯ : ರಣಜಿತ್ ದೇಸಾಯಿ, ಅನು : ಆದ್ಯರಾಮಾಚಾರ್ಯ

ಮಹಾರಾಷ್ಟ್ರದ ಖ್ಯಾತ ಲೇಖಕರಾದ ರಣಜಿತ್ ದೇಸಾಯಿ ಅವರು ಮರಾಠಿಯಲ್ಲಿ ಬರೆದ ಕೃತಿಯ ಕನ್ನಡ ಅನುವಾದವಿದು. ದಾನಶೂರನಾಗಿ, ಕಲಿಯಾಗಿ ಎಲ್ಲಕ್ಕಿಂತ ಹೆಚ್ಚಾಗಿ ದುರಂತ ನಾಯಕನಾಗಿ ಮಹಾಭಾರತದ ಕರ್ಣ ಎಲ್ಲ ಭಾರತೀಯರ ಮನಸ್ಸುಗಳಲ್ಲಿ ಅಚ್ಚಳಿಯದೆ ಸ್ಥಾನ ಕಲ್ಪಿಸಿಕೊಂಡ ಮಹಾನ್ ಪಾತ್ರವಾಗಿದ್ದಾನೆ.

ಕರ್ಣ ಎಲ್ಲರಿಗಿಂತ ಮೊದಲು ಜನಿಸಿದವನು. ಅವನ ಪಾತ್ರ ಭಾರತದುದ್ದಕ್ಕೂ ಬರುತ್ತದೆ. ಅದಕ್ಕಾಗಿಯೇ ಇಡೀ ಭಾರತ ಕರ್ಣರಸಾಯನವೆಂದು ಪಂಪ ಸಾರಿದ. ಅನಂತರ ಮಹಾಭಾರತದಲ್ಲಿ ಅನೇಕ ಕವಿಗಳು ಕರ್ಣನ ಬಗೆಗೆ ಹೆಚ್ಚಿನ ಸಹಾನುಭೂತಿಯಿಂದ ಬರೆದಿದ್ದಾರೆ. ಪ್ರಸ್ತುತ ಕೃತಿ ಪೌರಾಣಿಕ ಕಾದಂಬರಿಯಾದರೂ ಕರ್ಣನ ವ್ಯಕ್ತಿತ್ವವನ್ನು ಉದಾತ್ತೀಕರಿಸಲು ಲೇಖಕರು ಕೆಲವು ಸ್ವಾತಂತ್ರ್ಯಗಳನ್ನು ಬಳಸಿಕೊಂಡಿದ್ದಾರೆ. ಕಥೆ ನಮಗೆ ತಿಳಿದದ್ದೇ. ಸಂಧಾನಕ್ಕಾಗಿ ಕೃಷ್ಣನು ಕರ್ಣನನ್ನು ಸಂಧಿಸಿ, ಅವನ ಜನ್ಮವೃತ್ತಾಂತವನ್ನು ಹೇಳುವಲ್ಲಿನಿಂದ ಕಥೆ ಸುರುವಾಗಿ ಕೊನೆಗೆ ಕರ್ಣನ ಸಾವಿನಲ್ಲಿ ಪರ್ಯವಸಾನ ಹೊಂದುತ್ತದೆ. ಕಥೆ ಕರ್ಣನದಾದರೂ ಇಡೀ ಮಹಾಭಾರತದ ಕಥೆ ಇದರಲ್ಲಿದೆ. ಆದರೆ ಕರ್ಣನ ವ್ಯಕ್ತಿತ್ವ ನಿರೂಪಣೆಯೇ ಕಾದಂಬರಿಕಾರರ ಮುಖ್ಯ ಗುರಿಯಾಗಿರುವುದರಿಂದ ಅವನ ಖಾಸಗಿ ಜೀವನದ ಪರಿಚಯವೂ ಉಂಟಾಗಿ ಕರ್ಣ ಇಲ್ಲಿ ಹೆಚ್ಚು ಆತ್ಮೀಯನಾದ ಪಾತ್ರವಾಗುತ್ತಾನೆ. ನಮ್ಮ ಮನಸ್ಸಿನಲ್ಲಿರುವ ಕರ್ಣನಿಗಿಂತ ಇಲ್ಲಿಯ ಕರ್ಣ ಕೆಲವು ರೀತಿಗಳಲ್ಲಿ ಭಿನ್ನನಾಗೂ ಇದ್ದಾನೆ. ದ್ರೌಪದಿಯ ಮೇಲೆ ಅವನಿಗೆ ಆಸೆ ಇದ್ದಿತೆಂದು ಇಲ್ಲಿ ವರ್ಣಿತವಾಗಿದೆ. ಆದ್ದರಿಂದಲೇ ವಸ್ತ್ರಾಪಹರಣವನ್ನು ಅವನು ವಿರೋಧಿಸಲಿಲ್ಲವೆಂಬರ್ಥದ ಘಟನೆಯೊಂದಿದೆ. ವಸ್ತ್ರಾಪಹರಣದ ಘಟನೆ ಮಾತ್ರ ತುಂಬ ಮಾರ್ಮಿಕವಾಗಿ, ಆಧುನಿಕರಿಗೆ ಖಾತ್ರಿಯಾಗುವ ರೀತಿಯಲ್ಲಿ ಚಿತ್ರಿತವಾದದ್ದು ಈ ಕಾದಂಬರಿಯ ವಿಶೇಷ ಎಂದು ಹೇಳಬಹುದು. ಅದು ನಡೆದಾಗ ಕೃಷ್ಣನು ಅಕ್ಷಯಾಂಬರ ಕೊಟ್ಟನೆಂದು ನಾವು ಕೇಳಿದ್ದ ಕಥೆ. ಆದರೆ ಇಲ್ಲಿ ಕೃಷ್ಣ ಪ್ರತ್ಯಕ್ಷನಾಗಿ ಬಿಡುತ್ತಾನೆ. ಕೃಷ್ಣನ ಅಸಾಧಾರಣ ವ್ಯಕ್ತಿತ್ವದ ಎದುರಿಗೆ ಪಾಪಕಾರ್ಯ ಮಾಡದ ದುರ್ಯೋಧನ ಲಜ್ಜಿತನಾದನೆಂದು ವರ್ಣಿತವಾಗಿದೆ. ಈ ಕಾದಂಬರಿಯ ಕೊನೆಯಲ್ಲಿ ಕುಂತಿ ಬಂದು ಪಾಂಡವರನ್ನು ಕಾಪಾಡು ಎಂದು ಹೇಳುವಲ್ಲಿ ಕರ್ಣ ಕೇಳುವ

ಪ್ರಶ್ನೆಗಳು ತುಂಬ ಮಾರ್ಮಿಕವಾಗಿವೆ. ಒಟ್ಟಿನಲ್ಲಿ ವಿಭಿನ್ನ ಅನುಭವ ಕೊಡುವ ಕಾದಂಬರಿ ಸ್ವಾಗತಾರ್ಹವಾಗಿದೆಯೆಂದು ಹೇಳಲೇಬೇಕು. ಅನುವಾದಕರು ಬರೀ ಮರಾಠಿಯ ರಾಧೇಯನನ್ನೇ ಇಟ್ಟುಕೊಳ್ಳದೆ ಕನ್ನಡದ ಪಂಪ, ಕುಮಾರವ್ಯಾಸ ಕವಿಗಳ ಕರ್ಣದೀಕ್ಷೆಯನ್ನು ಇಲ್ಲಿಯ ರಾಧೇಯನಿಗೆ ಕೊಟ್ಟುದರಿಂದ ಅನುವಾದ ಅನನ್ಯವಾಗಿದೆ.

ದೂರದ ಸಂಬಂಧ : ಬಿ. ಎಸ್. ಸ್ವಾಮಿ

ಭಾರತೀಯ ಮಹಿಳೆಯೊಬ್ಬಳು ವಿದೇಶಿಯನ ಪ್ರೇಮಜಾಲಕ್ಕೆ ಸಿಕ್ಕಿ ಸ್ಥಳೀಯ ಸಂಬಂಧವನ್ನು ನಿರಾಕರಿಸಿ ಮದುವೆಯಾಗುತ್ತಾಳೆ. ಆತನ ದೇಶಕ್ಕೆ ಹೋಗಿ ಒಂದು ಮಗುವನ್ನೂ ಪಡೆಯುತ್ತಾಳೆ. ಅಪಘಾತದಲ್ಲಿ ಆತ ಸತ್ತಾಗ ತಿರುಗಿ ಭಾರತಕ್ಕೆ ಬಂದು ಮಗನೊಂದಿಗೆ ಇರುತ್ತಾಳೆ. ಇದು ಕಾದಂಬರಿಯ ಕಥೆ, ನಿರೂಪಣೆ ಅಲ್ಲಲ್ಲಿ ಸೊಗಸಾಗಿದ್ದು ಓದಿಸಿಕೊಂಡು ಹೋಗುತ್ತದೆ.

ಸಾರ್ಥಕತೆ : ಸಿ. ರಾಮಸ್ವಾಮಿ

ತುಂಬ ವಿಭಿನ್ನವಾದ ಕಾದಂಬರಿಯಿದು. ಕಾದಂಬರಿಯ ತಂತ್ರ, ಶೈಲಿ, ಮುಂತಾದ ಯಾವ ಸಡಗರವೂ ಇಲ್ಲದೆ ಕುತೂಹಲವನ್ನು ಕಾಯ್ದುಕೊಂಡು ಹೋಗುವ ವಿಶಿಷ್ಟ ಕೃತಿಯಿದು. ಮುಖ್ಯಕಥೆ ಶೀಲಾ, ರಾಮುವಿನ ಸುತ್ತ ಹೆಣೆಯಲ್ಪಟ್ಟಿದ್ದರೂ ಪೂರಕವಾಗಿ ಬಗೆಬಗೆಯ ಪಾತ್ರಗಳು ಬರುತ್ತವೆ. ಕಥೆಯ ಹಂದರದಲ್ಲಿ ಎರಡು ಭಾಗ ಗಳಿದ್ದು ಮೊದಲನೆಯ ಭಾಗದಲ್ಲಿ ಶೀಲಾ ಪರಾಜಿತಳಾಗಿ ಹೆಣ್ಣು ಬೊಂಬೆಯಾಗುವ ಚಿತ್ರಣವಿದ್ದರೆ, ಎರಡನೆಯ ಭಾಗದಲ್ಲಿ ಆಕೆ ಮಾನಸಿಕ ಆಸ್ಪತ್ರೆ ಸೇರಿ ಹೊಸ ಜನ್ಮ ಪಡೆದು ಜ್ಞಾನನಿಧಿಯಾಗಿ ಪರೋಪಕಾರದಲ್ಲಿ ಸಾರ್ಥಕತೆ ಕಾಣುವ ಚಿತ್ರಣವಿದೆ. ಈ ಮಧ್ಯೆ ವೈದ್ಯಕೀಯ ಚಿಕಿತ್ಸೆಗಳು, ಮನೋವಿಕಲತೆಗಳು ತುಂಬ ಕುತೂಹಲಕಾರಿ ಯಾಗಿ ಬರುತ್ತವೆ. ಈ ಲೇಖಕರು ಸ್ವಯಂ ವೈದ್ಯರಾಗಿದ್ದು "ವೈದ್ಯಕೀಯ ವಿವರಣೆಗಳ ಹಂದರದ ಮೇಲೆ ಹೊಸ ಕಥಾವಸ್ತುವನ್ನು ಸೊಂಪಾಗಿ ಹರಡಿರುವ ಲೇಖಕರ ವಿಶೇಷ ರೀತಿಯ ಜ್ಞಾನ ಪ್ರಚೋದಕವಾದ ಅನುಸಂಧಾನವಾದ, ಜ್ಞಾನ ಪೂರ್ಣವಾದ ಕೃತಿ ಇದು." ಏನಿಲ್ಲವೆಂದರೂ ಈ ಬಗೆಯ ಕಾದಂಬರಿ ಕನ್ನಡದಲ್ಲಿ ಇನ್ನಿಲ್ಲವೆಂದು ಹೇಳಬಹುದು.

ಸೀತೆ ರಾಮ ರಾವಣ : ಹೆಚ್. ವಿ. ಸಾವಿತ್ರಮ್ಮ

ರಾಮಾಯಣಗಳ ಭಾಗದಲ್ಲಿ ಫಣಿರಾಯ ತಿಣುಕುವಷ್ಟು ರಾಮಾಯಣಗಳು ಬಂದಿವೆ. ಅವುಗಳಿಗೆ ವಾಲ್ಮೀಕಿ ರಾಮಾಯಣವೇ ಮೂಲ ಆಕರ. ಈ ಕೃತಿಯ

ಲೇಖಕಿಯರೂ ಅದಕ್ಕೇ ಮೊರೆ ಹೋಗಿದ್ದಾರೆ. ಆದರೆ ನಾವು ಕೇಳಿದ್ದ ರಾಮಾಯಣಕ್ಕೂ ಈ ಕೃತಿಗೂ ವ್ಯತ್ಯಾಸವಿದೆ. ಕಾದಂಬರಿಯ ತಂತ್ರದಿಂದಾಗಿ ಯೋಅಥವಾ ಲೇಖಕಿಯರ ದೃಷ್ಟಿಕೋನದಿಂದಾಗಿಯೋ ಇಡೀ ರಾಮಾಯಣ ಒಂದು ಸುಂದರವಾದ ಕೌಟುಂಬಿಕ ಕಥೆಯಾಗಿ ಮಾರ್ಪಟ್ಟಿದೆ. ರಾಮನ ಸಾಂಸಾರಿಕ ಚಿತ್ರವಂತೂ ತುಂಬ ಹೃದ್ಯವಾಗಿದೆ. ಮೂಲ ಕೃತಿಗಿಂತ ಇಲ್ಲಿಯ ಸ್ತ್ರೀ ಪಾತ್ರಗಳು ನಮಗೆ ಹೆಚ್ಚು ಆತ್ಮೀಯವಾಗುತ್ತವೆ. ಅವರವರ ಒಳತೋಟಿಯನ್ನು ಸಹಜತೆಗೆ ಭಂಗ ಬರದಂತೆ ಚಿತ್ರಿಸುತ್ತ, ಇಡೀ ರಾಮಾಯಣವನ್ನು ನಮ್ಮ ನೆರೆಮನೆಯಲ್ಲಿ ನಡೆಯಿತೆಂಬಂತೆ ಚಿತ್ರಿಸಿರುವ ರೀತಿ ತುಂಬ ಆಹ್ಲಾದಕರವಾಗಿದೆ.

—ಸಿ.ಬಿ.ಕೆ.

ಂ ಂ ಂ ಂ ಂ

ಮಹಿಳೆಯರು ಬರೆದ ಕಾದಂಬರಿಗಳು

ಪ್ರತಿ ವರ್ಷಕ್ಕಿಂತ ಈ ವರ್ಷ ಮಹಿಳೆಯರ ಕಾದಂಬರಿಗಳ ಸಂಖ್ಯೆ ಕಡಿಮೆ. ಆದರೆ ಗುಣವೇನೂ ಹೆಚ್ಚಿಲ್ಲ. ಸಂಖ್ಯೆ ಕಡಮೆಯಾದದ್ದೇ ಗುಣಾತ್ಮಕ ಅಂಶವೆಂದುಕೊಳ್ಳಬೇಕಾಗಿದೆ. ಈ ವ್ಯತ್ಯಾಸವನ್ನು ಬಿಟ್ಟರೆ ಹೆಚ್ಚಿನ ಲೇಖಕಿಯರು ತಮ್ಮ ಬರವಣಿಗೆಯ ವಿಧಾನದಲ್ಲಾಗಲಿ, ಜೀವನವನ್ನು ನೋಡುವ ದೃಷ್ಟಿಯಲ್ಲಾಗಲೀ ಗುಣಾತ್ಮಕ ಬದಲಾವಣೆ ಮಾಡಿ ಕೊಂಡಿಲ್ಲ. ಪ್ರಬುದ್ಧ ದೃಷ್ಟಿಕೋನ, ಶೋಧನಾತ್ಮಕ ತುಡಿತಗಳಿಲ್ಲದೆ ಘಟನೆಗಳನ್ನು ತುರುಕಿ ಪುಟಸಂಖ್ಯೆ ಬೆಳೆಸುವ ವ್ರತವನ್ನಂತೂ ಪಾಲಿಸಿದ್ದಾರೆ. ಕಾದಂಬರಿ ಕ್ಷೇತ್ರಕ್ಕೆ ಹಳಬರಾದ ಲೇಖಕಿಯರು ಹಿಂದಿನ ಕೃತಿಗಳಿಗಿಂತ ಸ್ವಲ್ಪವೂ ಭಿನ್ನವಲ್ಲದ ಅದೇ ಹಳಸಲು ಬಡಿಸಿರುವುದಂತೂ ತುಂಬಾ ವಿಷಾದದ ವಿಷಯ. ವರ್ಷಕ್ಕೆ ನಾಲ್ಕೈದು ಕಾದಂಬರಿಗಳನ್ನಾದರೂ ಕೊಡುವ ಹೆಚ್. ಜಿ. ರಾಧಾದೇವಿ ಮತ್ತು ಸಾಯಿಸುತೆಯವರಿಗೆ ಈ ಮಾತು ಅನ್ವಯಿಸುತ್ತದೆ. ಬಹುಪಾಲು ಲೇಖಕಿಯರು —ಒಂದಿಬ್ಬರನ್ನು ಬಿಟ್ಟರೆ — ಸಾಂಸಾರಿಕ ಸಂಗತಿಗಳಲ್ಲೇ ಸುತ್ತುತ್ತಾರೆ. ಅದರಲ್ಲೂ ಅನುಭವದ ದಟ್ಟತೆ, ಬರವಣಿಗೆಯ ಸಾಂದ್ರತೆಗಳಿಲ್ಲದೆ ಹಳೆಯ ಜಾಡಗಿರುವುದೇ ಹೆಚ್ಚು. ಇನ್ನಾದರೂ ಸಾಹಿತ್ಯವನ್ನು ಒಂದು ಗಂಭೀರ ಕೃಷಿಯನ್ನಾಗಿಸಿಕೊಳ್ಳುವ ಅರಿವು ಇಂಥ ಲೇಖಕಿಯರಿಗೆ ಬರಬೇಕು. ಇಂಥ ಕಾಳಜಿಯ ಸೂಚನೆಗಳು ಈ ವರ್ಷ ಇಬ್ಬರು ಮೂವರು ಲೇಖಕಿಯರಲ್ಲಿ ಮಾತ್ರ ಕಂಡುಬರುತ್ತದೆ.

ಹೆಚ್. ಜಿ. ರಾಧಾದೇವಿಯುವರ 'ಒಲವಿನ ಸೌಧ' ಅವರ ಅನಿಸಿಕೆಗಳ ಅಸ್ಥಿ ಪಂಜರ. ಇಂಥ 'ಪಂಜರ'ಗಳಲ್ಲಿ ಅವರ ಅನೇಕ ಕಾದಂಬರಿಗಳ ಪಾತ್ರಗಳು ಸಿಕ್ಕಿ

ಕೊಂಡಿರುವಂತೆ ಇಲ್ಲಿಯೂ ಆಗಿದೆ. ಇದರ ಮೇಲೆ "ಶ್ರೀ ಲಕ್ಷ್ಮೀವೆಂಕಟೇಶನ ಕೃಪೆಯಿಂದ ಒಳ್ಳೆ ಸಾಹಿತ್ಯವನ್ನೇ ಕೊಡಲು ಪ್ರಯತ್ನಿಸುತ್ತೇನೆ" ಎಂಬ ಆಶ್ವಾಸನೆ. ಇದೇನೊ ಒಳ್ಳೆಯದೇ. ಆದರೆ ಈಡೇರಿದಾಗ ಮಾತ್ರ ಬೆಲೆ. ಈ ಕೃತಿಯ ಮಟ್ಟಿಗಂತೂ ಈ ಆಶ್ವಾಸನೆ ಸುಳ್ಳಾಗಿದೆ. ಮೇಲಾಗಿ "ನಾಸ್ತಿಕತೆಯ ವಿರುದ್ಧ ಗದಾಪ್ರಹಾರ ಮಾಡುವಂಥ ಸಾಹಿತ್ಯ ರಚಿಸಬೇಕೆಂದು" ಆಸೆ ಹೊತ್ತ ರಾಧಾ ದೇವಿಯವರು (ಮರೆತು ?) ಎಲ್ಲ ಓದುಗರ ಮೇಲೂ ಗದಾಪ್ರಹಾರ ಮಾಡು ತ್ತಿದ್ದಾರೆ.

ಆಸ್ತಿಕತೆ ಅಥವಾ ನಾಸ್ತಿಕತೆ – ಯಾವುದೇ ಆಗಲಿ ಬದುಕಿನ ಶೋಧನಾತ್ಮಕ ಸಾಧನವಾಗುವುದು ಬೇರೆ, ಒಣ ಪ್ರಚಾರದ ಪ್ರವೃತ್ತಿಯಾಗುವುದು ಬೇರೆ. ಎರಡನೇ ಮಾದರಿಯನ್ನು ಇಲ್ಲಿ ಕಾಣಬಹುದು. ಸಾಮಾನ್ಯ ಸರಳ ಸೂತ್ರಕ್ಕೆ ಪಾತ್ರಗಳನ್ನು ನೇತು ಹಾಕುವುದರಿಂದ ಇಂಥ ಒಣಕಲು ಮಾದರಿ ರೂಪುಗೊಂಡಿದೆ. ಈ ಕೃತಿಯಲ್ಲಿ ಬರುವ ಸುಂದರರಾಯರಿಗೆ ಯಥಾಪ್ರಕಾರ ತುಂಬಾ ಮಕ್ಕಳು. ಹೆಂಡತಿಗೆ ತುಂಬಾ ಖಾಯಿಲೆ. ಮಗಳು ಅಂಜಲಿಗೆ ವಯಸ್ಸಾದ ಶ್ರೀಮಂತ ನೊಬ್ಬನೊಂದಿಗೆ ಮದುವೆ, ಅದೂ ನಾಲ್ಕನೆ ಹೆಂಡತಿ. ಮೊದಲ ಮೂವರು ಸತ್ತ ಮೇಲೆ ಇವಳನ್ನು ಮದುವೆಯಾದದ್ದೊಂದೇ ವಿಶೇಷ. ಅಂಜಲಿ ವೆಂಕಟೇಶ್ವರನ ಭಕ್ತಳಾದ್ದರಿಂದ ಸಮಸ್ಯೆಗಳೆಲ್ಲ ಸುಗಮವಾಗಿ ಪರಿಹಾರವಾಗುತ್ತ ಹೋಗುತ್ತವೆ. ತನ್ನ ತಂಗಿ ನಳಿನಿಯ ಪ್ರಿಯತಮ ಕೇಶವ ವಂಚನೆಯ ಹಾದಿ ಹಿಡಿದಾಗ ಮದುವೆ ಮಾಡಿಸುವ ಹೊಣೆಯೂ ಅಂಜಲಿಯದು. ಇದು ಈಡೇರುವುದು "ವೆಂಕಟೇಶ್ವರನ ಕೃಪೆ"ಯಿಂದ. ಇನ್ನು ಇವಳಿಗೇ ಮಗುವಾಗದಿದ್ದಾಗ ಸಹಾಯಕ್ಕೆ ಬರುವವನೂ ಈ ತಿರುಪತಿ ವೆಂಕಟೇಶ್ವರನೇ. ಹೀಗೆ ಅವನ ಕೃಪಯಿಂದ ಕೃತಿ ಸುಖಾಂತವಾಗುತ್ತದೆ. ಇಷ್ಟು ಸರಳ ಹಾಗೂ ಒಣ ಪ್ರತಿಪಾದನೆಯ ವಿಧಾನದಿಂದ ಕೃತಿ ಸೊರಗಿ ಹೋಗಿ ಲೇಖಕಿಯ ಭಕ್ತಿಯ ನಕಲು ಮಾತ್ರ ಸಿಕ್ಕಿದಂತಾಗುತ್ತದೆ.

ದೇವರಿಗೆ ಗಂಟು ಬೀಳುವುದು ರಾಧಾದೇವಿಯವರ ಕೃತಿಗಳ ಒಂದು ಲಕ್ಷಣ ವಾದರೆ, ವೈಭವೋಪೇತ ವರ್ಣನೆ ಕೊಡುವ ಉತ್ಸಾಹ ಇನ್ನೊಂದು ಲಕ್ಷಣ. ಕೆಲವು ಕೃತಿಗಳಲ್ಲಿ ಬರುವ ವ್ಯಕ್ತಿ ಮತ್ತು ಮನೆಗಳ ಅಲಂಕಾರದ ವಿವರಗಳು ಉಕ್ಕುವ ರೀತಿ ಉತ್ಪ್ರೇಕ್ಷೆಗೆ ಉದಾಹರಣೆ. ಉತ್ಪ್ರೇಕ್ಷೆಯೂ ಕೃತಿಯ ಕೇಂದ್ರಕ್ಕೆ ದುಡಿಯುವ ಶೈಲಿ ಯಾಗಿ ರೂಪುಗೊಂಡಾಗ ಅದಕ್ಕೆ ಪ್ರಾಶಸ್ತ್ಯವಿರುತ್ತದೆ. ಹಾಗಾಗದೆ ಇದ್ದಾಗ ಒಂದು ಚಾಳಿಯಾಗುತ್ತದೆ. ರಾಧಾದೇವಿಯವರದು 'ಹೃದಯ ಹಾಡಿದ ರಾಗ' ಎಂಬ ಕೃತಿಯ ಮಟ್ಟಿಗಂತೂ ಚಾಳಿಯೇ ಆಗಿದೆ. ಚಾರ್ಲ್ಸ್ ಎಂಬ ಶ್ರೀಮಂತ ಯುವಕನ ಸುತ್ತ ಬೆಳೆಯುವ ಕಾದಂಬರಿಯಲ್ಲಿ ಇವರ ಉಡುಪು ಇತ್ಯಾದಿ ಅಲಂಕಾರ

ಗಳನ್ನು ವರ್ಣಿಸುವ ಕಾತರ ಅದೆಷ್ಟಿದೆಯೆಂದರೆ ಗಂಡಸಿಗೂ ಲಿಪ್‌ಸ್ಟಿಕ್ ಹಚ್ಚಿಸುತ್ತಾರೆ. ಕ್ರಿಸ್‌ಮಸ್ ಹಬ್ಬದ ಕಾರ್ಯಕ್ರಮ (ರಾಬರ್ಟ್ ಏರ್ಪಡಿಸಿದ್ದು) ವಿವರಗಳೂ ಹೀಗೆಯೇ. ಶ್ರೀಮಂತ ಬದುಕಿನ ಭವ್ಯತೆಯನ್ನು ವಿವರಿಸುತ್ತಲೇ ಕಾದಂಬರಿಯು ಪ್ರೇಮ ಪ್ರಕರಣದ ಸಾಮಾನ್ಯ ಸ್ತರಕ್ಕೆ ಬರುತ್ತದೆ. ಜೂಲಿ ಎಂಬ ಹಾಡುಗಾರ್ತಿಗೆ (ಆಕೆ ಬಡವಳು – ಪ್ರೇಮಕ್ಕೆ ಬಡವರಾದರೇನು ಶ್ರೀಮಂತರಾದರೇನು !) ಮನ ಸೋತ ಚಾರ್ಲಿ ಅವಳೊಂದಿಗೆ ವಿವಾಹವಾದಾಗ ಕೃತಿಯ ಕಾಲು ಸೋತು ನಿಲ್ಲುತ್ತದೆ. ಲಕ್ಷ್ಮೀವೆಂಕಟೇಶ್ವರನ ಕೃಪೆಯಿಂದ ಒಳ್ಳೆಯ ಸಾಹಿತ್ಯ ಕೊಡುವ ಆಸೆ ಇಟ್ಟುಕೊಂಡಿರುವ ಲೇಖಕಿ ಈ ಕೃತಿಯನ್ನು ತಪ್ಪು ಮುದ್ರಣದೊಂದಿಗೆ ಆತನಿಗೇ "ಅರ್ಪಣೆ" ಮಾಡಿದ್ದಾರೆ.

ವ್ಯಕ್ತಿ, ಉಡುಪು, ಮನೆ ಮತ್ತಿತರ ವರ್ಣನೆಗಳ ವೈಖರಿಯನ್ನು ಮೆರೆದಿರುವ ಇವರ ಇನ್ನೊಂದು ಕೃತಿ 'ಸ್ವಾತಿ ಹನಿ ಸಿಡಿದಾಗ'. ಚಲನಚಿತ್ರ ನಟಿಯೊಬ್ಬಳ ಕತೆಯಾದ್ದರಿಂದ ಈ ವರ್ಣನೆಗೆ ಸಹಜತೆಯೂ ಒದಗಿದೆ. ಹೊರನೋಟಕ್ಕೆ ಆಕರ್ಷಕ ಬದುಕಿನ ಪ್ರತೀಕದಂತೆ ಕಾಣುವ ನಟಿಯರ ಮನಸ್ಸನ್ನು ಅರ್ಥಮಾಡಿಕೊಳ್ಳುವ ಒಂದು ಸಣ್ಣ ಪ್ರಯತ್ನವಾಗಿ ಈ ಕೃತಿ ಪರವಾಗಿಲ್ಲ. ಅದೇ ಸಂದರ್ಭದಲ್ಲಿ ತಾರೆಯ Image ಬೆಳೆಸಲು ಹೂಡುವ ತಂತ್ರಗಳು, ಅವಳ ಯಾಂತ್ರಿಕ ಬದುಕಿನ ಕ್ಷಣಗಳು ದಾಖಲಾಗಿರುವುದು ಕೃತಿಗೆ ಪೂರಕವಾಗಿದೆ. ತಾರಾಮಣಿಗಳ ವೈಯಕ್ತಿಕ ಬದುಕೂ ಸಾರ್ವಜನಿಕವಾಗುವ ದುರಂತದ ಸೂಚನೆಯೂ ಇದೆ. ಆದರೆ ಈ ಅಂಶಗಳಿಗೆ ಸಾಂದ್ರತೆ ಒದಗುವ ಸನ್ನಿವೇಶಗಳ ಸೃಷ್ಟಿ ಆಗಿಲ್ಲವೆನ್ನಿಸುತ್ತದೆ. ತೀರಾ ಸಾಮಾನ್ಯವಾಗಿರುವ ಪ್ರೇಮ ಪ್ರಕರಣವನ್ನೇ ನಟಿಯ ಮಾನಸಿಕ ಅಭಿವ್ಯಕ್ತಿಯ ಸಾಧನವನ್ನಾಗಿ ಬಳಸಿಕೊಂಡಿರುವುದು ಮತ್ತು ಇದನ್ನು ಮೀರಿ ನಿಲ್ಲುವ ತಾತ್ವಿಕತೆಯೊಂದು ಕೃತಿಗೆ ಒದಗದೆ ಇರುವುದು ಇದಕ್ಕೆ ಕಾರಣವೆನ್ನಬಹುದು. ಆದರೂ ಆರೋಗ್ಯಕರ ಅನಿಸಿಕೆಯಂತೂ ಕೃತಿಯಲ್ಲಿದೆ.

ಯಥಾಪ್ರಕಾರ ಹೆಚ್. ಜಿ. ರಾಧಾದೇವಿಯವರು ತಮ್ಮ ಮತ್ತೊಂದು ಕಾದಂಬರಿ 'ಹೊಂಗಿರಣ ಹರಡಿತು'. ವಿನಲ್ಲೂ ವೈಭವ ವರ್ಣನೆಗಳಲ್ಲಿ ತಲ್ಲೀನರಾಗಿದ್ದಾರೆ. ಹಿಂದಿನ ಕಾದಂಬರಿಗಳಂತೆಯೇ ಮನೆ, ಉಡುಪು, ಪ್ರಸಾದನ ಸಾಮಗ್ರಿಗಳ ವರ್ಣರಂಜಿತ ವಿವರಗಳನ್ನು ಕೊಡಲು ಇಲ್ಲೂ ಅತ್ಯಾಸಕ್ತಿ ವಹಿಸಿದ್ದಾರೆ. ಕತೆಯ ಚೌಕಟ್ಟಂತೂ ಮಾಮೂಲಿ ಸಾಂಸಾರಿಕ. ಸುಂದರ್ ಮತ್ತು ಶಾಂತಿಯೆಂಬ ಪತಿ ಪತ್ನಿಯರ ನಡುವೆ ಹುಳಿ ಹಿಂಡುವ ಕೆಲಸ ನಡೆದು ಇವರು ಪ್ರತ್ಯೇಕವಾಗುತ್ತಾರೆ. ಹುಳಿ ಹಿಂಡುವ ಕೆಲಸ ಮಾಡುವವಳ ಹೆಸರು "ಮಧುರ" ಎಂದಿರುವುದು ವ್ಯಂಗ್ಯವೇ ಸರಿ. ನಾಮಕರಣದಲ್ಲಿ ಬಂದ ಧ್ವನಿ ಕೃತಿಯಲ್ಲಿ ಹಾಸು ಹೊಕ್ಕಾಗಿಲ್ಲ. ಸಿಡಿದ ಪತಿ ಪತ್ನಿ

ಯರು ಸುತ್ತಿ ಬಳಸಿ ಮತ್ತೆ ಒಂದಾಗುವುದರಲ್ಲಿ ಕಾದಂಬರಿ ಮುಕ್ತಾಯ. ಶಾಂತಿ ಮತ್ತು ಮಧುರಳ ವಿರುದ್ಧ ಸ್ವಭಾವಗಳ ಚಿತ್ರಣ ಪರವಾಗಿಲ್ಲ. ಸಾಮಾನ್ಯವಾಗಿ ಮಹಿಳೆಯರ ಕಾದಂಬರಿಗಳಲ್ಲಿರುವ ವಿರೋಧಿ ಸ್ವಭಾವಗಳು ಇಲ್ಲೂ ಬಂದಿವೆ. ಸೇಡು ಒಬ್ಬಳದಾದರೆ, ಸೌಜನ್ಯ ಸಜ್ಜನಿಕೆ ಇನ್ನೊಬ್ಬಳದು. ಒಬ್ಬಳು ಕೇಡು ಬಗೆದರೆ ಇನ್ನೊಬ್ಬಳು ಶಾಂತಿ ಸಮಾಧಾನದಿಂದ ಎಲ್ಲವನ್ನು ಸಹಿಸಿ ಕಡೆಗೆ ಯಶಸ್ಸು ಪಡೆಯುವ ಸಾಧ್ವಿ. ಇಂಥ ಸಿದ್ಧ ಚಿತ್ರಣ ಈ ಕೃತಿಯಲ್ಲಿ ಇದೆ.

ಈಗಾಗಲೇ ಸಾಕಷ್ಟು ಕಾದಂಬರಿಗಳಿಂದ ಪರಿಚಿತರಾಗಿರುವ ಉಷಾನವರತ್ನ ರಾಮ್ ಅವರ 'ಸಮರ್ಪಣೆ' ಹೊಸ ವಿಷಯವನ್ನೇನೂ ಕೆದಕದಿದ್ದರೂ ಸರಾಗವಾಗಿ ಕತೆ ಹೇಳಿಕೊಂಡು ಹೋಗುವ ವಿಧಾನವಿದೆ. ಸಾಮಾನ್ಯ ವಸ್ತುವಿನ ಸಾಮಾನ್ಯ ಓದುಗರ ಕಾದಂಬರಿಯಾದ 'ಸಮರ್ಪಣೆ'ಯ ನಾಯಕಿ ತ್ಯಾಗಮಯಿ. ತ್ಯಾಗ, ಪ್ರೇಮ, ಸೇಡುಗಳು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಹೊಸವೇನೂ ಅಲ್ಲ. ಆದರೆ ಅವುಗಳನ್ನು ಗ್ರಹಿಸುವ ಹಾಗೂ ದಾಖಲಿಸುವ ದೃಷ್ಟಿಯಲ್ಲಿ ವ್ಯತ್ಯಾಸವಾಗಲು ಸಾಧ್ಯವಿದೆ. ಸಾಮಾನ್ಯ ವಸ್ತುವಿಗೂ ಬೆಲೆಬರಲು ಸಾಧ್ಯವಿದೆ. ಈ ಕೃತಿಯಲ್ಲಿ ಅಂಥ 'ಅದ್ಭುತ'ವೇನೂ ಘಟಿಸಿಲ್ಲ. ತ್ಯಾಗ, ಪ್ರೇಮ, ಸೇಡುಗಳು ಮುಪ್ಪುರಿಗೊಂಡು ಸಾಮಾನ್ಯ ಹೆಣಿಗೆಯಲ್ಲಿ ಓದುಗರನ್ನು ಬಂಧಿಸಲು(ಸ್ಪಂದಿಸಲು?) ಪ್ರಯತ್ನಿಸಲಾಗಿದೆ. ಸರಳ ಎಂಬ ಬಡವರ ಹುಡುಗಿ ಬೇರೆ–ಕುಟುಂಬದ ಹೊಣೆ ಹೊತ್ತವಳು. ಉದ್ಯೋಗಸ್ಥೆಯಾದರೂ ಬಿಡುವಿನ ವೇಳೆಯಲ್ಲಿ ಬೇರೆಕಡೆ ಟೈಪಿಂಗ್ ಮಾಡಿ ದುಡಿಯುವ ಅನಿವಾರ್ಯತೆ. ಇದೇ ಅವಳ ತ್ಯಾಗ ಪ್ರೇಮಗಳ ತಾಣವಾಗುತ್ತದೆ. ಪ್ರೊಫೆಸರರೊಬ್ಬರ ಬರಹಗಳನ್ನು ಟೈಪಿಸಲು ಅವರ ಮನೆಗೆ ಹೋದ ಈಕೆಗೆ ಅವರ ಮೂಕ ಮಗ ಮುರಳಿಯಲ್ಲಿ ಮನಸ್ಸು. ಆತ ಮೂಕನಾದರೂ ಚಿತ್ರಕಲಾವಿದ. ಕೊಳಲು ವಾದಕ. ಮಾಮೂಲಿಯಂತೆ ಅನೇಕ ಘಟನೆಗಳು ಜರುಗಿ ಕಡೆಗೆ ಪ್ರೇಮಾಂಕುರ. ಅದು ವಿವಾಹದಲ್ಲಿ ಮುಕ್ತಾಯ. ಜೊತೆಗೆ ವೇಣು ಎಂಬ ವಿಲನ್ ಪ್ರವೇಶ. ಸರಳ ತನ್ನ ವಶವಾಗದಿದ್ದಾಗ ಅವಳ ಶೀಲದ ಬಗ್ಗೆ ಶಂಕೆ ಬರುವಂತೆ ಪ್ರಯತ್ನಿಸುವ ಈತ ಸೇಡಿನ ಹಲ್ಲು ಮಸೆಯುತ್ತಾನೆ. ಬಹಳಷ್ಟು ಯಶಸ್ವಿಯೂ ಆಗುತ್ತಾನೆ. ಸರಳ ಸಹ ಈ ಅಪ್ರಮಾಣಿಕ ದಾಳಿಯ ವಿರುದ್ಧ ಸೇಡು ತೀರಿಸಿಕೊಳ್ಳಲು ನಿಶ್ಚಯಿಸುತ್ತಾಳೆ. ಹೀಗೆ ಸಿನಿಮೀಯ ಶೈಲಿಗೆ ತಿರುಗುವ ಕತೆಗೆ ಅಂಥದೇ ಅನಿರೀಕ್ಷಿತ (ಅಸಹಜ) ಅಂತ್ಯ ಕೊಡದಿದ್ದರೆ ನ್ಯಾಯ ಸಂದಂತಾಗುವುದಿಲ್ಲವೆಂದು ಲೇಖಕಿಗೆ ಅನ್ನಿಸಿರಬೇಕು. ನಾಯಕಿ, ವೇಣುವನ್ನು ತನ್ನ ಕಾರಲ್ಲಿ ಕರೆದೊಯ್ದು ಉದ್ದೇಶ ಪೂರ್ವಕವಾಗಿ ಆಕ್ಸಿಡೆಂಟ್ ಮಾಡುತ್ತಾಳೆ. ಕಾದಂಬರಿಗಾರ್ತಿ ನಿರ್ಣಯಿಸಿದಂತೆ ಇಬ್ಬರೂ ಸಾಯುತ್ತಾರೆ. ಹೀಗೆ ಯಾವುದೇ ವಸ್ತು ತೆಗೆದುಕೊಂಡರೂ ಹೊಸ ಸಾಧ್ಯತೆಗಳನ್ನು ನಮ್ಮ ಲೇಖಕಿಯರು ಯಾಕೆ ಹುಡುಕುವುದಿಲ್ಲ ಎನ್ನಿಸುತ್ತದೆ. ಅದೇ ಅಡುಗೆ ಅದೇ

ತಟ್ಟೆ. ಒಂದಷ್ಟು ಕುತೂಹಲದ ನಂಚಿಕೆ. ಕಾದಂಬರಿಗೆ ಇಷ್ಟು ಸಾಕೆ ಎಂದು ಹಿರಿಯ ಲೇಖಕಿಯರು ಕೇಳಿಕೊಳ್ಳದಿದ್ದರೆ ಹೇಗೆ ?

'ಸಮರ್ಪಣೆ'ಯಲ್ಲಿ ಸೋಲುವ ಉಷಾನವರತ್ನರಾಮ್‌ಅವರು 'ಪ್ರಗತಿಯ ಪಥ'ದಲ್ಲಿ ತುಂಬ ಗಮನ ಸೆಳೆಯುತ್ತಾರೆ. ಸಂಯಮದಿಂದ ಸಾಕಷ್ಟು ವಿವರಗಳು ಒದಗಿಸುತ್ತ ಕೇಂದ್ರಕತೆಯನ್ನು ಬಿಟ್ಟುಕೊಡದ ಈ ಕೃತಿಯ ನಾಯಕ ಒಬ್ಬ ಡಾಕ್ಟರ್. ಹಳ್ಳಿಯಲ್ಲಿ ನೆಲೆಯೂರಿ ಆಸ್ಪತ್ರೆ ನಡೆಸುವ ಆತ ಎದುರಿಸಬೇಕಾಗಿ ಬಂದ ಸಮಸ್ಯೆಗಳು ಆತನನ್ನು ಒಬ್ಬ ಹೀರೊ ಮಾಡುವುದರೊಂದಿಗೆ ಹಳ್ಳಿಯ ಹಲವು ಮಗ್ಗಲುಗಳನ್ನು ಪರಿಚಯಿಸಲು ಕಾರಣವಾಗಿದೆ. ಆದ್ದರಿಂದ ಕೃತಿಗೆ ವ್ಯಾಪಕತೆ ಲಭ್ಯವಾಗಿದೆ. ಪ್ರಾಮಾಣಿಕರಿಗೆ ಎದುರಾಗುವ ಪಟ್ಟಭದ್ರ ಹಿತಾಸಕ್ತಿಗಳ ಕಿರುಕುಳದ ಕತೆ ಹೊಸದೇನಲ್ಲ. ಇಲ್ಲಿಯೂ ಪ್ರಾಮಾಣಿಕ ವೈದ್ಯ ಮುಕುಂದನಿಗೆ ಮುಖಭಂಗ ಮಾಡುವ ಅಸೂಯಪರರ ತಂಡವೇ ಇದೆ. ಆದರೆ ಕಾದಂಬರಿಯ ಒಡಲು ಇದಿಷ್ಟೇ ಅಲ್ಲದೆ ಸಾಮಾಜಿಕ ಪಿಡುಗುಗಳನ್ನೂ ಪ್ರಸ್ತಾಪಿಸಿ ಮಾನವೀಯ ಅಂತಃಕರಣಕ್ಕೆ ಬೆಲೆ ಕೊಡುತ್ತದೆ. ಇದರಿಂದ ಅದಕ್ಕೂ ಬೆಲೆ ಬಂದಿದೆ. ಹಳ್ಳಿಯ ವಾತಾವರಣ, ವ್ಯಕ್ತಿಸ್ವಭಾವ ಚಿತ್ರಣಗಳೂ ಗಮನೀಯವಾಗಿವೆ. ಅಸ್ಪೃಶ್ಯತೆಯ ಆಯಾಮವನ್ನೂ ಒಳಗೊಂಡ ಈ ಕೃತಿ ತನ್ಮೂಲಕ ವಿಭಿನ್ನ ಪ್ರತಿಕ್ರಿಯೆಗಳನ್ನು ಒಗ್ಗೂಡಿಸುತ್ತ ಕಡೆಗೆ ಸಹಾನುಭೂತಿಪರವಾಗಿದೆ. ಡಾಕ್ಟರಿಗೆ ತೊಂದರೆ ತಂದೊಡ್ಡುವವರ ಸಂಚುಗಳು ಸಾಮಾನ್ಯ ಬರಹದಂತೆಯೇ ಇವೆಯಾದರೂ ಒಟ್ಟಾರೆಯಾಗಿ ಕೃತಿ ಒಗ್ಗೂಡಿಸಿಕೊಂಡ ವಿವಿಧ ನೆಲೆಗಳು ಬಂದರೂ ಸ್ಥೂಲವಾಗಿ ಬೆಲೆ ತಂದುಕೊಟ್ಟಿವೆ. ಪ್ರೇಮದ ಹಾದಿ ಹಿಡಿದು ಏದುಸಿರು ಬಿಡುವಂತೆ ಮಾಡುವ ಕೃತಿಗಳ ನಡುವೆ "ಪ್ರಗತಿ ಪಥದಲ್ಲಿ"ಸಾಗುವ ಕೃತಿ ಪ್ರಶಂಸನೀಯ.

ಉಷಾ ನವರತ್ನರಾಮ್ ಅವರ ಇನ್ನೊಂದು ಕೃತಿ 'ಎಲ್ಲಾದರೂ ಸುಖವಾಗಿರು'. ಕರುಳಿಗೆ ಚುರುಕುಮುಟ್ಟಿಸುವ ಅನಿರೀಕ್ಷಿತ ತಿರುವಿನ ಕಾದಂಬರಿ. ಹೆಂಗಸರ ಮನಸ್ಸನ್ನು ಹೊಗಬಲ್ಲಂಥ ಹಂದರವಿದೆ. ಇದಕ್ಕೊಂದು ನಿರ್ದಿಷ್ಟ ಉದ್ದೇಶವೇನೂ ಇಲ್ಲವಾದರೂ 'ಎಲ್ಲಾದರೂ ಸುಖವಾಗಿರು' ಎಂದು ತಾಯಿಯೊಬ್ಬಳು ತನ್ನ ಮಗಳಿಗೆ ಹಾರೈಸುವಾಗ ಓದುವ ಹೆಣ್ಮನಕ್ಕೆ ನೀರು ಚಿಮುಕಿಸುವ 'ಉದ್ದೇಶ'ವಂತೂ ಇದೆ. ಹುಡುಗರ ಜೊತೆ ಜಾಲಿಯಾಗಿ (Jolly) ಓಡಾಡುವ ಮಾನಸ ಎಂಬ ಯುವತಿಯನ್ನು ದಿವಾಕರನೆಂಬ ಯುವಕ ಭೋಗಿಸಿ ಆಮೇಲೆ ತಪ್ಪೊಪ್ಪಿಗೆಯಾಗಿ ಹತ್ತು ಸಾವಿರ ರೂಪಾಯಿ ಸಂದಾಯಿಸಿ ಹೋಗುತ್ತಾನೆ. ಇದರಿಂದ ಗುಟ್ಟಾಗಿ ಹುಟ್ಟಿದ ಮಗು, ಮಕ್ಕಳಿಲ್ಲದ ಬೇರೆ ತಾಯಿ ತಂದೆಯ ದತ್ತು ಪುತ್ರಿಯಾಗುತ್ತದೆ. ವರ್ಷಗಳೇ ಕಳೆದ ಮೇಲೆ ಮಾನಸ ಮತ್ತು ಈ ತಾಯಿತಂದೆಯರ

ಮನೆಗಳು ಒಂದೇ ಊರಲ್ಲಿ ಎದುರುಬದರಾಗುತ್ತವೆ. ಮಾನಸ ಮತ್ತು ಎದುರು ಮನೆಯ ಈ ಹುಡುಗಿಯ ಮ್ಯಾನರಿಸಮ್ಸ್ ಮತ್ತು ಸ್ವಭಾವಗಳೆಲ್ಲ ಒಂದೇ ಥರಾ. ಇದರಿಂದಲೇ ಮಾನಸಾಗೆ ಈಕೆ ತನ್ನ ಮಗಳೇ ಇರಬಹುದೇ ಅಂತ ಅನುಮಾನ. (ಎಷ್ಟಾದರೂ ತಾಯಿ ಕರುಳು ! ಪಾಪ !) ಕಡೆಗೆ ತನಗೆ ಹೆರಿಗೆಯಾಗಿದ್ದ ನರ್ಸಿಂಗ್ ಹೋಂನ ಡಾಕ್ಟರಲ್ಲಿ ಪ್ರಸ್ತಾಪ. ಅವರು ಈಕೆಯ ಅನುಮಾನ ಸರಿಯೆಂದು ಹೇಳಿದ್ದಲ್ಲದೆ ಅಂದು ಬಿಟ್ಟು ಹೋದವಳು ಇಂದು ತಾಯಿ ಹೇಗಾಗಲು ಸಾಧ್ಯವೆಂದು ಪ್ರಶ್ನಿಸಿದಾಗ ತಬ್ಬಿಬ್ಬಾದ ಈ ತಾಯಿ ಮಗಳನ್ನು ಹುಟ್ಟಿಸಿದವನು ಕೊಟ್ಟಿದ್ದ ಹತ್ತು ಸಾವಿರ ರೂಪಾಯಿಗಳನ್ನು ಈಕೆಗೆ ಚೆಕ್ ಮೂಲಕ ಕಳಿಸಿ 'ಎಲ್ಲಾದರೂ ಸುಖವಾಗಿರು' ಎಂದು ಹಾರೈಸುತ್ತಾಳೆ. ಇಂಥ ಮಾಮೂಲಿ ಸಿನೀಮಿಯಾ ಕತೆಗಳಿಂದ ಸಾಹಿತ್ಯಕ್ಕಂತೂ ಸುಖವಿಲ್ಲ.

ಇತ್ತೀಚೆಗೆ ಕನ್ನಡದಲ್ಲಿ ಬಹಳಷ್ಟು ಕೃತಿಗಳನ್ನು ಕೊಡುತ್ತಿರುವ ಲೇಖಕಿಯರಲ್ಲಿ 'ಸಾಯಿಸುತೆ'ಯವರೂ ಒಬ್ಬರು. ಅವರ 'ಜೀವನ ಸಂಧ್ಯಾ'ಮುಗ್ಧ ಪತಿ ಮತ್ತು ಮುಕ್ತ ಸ್ವಚ್ಛಂದತೆಯ ಸುತ್ತ ಹರಡಿಕೊಂಡಿದೆ. ಕೌಟುಂಬಿಕ ಕತೆಯಾಗಿ ಬೆಳೆಯುವ ಕೃತಿಯಲ್ಲಿ ಆಧುನಿಕತೆಯ ಹೆಸರಿನಲ್ಲಿ ನಡೆಯುವ ಅನೈತಿಕತೆ ಮತ್ತು ಹೆಣ್ಣಿನ ಗಟವಾಣಿ ಸ್ವಭಾವದ ಮೇಲೆ ಪರೋಕ್ಷ ಟೀಕೆಯಿದೆ. ದೇಹ ಸೌಂದರ್ಯಕ್ಕಿಂತ ಹೆಣ್ಣಿನ ಮಾನಸಿಕ ಸೌಂದರ್ಯವೇ ಮಿಗಿಲೆಂಬ ಭಾವನೆಯೂ ಬೆನ್ನ ಹಿಂದೆ ಇದೆ. ಸರಳ ಪಾತ್ರದ ಮೂಲಕ ಅನೈತಿಕತೆ ಮತ್ತು ಅನಪೇಕ್ಷಿತ ಆಧುನಿಕತೆಯ ಅಂಶವನ್ನು ಪ್ರತಿನಿಧೀಕರಿಸಿದರೆ ಆಕೆಯ ಗಂಡ ಮಾಧು ಮುಗ್ಧ ಸಜ್ಜನನ ಪ್ರತೀಕ. ಈತನ ಸೋದರ ಶಾಮ ಸಾತ್ವಿಕ ಸಿಟ್ಟನ್ನು ಸ್ಫೋಟಿಸುವ ನೈತಿಕತೆಯ ಸಂಕೇತ. ತಾಯಿ ತಂದೆಯರು ಸಾಂಪ್ರದಾಯಿಕ ಸ್ವಭಾವದವರು. ಶ್ರೀಪಾದ ಸರಳೆಯ ಜೊತೆ ಅನೈತಿಕ ಸಂಬಂಧ ಸ್ಥಾಪಿಸಿದವನು. ಇವರೆಲ್ಲರ ಸುತ್ತ ಬಲೆ ನೇಯುತ್ತ ಹೋಗುವ ಇದೊಂದು 'ಸಾಂಸಾರಿಕ ಕಾದಂಬರಿ.' ಸರಳೆಯ ಸಾವಿನಲ್ಲಿ ಕೊನೆಗೊಳ್ಳುವ ಕಾದಂಬರಿ ಧ್ವನಿಶಕ್ತಿಯಿಲ್ಲದ ದುರಂತ ಕತೆಯನ್ನು ನಮ್ಮ ಮುಂದಿಟ್ಟಿದೆ.

ಸಾಯಿಸುತೆಯವರ ಕಾದಂಬರಿಗಳಲ್ಲಿ ಒಂದಲ್ಲ ಅನೇಕ ಕುಟುಂಬಗಳ ಕತೆಯಿರುತ್ತದೆ. 'ಗಂಧರ್ವಗಿರಿ'ಯನ್ನೇ ತೆಗೆದುಕೊಂಡರೆ ನೇತ್ರಾ ಎಂಬ ಯುವತಿ ಇಲ್ಲಿ ಕೇಂದ್ರವಾದರೂ ರಂಗರಾವ್ ಕುಟುಂಬದ ಕತೆಗೂ ಪ್ರಾಧಾನ್ಯವಿದೆ. ನಡನಡುವೆ ಬೇರ ಪಾತ್ರಗಳ ವೃತ್ತಾಂತ ಬೇರೆ. ಸ್ವಾರ್ಥ ಮತ್ತು ಪ್ರೇಮಗಳು ಈ ಕೃತಿಯಲ್ಲಿ ಕೆಲಸಕ್ಕೆ ಬರುವ ಮಾಧ್ಯಮಗಳು. ಎರಡು ಕಡೆಯೂ ಒಂದಷ್ಟು ಪಾತ್ರಗಳಿರುತ್ತವೆ. ಕಡೆಗೆ, ಎಷ್ಟೇ ಕಷ್ಟ ಬಂದರೂ ಸುಖಾಂತ. ನೇತ್ರಾ ಮತ್ತು ರವೀಂದ್ರರ ನಡುವೆ ವಿವಾಹವಾದ ಸಂಧರ್ಭ, ಕಡೆಯಲ್ಲಿ ಬಿರುಗಾಳಿಯ ಹೊಡೆತ, ಅದರಲ್ಲಿ ಆಹುತಿ

ಯಾಗಬೇಕಿದ್ದ ನೇತ್ರಾಳು ಉಳಿದವು – ಹೀಗೆ ಕಡೆಗೆ ಸುಖಾಂತಕ್ಕೆ ಕರೆದೊಯ್ಯು ವಂತೆ ನಡುವೆ ಬೇರೆ ದಿಕ್ಕುಗಳೂ ಇವೆ. ಒಂದು ಸಂತೋಷವೆಂದರೆ ಕತೆ ನಮ್ಮ ದಿಕ್ಕು ತಪ್ಪಿಸುವುದಿಲ್ಲ. ತಾನು ಕಂಡ ಗುರಿಯತ್ತ ನಿಧಾನವಾಗಿಯಾದರೂ ಚಲಿಸು ತ್ತದೆ. ನೇತ್ರಾಳ ನಡವಳಿಕೆ ಹೆಚ್ಚು ಪ್ರಕಾಶಕ್ಕೆ ಬರುವ ಸ್ಥಳ ಮತ್ತು ಆಕೆಯ ಪತಿಯಾದವನು (ರವೀಂದ್ರ) ಇದ್ದದ್ದು 'ಗಂಧರ್ವಗಿರಿ' ಎಸ್ಟೇಟ್ ಆದ್ದರಿಂದ ಅದೇ ಹೆಸರು ಕೊಡಲಾಗಿದೆ. ವಿಶೇಷವಾಗಿ ಚರ್ಚಿಸಬೇಕಾದ್ದೇನೂ ಈ ಕಾದಂಬರಿಯಲ್ಲಿಲ್ಲ.

ಇದೇ ಲೇಖಕಿಯ ಇನ್ನೊಂದು ಕೃತಿ 'ಮಾನಸ ವೀಣಾ' ಗೋಜಲು ಗೋಜ ಲಾದ ಹಂದರ ಹೊಂದಿದೆ. ಸವಿತ ಮತ್ತು ವೇಣುವಿನ ಕತೆಗೆ ಹೊಂದಿಕೊಂಡಂತೆ ಅನಂತನ ಕತೆ, ಜಯಂತಿ ಮತ್ತು ಜಮುನಾರ ವೃತ್ತಾಂತಗಳೂ ಸೇರಿಕೊಂಡು ಕಾದಂಬರಿ ಹಾದಿ ತಪ್ಪುವ ಹಸುವಾಗುವುದುಂಟು. ಸುತ್ತು ಬಳಸಿ ನಿಲ್ಲುವುದು ವೇಣು ಮತ್ತು ಸವಿತಾರಲ್ಲೇ. ಇವರಿಬ್ಬರ ವಿಷಮ ದಾಂಪತ್ಯಕ್ಕೆ ತಪ್ಪು ಕಲ್ಪನೆ ಕಾರಣ. ಹಿಂದೆ ನಡೆದ ಘಟನೆಯೊಂದರಲ್ಲಿ ಸವಿತಾ ವೇಣುವಿಗೆ ಚುರುಕು ಮುಟ್ಟಿಸಿ ರುತ್ತಾಳಾದ್ದರಿಂದ ಆ ಸೇಡಿಗಾಗಿಯೇ ಆತ ತನ್ನನ್ನು ವಿವಾಹವಾಗಿರಬಹುದೆಂಬ ಶಂಕೆ ಇವಳಿಗೆ. ಹಿಂದಿನ ಘಟನೆಗೆ ಈಗ ಕ್ಷಮೆ ಕೇಳಲಿ ಎಂಬ ಹಟ ಆತನಿಗೆ. ಹೀಗಾಗಿ ಇಬ್ಬರೂ ವಿರುದ್ಧ ದಿಕ್ಕಿನಲ್ಲಿ ನಡೆಯುತ್ತಾರೆ. ಇವರ ಮನಸ್ತಾಪವನ್ನೇನೂ ಗಾಢವಾಗಿಸಲು ಹೆಣಗಲಾಗಿದೆ. ಆದರೆ ತೆಳು ಕಾರಣದ ಮೇಲೆ ನಡೆಯುವ ಘಟನೆ ಗಳು ಗಟ್ಟಿಯಾಗುವ ಸಂಭವ ಕಡಿಮೆ. ಇಲ್ಲಿ ಆಗಿರುವುದು ಇದೇ.

ಸಾಯಿಸುತೆಯವರೇ ಬರೆದ 'ಸುಮಧುರ ಭಾರತಿ' ಮತ್ತೊಂದು ಗೋಜಲು ಕತೆ. ಸುಮಾ ಎಂಬ ಬಡಹೆಣ್ಣು ಇಲ್ಲಿನ ಕೇಂದ್ರ ವ್ಯಕ್ತಿ. ಸುತ್ತ ಇರು ವವರದೂ ಒಂದೊಂದು ಕತೆ. ನಮ್ಮ ಕಾದಂಬರಿಗಾರ್ತಿಯರಂತೂ ಅನಾಥ ಮಕ್ಕಳನ್ನು (ವಯಸ್ಸು ಎಷ್ಟಾದರೂ ಇರಲಿ) ತಂದರೆ ಓದುಗರ ಮೆಚ್ಚುಗೆಗೆ ತೊಂದರೆಯಿಲ್ಲವೆಂದು ಭಾವಸಿದ್ದಾರೇನೊ. ಸಾಯಿಸುತೆಯವರ ಕೆಲವು ಕಾದಂಬರಿ ಗಳಲ್ಲೇ ನಾಯಕಿ ಅಥವಾ ನಾಯಕನ ತಾಯಿಯೋ ತಂದೆಯೋ ಸತ್ತಿರುತ್ತಾರೆ ಬಡಕುಟುಂಬವೆನ್ನುವುದು ಅನಾಥರನ್ನಾಗಿ ಮಾಡುವುದು – ಇಂದಿನ ಚಲಾವಣೆಯ ನಾಣ್ಯವೆಂದು ಭಾವಿಸಿರಬೇಕೇನೊ. ಕಮಲಾಕರನ್ ಎಂಬ ಚಿತ್ರಕಲಾವಿದ (ಮುಖ್ಯ ವಾಗಿ ಎಸ್ಟೇಟ್ ಮಾಲಿಕ) ತನ್ನ ಪತ್ನಿಯನ್ನು ಕಳೆದುಕೊಂಡು ತಳಮಳಿಕೆಯಲ್ಲಿ ಮುಳುಗಿದವನು. ಉದ್ಯೋಗಸ್ಥೆಯಾಗಿ ನಾಯಕಿ ಸುಮಾ ಇಲ್ಲಿ ಪ್ರವೇಶಿಸುತ್ತಾಳೆ. ಸ್ವಾರ್ಥ ಲಾಲಸೆ ಮತ್ತು ಅಸೂಯೆಗಳು ಬದುಕಿನ ಭಾಗವಾಗಿ ಉಂಟುಮಾಡುವ ಬಿರುಕುಗಳನ್ನು ಈ ಕಾದಂಬರಿ ತೋರಿಸುತ್ತದೆಯಾದರೂ ಅದು ಗಾಢ ಅನುಭವ ವಾಗಿ ದಕ್ಕುವುದಿಲ್ಲ. ಸಾಮಾಜಿಕ ಮೌಲ್ಯ ಮತ್ತು ಸ್ವಾಭಾವಗಳ ಶೋಧನೆಯ ಪ್ರಯತ್ನ ಲೇಖಕಿಗೆ ಇದ್ದಂತಿಲ್ಲ. ಹಾಗಿಲ್ಲದಿದ್ದಾಗ ಸಾಧಾರಣ ಕೃತಿಗಿಂತ ಮೇಲೇರ

ಲಾರದ ಕಾದಂಬರಿಗಳು ಸೃಷ್ಟಿಯಾಗುತ್ತವೆ. ಈ ಲೇಖಕಿಯ ಸಂದರ್ಭದಲ್ಲೂ ಈ ಮಾತಿಗೆ ಅರ್ಥವಿದೆ.

ಶೈಲಿಯಲ್ಲಿ ಸ್ವಲ್ಪ ಸೊಗಸು ತರಲೆತ್ನಿಸುವ ಕೆಲವು ಲೇಖಕಿಯರಲ್ಲಿ ಈಚನೂರು ಶಾಂತ ಒಬ್ಬರು. ಮಾನಸಿಕ ತಳಮಳಗಳನ್ನು ತೆಕ್ಕೆಗೊಗ್ಗಿಸಿಕೊಳ್ಳುವ ನಿರ್ಮಾಣ ದಿಂದ ಉಳಿದವರಿಗಿಂತ ಭಿನ್ನವಾಗಿ ಬಯಸುವ ಕೃತಿಗಳನ್ನು ಕೊಟ್ಟ ಇವರು ಆಧುನಿಕ ರಾಗುವ ಅಭೀಪ್ಸೆಯನ್ನೂ ಹೊತ್ತಿದ್ದಾರೆನ್ನಿಸುತ್ತದೆ. ಆದರೆ ಅವರ 'ನಿನ್ನೆ ನಡೆದ ನನ್ನ ಕತೆ' ಕೇವಲ ಪ್ರೇಮಕತೆಯಾಗಿಬಿಡುತ್ತದೆ. ಇದಕ್ಕೆ ವಿಭಿನ್ನ ಆಯಾಮ ಕೊಡುವ ಪ್ರಯತ್ನ ನಡೆದಿದ್ದರೂ ಅದು ವಿಶಿಷ್ಟವೆನ್ನಿಸುವುದಿಲ್ಲ. ಅನ್ಯಾಯಗಳನ್ನು ವಿರೋಧಿ ಸುವ ಕಾಲೇಜ್ ಅದ್ಯಾಪಕ ತನ್ನ ಪ್ರಿಯತಮೆಯ ಆಶ್ರಯದಾತ ಮಾವನ ಭ್ರಷ್ಟತೆ ಯನ್ನೂ ಭಾಷಣದಲ್ಲಿ ಬಯಲಿಗೆಳೆಯುವುದೇ ಆತನ ಮತ್ತು ಶಶಿಯ ಪ್ರೇಮಕ್ಕೆ ಕುತ್ತಾಗುತ್ತದೆ. ಇಬ್ಬರೂ ಒಂದು ರೀತಿಯ ದಿಗ್ಬಂಧನಕ್ಕೆ ಒಳಗಾಗುತ್ತಾರೆ. ಆದರೂ ಅರಸಾಹಸಪಟ್ಟು ತಪ್ಪಿಸಿಕೊಂಡು ಬಂದು ಒಂದುಗೂಡುವಲ್ಲಿಗೆ ಕತೆಗೆ ಮುಕ್ತಾಯ. ಅಲ್ಲಲ್ಲೆ ತಳಮಳದ ಚಿತ್ರಣ ಚೆನ್ನಾಗಿ ಬಂದಿದೆ. ಉಳಿದಂತೆ ಘಟನಾವಳಿಗಳ ನಡಿಗೆಯೇ ಮುಖ್ಯವಾಗಿದೆ. ಒಂದು ಸಾಮಾನ್ಯ ವಸ್ತುವಿನ ನಡುವೆಯೂ ಬದುಕುವ ಸ್ವಾತಂತ್ರ್ಯದ ಚಿಂತನೆಯ ಎಳೆಯನ್ನು ತರುತ್ತಾರೆನ್ನುವುದು ಗಮನೀಯ. ಆದರೆ ಇದು ಗಂಭೀರ ಶೋಧನೆಯ ಸಾಧನವಾಗುವುದಿಲ್ಲ.

'ಮಂದಾರ' – ಎಂಬ ಶಬ್ದ ಕಿವಿಯ ಮೇಲೆ ಮೊದಲ ಬಾರಿಗೆ ಬಿದ್ದ ದಿನ ದಿಂದಲೂ ನಾನು ಬರೆಯುವ ಕತೆಯಾಗಲೀ, ಕಾದಂಬರಿಯಾಗಲೀ ಯಾವುದಾದರೂ ಒಂದಕ್ಕೆ ಈ ಹೆಸರು ಇಡಬೇಕೆಂಬ ಹಂಬಲ ಇತ್ತು' ಎಂದು ಹೇಳಿಕೊಂಡಿರುವ ಸುನೀತಿ ಕೃಷ್ಣಸ್ವಾಮಿಯವರು ಕಡೆಗೂ 'ಮಂದಾರ' ಎಂಬ ಕಾದಂಬರಿ ಕೊಟ್ಟಿದ್ದಾರೆ. ತಮ್ಮ ಆಸೆಯನ್ನೇನೂ ಅವರು ಈಡೇರಿಸಿಕೊಂಡಿದ್ದಾರೆ. ಆದರೆ ಮಾಮೂಲಿ ಮಂದಾರವನ್ನು ಕೊಟ್ಟಿದ್ದಾರೆ. ಆಸ್ತಿ ಮತ್ತು ವಿದ್ಯೆಯ ಆಸೆಗೆ ಮಾರು ಹೋದವರು ವ್ಯಕ್ತಿತ್ವಕ್ಕೆ ಬೆಲೆ ಕೊಡದಿರುವುದು ಸಾಮಾನ್ಯ ಸಂಗತಿ. ಮದುವೆಯ ವಿಷಯ ಬಂದಾಗಂತೂ ನೆಂಟರಿಷ್ಟರ ದೃಷ್ಟಿ ಹೀಗೇ ಇರುತ್ತದೆಂದು ನಮ್ಮ ಅನೇಕ ಕಥೆ, ಕಾದಂಬರಿ, ಚಲನ ಚಿತ್ರಗಳು ಸಾರಿ ಹೇಳಿವೆ. ಇದಕ್ಕೆ ಮತ್ತೊಂದು ದನಿ ಈ 'ಮಂದಾರ'. ತಮ್ಮಯ್ಯನೆಂಬ ಶ್ರೀಮಂತನ ತಂಗಿ ರಮಾ. ಕುಡುಕ ಗಂಡನ ಕಾಟದಲ್ಲಿ ನೊಂದಜೀವಿ. ಈಕೆಯ ಮಗಳು ಮಂದಾರ ಪಿ.ಯು.ಸಿ. ಓದು ವಾಗಲೇ ರಮಾ ಸಾವು. ಕುಡುಕ ಗಂಡನೂ ಒಳ್ಳೆಯವನಾದಾಗ ಸಾವು ಬರುತ್ತದೆ. 'ಅನಾಥೆ' ಮಂದಾರ ಮುಂದೆ ಉತ್ತಮ ವಿದ್ಯಾವಂತೆಯಾಗುತ್ತಾಳೆ. ಪಿತ್ರಾರ್ಜಿತ

ಆಸ್ತಿಯಲ್ಲಿ ಅರ್ಧ ಪಡೆದಿದ್ದ ರಮಾಳ ಹಣವನ್ನು ತಮ್ಮಯ್ಯ ತಂಗಿಯ ಮಗಳಿಗೆ ವಿನಿಯೋಗಿಸುತ್ತಾನೆ. ಆದರೆ ಹಣಕ್ಕೆ ಆಸೆ ಪಡುವ ಜಗತ್ತಾದ್ದರಿಂದ ಹಣ ಇರುವ ವಿಷಯ ಯಾರಿಗೂ ಹೇಳಬಾರದೆಂದು ಮಂದಾರಳಿಗೆ ಹೇಳಿರುತ್ತಾನೆ. ಮಂದಾರ ಆಸ್ತಿವಂತೆಯೆಂದು ತಿಳಿದಾಗ ತಮ್ಮಯ್ಯನ ಹೆಂಡತಿ–ಅಲ್ಲೀವರೆಗಿನ ತಾತ್ಸಾರ ಬಿಟ್ಟು ತನ್ನ ಮಗನಿಗೇ ಅವಳನ್ನು ತಂದುಕೊಳ್ಳಲು ಮುಂದಾಗುತ್ತಾಳೆ. ಹೀಗೆ ಹಣ ಮತ್ತು ಮನುಷ್ಯ ಸ್ವಭಾವದ ನಡುವೆ ಇರುವ ಸಂಬಂಧದ ಸರಳ ಚಿತ್ರ ಇಲ್ಲಿದೆ.

ಅಶ್ವಿನಿಯವರ 'ಬಾಲ್ಯಸಖ' ಮುಖ್ಯವಾಗಿ ಮೂರು ಪಾತ್ರಗಳ ಸುತ್ತ ಹೆಣೆಯಲ್ಪಟ್ಟಿದೆ. ಕಚೇರಿ ಮತ್ತು ಮನೆಗಳ ಪರಿಸರದಲ್ಲಿ ಈ ಮೂರು ಪಾತ್ರಗಳ ವ್ಯಕ್ತಿತ್ವವನ್ನು ಕಡೆಯುವ ಪ್ರಯತ್ನವಿದೆ. ಅನಸೂಯಳ ಬಾಲ್ಯಸಖನಾದ ಬೇಗ್ ದಕ್ಷ ಅಧಿಕಾರಿ. ಅನಸೂಯ ಮನೆ ಮತ್ತು ಕಚೇರಿಗಳ ಕೆಲಸದಲ್ಲಿ ನಿಷ್ಠಾವಂತೆ. ಆಕೆಯ ಗಂಡ ಹರಿನಾಥ ಅಹಂ ಮತ್ತು ಅಸೂಯೆಯ ಉದಾಹರಣೆ. ಹೀಗೆ ಮೂವರ ಸುತ್ತ ಕತೆಯ ಭಿತ್ತಿ ನಿರ್ಮಾಣವಾದರೂ ಅನಸೂಯ ಮತ್ತು ಬೇಗ್ ಅವರ ವ್ಯಕ್ತಿತ್ವವನ್ನು ಉನ್ನತಕ್ಕೇರಿಸುವ ಪ್ರಯತ್ನದಲ್ಲಿ ಹರಿನಾಥ ಸ್ವಲ್ಪ ಆರೋಪಿತ ವ್ಯಕ್ತಿತ್ವದವನಾಗುತ್ತಾನೆ ಎನ್ನಿಸುತ್ತದೆ. ಪರವಾಗಿಲ್ಲ ಎನ್ನಬಹುದಾದ ಒಂದು ಅಂಶ ವೆಂದರೆ ಮೂವರ ಮನಸ್ಸನ್ನು ಹೊಕ್ಕು ನೋಡಬಯಸುವ ಪ್ರಯತ್ನ ಉದಾತ್ತತೆಗೆ ಮನ್ನಣೆ ಕೊಡುತ್ತ ಹೋಗುವ ಕಾಬಂಬರಿ ಕಡೆಯಲ್ಲಿ ಹರಿನಾಥನನ್ನು ಕೀಳರಿಮೆ ಯಿಂದ ಪಾರು ಮಾಡುತ್ತದೆ. ಅಬ್ಬಾಸ್ ಆಲಿಬೇಗನ ತಂದೆ ನಡೆಸುತ್ತಿದ್ದ ಸ್ಮಗ್ಲಿಂಗ್ ವ್ಯವಹಾರವನ್ನು ಆತ ವಿರೋಧಿಸಿ ಒಪ್ಪಿದವಳೊಂದಿಗೆ ವಿವಾಹವಾಗು ವುದು ಕತೆಗೆ ಬೇರೆ ಮೆರಗು ಕೊಡುವ ಪ್ರಯತ್ನವಾಗಿದೆ. ಆದರೂ ಅದು ಪ್ರಧಾನ ಪಾತ್ರವಹಿಸದೆ ಬೇಗ್‌ನ ವ್ಯಕ್ತಿತ್ವದ ಭಾಗ ಮಾತ್ರವಾಗಿ ಬರುತ್ತದೆ. ವಸ್ತುವಿನಲ್ಲಿ ವಿಶೇಷವೇನೂ ಇಲ್ಲದಿದ್ದರೂ ಉದ್ಯೋಗಸ್ಥ ಪತ್ನಿ ಮತ್ತು ಕೀಳರಿಮೆಯ ಪತಿಯ ನಡುವಿನ ಸಂಬಂಧದ ಎಳೆಗಳನ್ನು ಪ್ರಕಟಿಸುವ ಪ್ರಯತ್ನ ಪರವಾಗಿಲ್ಲ.

'ನಿರ್ವೀರ್ಯ' ಗಂಡನನ್ನು ಪಡೆದ ಪತ್ನಿ 'ಗೀತಾ'ಳ ಬದುಕಿನ ಏರಿತಗಳ ಚಿತ್ರಣವೇ ಎಚ್. ಎಸ್. ಪಾರ್ವತಿಯವರ 'ಜಬಾಲ'. ತಾನು ಪ್ರೇಮಿಸಿದ ಸುಧಾಕರ ವಿವಾಹಿತ ಎಂದು ಗೊತ್ತಾದ ಮೇಲೆ ಗೀತ ಮತ್ತೊಬ್ಬನನ್ನು ವಿವಾಹವಾಗುತ್ತಾಳೆ. ಆದರೆ ಇದರಿಂದ ಇತ್ತ ಗೀತಾಳಿಗೂ ಸುಖವಿಲ್ಲ. ಅತ್ತ ಸುಧಾಕರನಿಗೂ ಸುಖವಿಲ್ಲ. ಹಟಮಾರಿ ಹೆಂಡತಿಯಿಂದ ದೂರೀಕರಿಸಲ್ಪಟ್ಟ ಸುಧಾಕರ ಮತ್ತು ರಾಜಶೇಖರ ನಿರ್ವೀರ್ಯನೆಂದು ಗೊತ್ತಿಲ್ಲದೆ ವಿವಾಹವಾದ ಗೀತಾಳ ಬದುಕುಗಳು ಸ್ವಲ್ಪಮಟ್ಟಿಗೆ ಒಂದೇ ರೀತಿಯವು. ಎರಡೂ ವಿಷಮ ದಾಂಪತ್ಯದ ಉದಾಹರಣೆಗಳು. ವಿಷಮ

ದಾಂಪತ್ಯದ ಸಮಸ್ಯೆ ಕೈಗೆತ್ತಿಕೊಂಡು ನಿರ್ವಹಿಸುವಾಗ ಲೇಖಕಿ ಸಮತೋಲನ ಸಾಧಿಸುವ ಪ್ರಯತ್ನ ಮಾಡಿದ್ದಾರೆ. ಲಿಂಗಭೇದ ಮಾಡದೆ ವಿಷಮ ದಾಂಪತ್ಯದ ಎರಡು ಮುಖಗಳನ್ನು ಕೊಡುವುದರ ಮೂಲಕ ಈ ಸಮತೋಲನ ಪ್ರಯತ್ನ ನಡೆದಿದೆ. ದಾಂಪತ್ಯದ ವಿಷಮತೆ ಪರಿಸ್ಥಿತಿಯಿಂದ ಪ್ರೇರಿತವಾದದ್ದೇ ಹೊರತು ಯಾರೊಬ್ಬರ ಮೂಲಪ್ರವೃತ್ತಿಯಲ್ಲವೆಂಬುದು ಇದರಿಂದ ವ್ಯಕ್ತವಾಗುತ್ತದೆ. ಇಂಥ ಗಂಭೀರ ಸಮಸ್ಯೆಯನ್ನು ಕೈಗೊತ್ತಿಗೊಂಡ ಲೇಖಕಿ ಮೊದಲು ಅದೇ ಧಾಟಿಯಲ್ಲಿ ಮುನ್ನಡೆದರೂ ಕಡೆಕಡೆಗೆ ಗೀತಾಳನ್ನು ಸೇಡಿನ ಹೆಣ್ಣು ಮಾಡಿ, ನಿರ್ವೀರ್ಯತೆಯ ವಿಷಯ ಮುಚ್ಚಿಟ್ಟಿದ್ದಕ್ಕೆ 'ಸೇಡು' ಎಂದು ಇನ್ನೊಬ್ಬರಿಂದ ಮಗು ಪಡೆಯುವುದು ಮಾತ್ರ ಸಮಸ್ಯೆಗೆ ಪರಿಹಾರವೂ ಅಲ್ಲ; ಕೃತಿಯ ಆಳ, ಅಗಲ ವಿಸ್ತರಿಸುವ ಅಂಶವೂ ಆಗುವುದಿಲ್ಲ.

'ಮುಳ್ಳಿನ ಕಿರೀಟ' ಪದ್ಮಾ ಗುರುರಾಜ್ ಅವರ ಕಾದಂಬರಿ. ಲೇಖಕಿಯೇ 'ಇದೊಂದು ಸರಳ, ಸಾಂಸಾರಿಕ ಕೃತಿ' ಎಂದಿದ್ದಾರೆ. ಇದರ ಜೊತೆಗೆ 'ಸತ್ವಹೀನ' ಎಂದು ಸೇರಿಸಬಹುದು. ಬಡ ಕುಟುಂಬದ ಕತೆಯೂ ಬಡವಾಗಬೇಕೆ ? ಈಗಾಗಲೇ ಸಾಕಷ್ಟು ಹಳೆಯದಾದ ಕತೆಯನ್ನೇ ತೆಗೆದುಕೊಂಡು ಏಕಮುಖವಾಗಿಸದೆ ಇರುವುದೊಂದು ಮೆಚ್ಚುಗೆಯ ಅಂಶ. ತಂದೆಯಿಲ್ಲದೆ ಬಡಕುಟುಂಬಕ್ಕೆ ಸೊಸೆಯಾಗಿ ಬರುವ ಹೆಣ್ಣು ಸಜ್ಜನಿಕೆಯ ಮೂರ್ತಿಯಾದರೆ ಇಲ್ಲಿಂದ ಬೇರೆ ಮನೆಗೆ ಮದುವೆಯಾಗಿ ಹೋದ ಹೆಣ್ಣು ಇದಕ್ಕೆ ವಿರೋಧ ವ್ಯಕ್ತಿತ್ವದವಳು. ಅಣ್ಣ ಒಳ್ಳೆಯವನಾದರೆ ತಮ್ಮ ಉಂಡಾಡಿ. ಕೌಟುಂಬಿಕ ನಿಯಮದಂತೆ ಹಿರಿಯನ ಮೇಲೆ ಬೀಳುವ ಜವಾಬ್ದಾರಿಯನ್ನು ನಿಭಾಯಿಸುವ ಅಣ್ಣನ ಮೂಲಕವೇ ಕಾದಂಬರಿಯ ದಿಕ್ಕು ತೆರೆದುಕೊಳ್ಳುವುದು ಒಂದೇ ಕುಟುಂಬಕ್ಕೆ ಸಂಬಂಧಪಟ್ಟ ವಿವಿಧ ಪಾತ್ರಗಳ ಮೂಲಕ ಸ್ವಭಾವ ವೈವಿಧ್ಯವನ್ನು ಚಿತ್ರಿಸುವ ಪ್ರಯತ್ನ ಗಂಭೀರವಾದದ್ದಾದರೂ ಅದಕ್ಕೆ ನಿರೂಪಣೆಯ ಗಾಂಭೀರ್ಯ (ಅರ್ಥಾತ್ ಆಳ, ಅಗಲ) ಲಭ್ಯವಾಗದೆ ಲಘುವಾಗಿದೆ; ಸಾಧಾರಣ ಕೃತಿಯಾಗಿದೆ.

ಟಿ. ಗಿರಿಜ ಅವರು ಇತ್ತೀಚಿನ ಕನ್ನಡ ಲೇಖಕಿಯರಲ್ಲಿ ವಿಭಿನ್ನರಾಗಿ ನಿಲ್ಲುತ್ತಾರೆ. ಪ್ರಖರ ಸಾಮಾಜಿಕ ಸಮಸ್ಯೆಗಳನ್ನು ತಮ್ಮ ಕಾದಂಬರಿಗಳ ವಸ್ತುಗಳನ್ನಾಗಿಕೊಂಡು ಪ್ರಗತಿಪರ ದೃಷ್ಟಿಯಿಂದ ನಿರೂಪಿಸುವ ಇವರು ಕೇವಲ ಕಚೇರಿ, ಅಡುಗೆಮನೆಗಳ ಕಾದಂಬರಿಗಳನ್ನು ರಚಿಸಿಲ್ಲ. 'ಭಿಕ್ಷುಕಿ, ಬಲಿ'ಇಂಥ ಸಾಮಾಜಿಕ ಅರಿವಿನ ಕಾದಂಬರಿಗಳನ್ನು ಬರೆದ ಗಿರಿಜಾ ಅವರು ಈ ವರ್ಷ 'ಬಹಿಷ್ಕಾರ'ವನ್ನು ಕೊಟ್ಟಿದ್ದಾರೆ. ದಿ॥ ಟಿ. ಪಿ. ಕೈಲಾಸಂ ಅವರ 'ಬಹಿಷ್ಕಾರ' ನಾಟಕದ ಬಗ್ಗೆ ಓದಿದ ಒಂದು ಪ್ಯಾರ ಈ ಕೃತಿರಚನೆಗೆ ಪ್ರೇರಣೆ ಕೊಟ್ಟಿತೆಂದು ಪ್ರಾಮಾಣಿಕವಾಗಿ ಹೇಳಿಕೊಂಡಿದ್ದಾರೆ.

ಒಂದು ಬ್ರಾಹ್ಮಣ ಕುಟುಂಬವನ್ನು ಕೇಂದ್ರವಾಗಿಟ್ಟುಕೊಂಡು ಜಡಸಂಪ್ರದಾಯದ ಅಮಾನವೀಯ ಅನುಭವವನ್ನು ಬಿತ್ತುವ ಪ್ರಯತ್ನ ಈ ಕೃತಿಯಲ್ಲಿದೆ. ಮೈನೆರೆಯುವುದಕ್ಕೆ ಮುಂಚೆ ತನ್ನ ಮಗಳಿಗೆ ಮದುವೆ ಮಾಡಲಿಲ್ಲವೆಂಬ ಕಾರಣಕ್ಕೆ ರಂಗಣ್ಣನ ಕುಟುಂಬ ಬ್ರಾಹ್ಮಣರಿಂದ ಬಹಿಷ್ಕಾರಕ್ಕೊಳಗಾಗುವುದು ಮತ್ತು ನಂತರದ ಘಟನಾವಳಿ ಕಾದಂಬರಿಯ ಒಡಲು. ಈಗಲೂ ಇಷ್ಟು ಕಟುವಾದ ಕಟ್ಟುಕಟ್ಟಳೆ ಇದೆಯೆ ಎಂದು ಪ್ರಶ್ನಿಸಿಕೊಳ್ಳದೆ ಸ್ವೀಕರಿಸಿದರೆ ಕೃತಿಯ-ಹಿಂದಿನ ನಿಲುವು ಮಾನವೀಯವಾಗಿದೆ. ರಂಗಣ್ಣ ಮತ್ತು ಗೌಡನ ಸಂಬಂಧ ಅಂತಃಕರಣದ ಪ್ರಾಧಾನ್ಯವನ್ನು ಹೇಳುವ ಮುಖ್ಯ ಭಾಗವಾಗಿದೆ. ಗಿರಿಜ ಅವರ ಶೈಲಿಯೂ ಭಿನ್ನವಾಗಿದೆ. ಸೆಳೆತವುಳ್ಳ ತಮ್ಮದೇ ಶೈಲಿಯೊಂದನ್ನು ರೂಪಿಸಿಕೊಳ್ಳುವ ಯತ್ನದಲ್ಲಿ ಅವರಿದ್ದಾರೆ. ವಸ್ತುವಿನ ತಳಮಟ್ಟ ಶೋಧನೆಗೆ ತೊಡಗಿದರೆ ಇನ್ನೂ ಉತ್ತಮ ಕೃತಿಗಳನ್ನು ಕೊಡಬಹುದು.

ಮಹಾಲಕ್ಷ್ಮಿಯವರು ತಮ್ಮ ಕಾದಂಬರಿ 'ಕೊನೆಯಕೋರಿಕೆ'ಯಲ್ಲಿ ರಾಧಾದೇವಿಯವರ ಮಿಷನ್ನನ್ನು (Mission) ಮುಂದುವರಿಸುತ್ತಿದ್ದಾರೆ. ರಾಧಾದೇವಿಯವರು ತಮ್ಮ ಕಾದಂಬರಿಗಳಲ್ಲಿ ಸಂತೋಷಿಮಾ, ರಾಘವೇಂದ್ರಸ್ವಾಮಿ ತಿರುಪತಿ ವೆಂಕಟೇಶ್ವರ–ಇವೇ ಮುಂತಾದ ದೇವರ ಮಹಿಮೆಗಳನ್ನು ತುರುಕಿ ತೃಪ್ತಿಪಟ್ಟುಕೊಂಡಂತೆ ಮಹಾಲಕ್ಷ್ಮಿಯವರೂ 'ಅಲೌಕಿಕ ಅನುಭವ'ವನ್ನು ಲೌಕಿಕ ಬದುಕಿನ ಕಾದಂಬರಿಯಲ್ಲಿ ಹೆಣೆದು ಸಂತೋಷಪಟ್ಟಿದ್ದಾರೆ. ಆದರೆ ಇದೇ ಸಂತೋಷ ಓದುಗರಿಗೂ ಆಗಬೇಕೆಂದು ಕೃತಿಕಾರರಿಗೆ ಗೊತ್ತಿರಬೇಕು. ತೀರಾ ಅವೈಜ್ಞಾನಿಕ ವಿಚಾರ ಬಿತ್ತುವ ಮಹಾಲಕ್ಷ್ಮಿಯವರು ಇತ್ತ ಭಕ್ತಿಯ ಶೋಧನೆಯನ್ನೂ ಅದರ ಸೂಕ್ಷ್ಮಗಳೊಂದಿಗೆ ಮಾಡುವುದಿಲ್ಲ. ಅತ್ತ ಅವೈಜ್ಞಾನಿಕತೆಯಿಂದಲೂ ಪಾರಾಗುವುದಿಲ್ಲ. ಮಕ್ಕಳಿಲ್ಲದಾಗ ತಾನು ಏನೂ ಔಷಧಿ ತೆಗೆದುಕೊಳ್ಳದೆ ಕಥಾನಾಯಕಿ ಪುಣ್ಯಕ್ಷೇತ್ರ ಹಾಗೂ ಆಚಾರ್ಯರ ದರ್ಶನ ಮಾತ್ರದಿಂದ ಮಕ್ಕಳನ್ನು ಪಡೆಯುತ್ತಾಳೆ. ಅಷ್ಟೇ ಅಲ್ಲ ಯಾವುದೇ ಕಾರಣಕ್ಕೂ ಯಾರೂ ಔಷಧಿ ಸೇವಿಸದಂತೆ ನೋಡಿಕೊಳ್ಳುತ್ತಾಳೆ. ಹೀಗೆ ಔಷಧಿ ವಿರೋಧಿಯಾದ ಇವಳು ಆಚಾರ್ಯರ ಭಕ್ತೆ. ಆಚಾರ್ಯರಿಗೆ ಆಗಾಗ್ಗೆ ಕನಸಿನಲ್ಲಿ ಕಾಣಿಸಿಕೊಂಡಾಗ ಅವರು ತಕ್ಷಣ ಇವಳಲ್ಲಿಗೆ ಬರುತ್ತಾರೆ. ಆಗ ಕನಸಲ್ಲಿ ಕಂಡ ಸಂಗತಿಗಳೆಲ್ಲ ನಿಜವಾಗಿರುತ್ತವೆ. ಹೀಗೆ ಸಾಗುತ್ತದೆ ಈ ಕಾದಂಬರಿ. ಕಡೆಯಲ್ಲಿ ಕಥಾನಾಯಕಿಯ ಸಾವನ್ನಂತೂ ದೇವರಾಗಲಿ, ಆಚಾರ್ಯರಾಗಲಿ ತಪ್ಪಿಸುವುದಿಲ್ಲ. ಆ 'ಪವಾಡವೊಂದು ನಡೆದಿಲ್ಲ !'

'ಮೀಸಲು ಹೂವು' ಬರೆದ ಲೇಖಕಿ ಪುಷ್ಪಾ ಎನ್. ರಾವ್. ಆದರೆ ಈಗಾಗಲೇ ಪ್ರಸ್ತಾಪಿಸಿರುವ ಅನೇಕ ಕಾದಂಬರಿಗಳಿಗಿಂತ ಇದೇನು ವಿಭಿನ್ನವಾಗಿಲ್ಲ. ಉಲ್ಲೇಖಾರ್ಹ ಅಂಶಗಳೂ ಇಲ್ಲ. ಬಡ ಕುಟುಂಬದವರಲ್ಲಿ ಉತ್ತಮ ಹೆಣ್ಣು ಮಕ್ಕಳು, ಕೆಟ್ಟ

ಹುಡುಗ, ಶ್ರೀಮಂತ ಕುಟುಂಬದಲ್ಲಿ ಪೋಲಿ ಹುಡುಗ – ಹೀಗೆ ಸಿದ್ಧಸೂತ್ರ ಸ್ವಭಾವಗಳನ್ನು ಹುರಿ ಮಾಡಿ ಬರೆದ ಕೃತಿ ಇದು. ಕೆಟ್ಟ ಹುಡುಗ ಕಡೆಯಲ್ಲಿ ಒಳ್ಳೆಯವನಾಗಿ ಎಲ್ಲವೂ ಸುಖಾಂತವಾಗಬೇಕಲ್ಲ? ಅದೂ ಆಗುತ್ತದೆ. ನಡುವೆ ಹುಡುಗಿಯ ವಿವಾಹದ ಪ್ರಸ್ತಾಪ, ವಿಲನ್ ಒಬ್ಬನ ಪ್ರವೇಶ, ಉದಾತ್ತ ವ್ಯಕ್ತಿಯಿಂದ ವಿವಾಹ ತಪ್ಪಿ ಆಕೆಯನ್ನು ಉದಾತ್ತನೇ ವರಿಸುವುದು – ಇಂಥ ವಿವರಗಳು ಸಿನಿಮಾ, ಸಾಹಿತ್ಯಗಳಲ್ಲಿ ಹಳಸಲಾಗಿವೆಯೆಂಬುದನ್ನು ಊಹಿಸಬಹುದು. ಓದುಗರ ಮನಸ್ಸಿನಲ್ಲಿ ಹೆಚ್ಚೇನನ್ನೂ ತುಂಬದೆ ಬೇಸರ ಕಳೆಯಲೆಂದು ಕೃತಿ ಕೊಡುವ ಲೇಖಕಿಯರ ದೃಷ್ಟಿ ಅಭಿವ್ಯಕ್ತಿ ಇನ್ನಾದರೂ ಸುಧಾರಿಸಬೇಕು.

—ಬರಗೂರು ರಾಮಚಂದ್ರಪ್ಪ

೦ ೦ ೦ ೦ ೦ ೧

ಅನುವಾದಿತ

1980ರ ಸಾಲಿನಲ್ಲಿ ಅನ್ಯಭಾಷೆಗಳಿಂದ ಅನುವಾದವಾಗಿ ಕನ್ನಡಕ್ಕೆ ಬಂದಿರುವ ಸಾಮಾಜಿಕ ಕಾದಂಬರಿಗಳಲ್ಲಿ ನಮ್ಮ ಪರಿಶೀಲನೆಗೆ ಇಲ್ಲಿ ಒಳಪಡುವ ಕೃತಿಗಳು ಹನ್ನೊಂದು. ಇವುಗಳಲ್ಲಿ ಈ ವರ್ಷ ಇಂಗ್ಲಿಷ್ ಭಾಷೆಯ ಮೂಲಕವಾಗಿ ಕನ್ನಡ ಕಾದಂಬರಿ ಪ್ರಕಾರಕ್ಕೆ ಸೇರ್ಪಡೆಯಾಗಿರುವ ಕೃತಿಗಳ ಸಂಖ್ಯೆ ಮಿಗಿಲಾಗಿರುವುದು ಗಮನಾರ್ಹ ಸಂಗತಿ. ಈ ವರ್ಷ ಬಂದಿರುವ ಅನುವಾದಿತ ಕಾದಂಬರಿಗಳು ಸಂಖ್ಯಾ ದೃಷ್ಟಿಯಿಂದ ಕಳೆದ ವರ್ಷಕ್ಕಿಂತ ಹೆಚ್ಚಿಲ್ಲದಿದ್ದರೂ ಗುಣಮಟ್ಟಕ್ಕೆ ಹೋಲಿಸಿದರೆ ಬಹು ಎತ್ತರಕ್ಕೆ ಏರುತ್ತವೆ. ರಷ್ಯನ್, ನಾರ್ವೇಜಿಯನ್, ಇಂಗ್ಲಿಷ್ – ಭಾಷೆಗಳ ಸುಪ್ರಸಿದ್ಧ ಕೃತಿಗಳನ್ನಾಯ್ದು ಅವುಗಳನ್ನು ಕನ್ನಡಿಸಿದ ಅನುವಾದಕರು, ಮತ್ತು ಅವುಗಳ ಪ್ರಕಾಶಕರು ನಮ್ಮ ಅಭಿನಂದನೆಗೆ ಪಾತ್ರರು. 'ಅಗ್ನಿದೀಕ್ಷೆ', 'ಪುನರಪಿ ಜನನಂ', 'ಹಸಿವು', 'ಫಾದರ್ ಸೆರ್ಗಿಯಸ್', 'ಗಾಜಿನ ಗೋಡೆಗಳು' ಇವೇ ಮೊದಲಾದುವು ಆಯಾದೇಶದ ಸಾಹಿತ್ಯದ ವಿಶಿಷ್ಟ ರೀತಿಯ ಸಾಂಸ್ಕೃತಿಕ ದಾಖಲೆಗಳಿಂದಾಗಿ ಮಹತ್ವ ಪೂರ್ಣವೆನಿಸುತ್ತವೆ.

ನಿಕೋಲಾಯ್ ಆಸ್ಟ್ರೋವ್‌ಸ್ಕಿಯವರ ಕಾದಂಬರಿ 'How the steel was tempered'ನ ಕನ್ನಡ ಅನುವಾದ 'ಅಗ್ನಿದೀಕ್ಷೆ'. ಇದನ್ನು ಅನುವಾದಿಸಿದವರು ಕೆ. ಎಲ್. ಗೋಪಾಲ ಕೃಷ್ಣಯ್ಯ. ಹೋರಾಟದ ಬದುಕಿನ ದಟ್ಟ ಚಿತ್ರಣವನ್ನು ಕಟ್ಟಿಕೊಡುವ ಈ ಕಾದಂಬರಿ ಓದುಗರಿಗೆ ಅಪೂರ್ವ ಅನುಭವವನ್ನು ನೀಡುತ್ತದೆ. ಇದು ಒಂದು ರೀತಿಯಲ್ಲಿ ಆಸ್ಟ್ರೋವ್‌ಸ್ಕಿಯ ಜೀವನದ ಮಹತ್ವದ ಎಳೆಗಳನ್ನು ಹಾಸು-ಹೊಕ್ಕಾಗಿ ಚಿತ್ರಿಸುತ್ತದೆ. ಈ ಕೃತಿ ಎರಡು ಭಾಗಗಳಲ್ಲಿ ಹಮ್ಮಿಕೊಂಡಿದೆ. ಮೊದಲ ಭಾಗ

ದಲ್ಲಿ ಪಾವೆಲ್ ಕೋರ್ಚಾಗಿನ್ ಎಂಬ ಮುಗ್ಧ ಬಾಲಕನ ಬಡತನ, ತುಂಟತನ, ಶೀಘ್ರ ಕೋಪ,ಅನಂತರ ಅವನು ಚಳುವಳಿಯಲ್ಲಿ ಅನಿವಾರ್ಯವಾಗಿ ಭಾಗವಹಿಸಬೇಕಾಗಿ ಬರುವ ಘಟನಾವಳಿಗಳು ವರ್ಣಿತವಾಗಿವೆ. ಎರಡನೆಯ ಭಾಗವು ಅವನ ಪ್ರೇಮ ಪ್ರಕರಣ ಗಳು ಮತ್ತು ಕಷ್ಟದಲ್ಲಿ ಸಿಲುಕಿ ಅನುಭವದ ಗಟ್ಟಿತನದಿಂದ ರೂಪುಗೊಂಡ ಅವನ ಬದುಕು ಅವನನ್ನು ಪ್ರಸಿದ್ಧ ಕ್ರಾಂತಿಕಾರಿಯಾಗಿ ಕಮ್ಯುನಿಸ್ಟ್ ಪಕ್ಷದ (ಬಾಲ್ಶೆವಿಕ್) ಒಬ್ಬ ಚುರುಕು ಹಾಗೂ ಉತ್ಸಾಹಿ ಕಾರ್ಯಕರ್ತನಾಗಿ ರೂಪಿಸಿದ ಬಗೆಯನ್ನು ಚಿತ್ರಿಸುತ್ತದೆ. ಕಮ್ಯುನಿಸ್ಟ್ ಪಕ್ಷದ ಟೊಳ್ಳುತನ, ಅಧಿಕಾರಿಗಳ ಸ್ವಾರ್ಥ, ಲಾಲಸೆ, ಅಶಿಸ್ತು, ವಂಚನೆ–ಇವುಗಳ ವಿರುದ್ಧ ಸಿಡಿದೆದ್ದು ಆ ಪಕ್ಷವನ್ನು ಸಧೃಡಗೊಳಿಸಲು ಹಂತಹಂತವಾಗಿ ಶ್ರಮಿಸುತ್ತಾನೆ. ಈ ರೀತಿ ಅವಿರತವಾದ ಹೋರಾಟದ ಪರಿಣಾಮವಾಗಿ ಪಾವೆಲ್ ದಾರುಣ ರೋಗಕ್ಕೆ ಬಲಿಯಾಗುತ್ತಾನೆ. ಕಾದಂಬರಿಯ ಕಡೆಯ ಭಾಗದ ಪುಟಗಳ ವಿವರಣೆ ಓದುಗರ ಹೃದಯ ಮಿಡಿಯುವಂತಿದೆ. ಪಾವೆಲ್ ರೋಗಿಯಾಗಿದ್ದರೂ ತನ್ನ ಗುರಿ ಸಾಧನೆಗೆ ನಿಷ್ಟವಾಗಿ ದುಡಿಯುತ್ತ, ಅದಮ್ಯವಾದ ಜೀವನೋತ್ಸಾಹವನ್ನು ಕಳೆದುಕೊಳ್ಳದೆ ಕೆಚ್ಚಿನಿಂದ ಬದುಕುತ್ತಾನೆ. ತನ್ನ ಬದುಕಿನ ಕಡೆಯ ದಿನಗಳನ್ನು ಅಧ್ಯಯನ ಸೃಷ್ಟ್ಯಾತ್ಮಕ ಬರವಣಿಗೆಗಾಗಿ ಮೀಸಲಾಗಿಟ್ಟು ತನ್ನ ಬದುಕಿನಲ್ಲಿ ಹೊಸ ಅರ್ಥವನ್ನು ಕಂಡುಕೊಳ್ಳುತ್ತಾನೆ.

"ತನಗೆ ವಿಧೇಯನಾಗಿರಲು ನಿರಾಕರಿಸುವಂಥ ಘಾತುಕ ಶರೀರ ಹಾಗೂ ಕೆಲಸ ಮಾಡುವುದಕ್ಕಾಗಿ ಹಾತೊರೆಯುವ, ಬಿರುಗಾಳಿ ಚಂಡಮಾರುತಗಳ ಮಧ್ಯೆಯೂ ಎಲ್ಲಾ ರಣಾಂಗಣಗಳಲ್ಲೂ ಮುಂದುವರೆಯುತ್ತಾ ಹೋಗುತ್ತಿರುವ ಯೋಧರ ಸಾಲಿನಲ್ಲಿ ಜೊತೆಗಿರುವುದಕ್ಕಾಗಿ ಹಾತೊರೆಯುವ ಬಾಲ್ಶೆವಿಕ್‌ನ ಹೃದಯ ಇವೆರಡರ ಜೋಡಿಯೂ ಒಂದೇ ಮಾನವ ವ್ಯಕ್ತಿಯಲ್ಲಿರುವುದಕ್ಕಿಂತ ಹೆಚ್ಚು ದುರಂತವಾದುದು ಬೇರೊಂದು ಇರಲಿಕ್ಕೆ ಸಾಧ್ಯವೇ ?" (ಪು. 694). ಶಾರೀರಕ ವಾಗಿ ನಿಶ್ಯಕ್ತನಾದ, ಅಸಹಾಯಕನಾದ ಪಾವೆಲ್‌ನ ಈ ಮಾತು ಅವನ ಮನೋವೇದನೆಯ ಆಳವೆಷ್ಟೆಂಬುದನ್ನು ತೋರಿಸುತ್ತದೆ. ಈ ಭಾಗದ ವಿವರಣೆಯು ಆಸ್ಟ್ರೋವ್‌ಸ್ಕಿಯ ಆತ್ಮವೃತ್ತವಾಗಿದೆ.

'ಅಗ್ನಿದೀಕ್ಷೆ' ಸ್ವಾತಂತ್ರ್ಯೋತ್ತರ ರಷ್ಯಾದ ರಾಜಕೀಯ, ಸಾಮಾಜಿಕ, ಆರ್ಥಿಕ ಜೀವನವು ಹೊಸದಾಗಿ ರೂಪುಗೊಳ್ಳುತ್ತಿದ್ದ ಸಂಧಿಕಾಲದಲ್ಲಿ ರಚಿತವಾದ ಕೃತಿ ಯಾದ್ದರಿಂದ ಆ ಕಾಲದ ಸ್ಥಿತಿ-ಗತಿಗಳ ಚಿತ್ರಣವನ್ನು ವಿಶಿಷ್ಟ ರೀತಿಯಲ್ಲಿ ದಾಖಲೆ ಗೊಳಿಸುತ್ತದೆ. ಇಲ್ಲಿ ಚಿತ್ರಿತವಾಗಿರುವ ಕೆಲವು ಸ್ತ್ರೀ ಪಾತ್ರಗಳ ಸ್ನೇಹಮಯತೆ, ಕಷ್ಟಸಹಿಷ್ಣುತೆ, ನೈಜ ಪ್ರೀತಿ, ಮಾನವೀಯತೆ – ಇವು ಉಲ್ಲೇಖನೀಯ. ಕೆಲವು ಭಾಗದ ದೀರ್ಘ ವಿವರಣೆಗಳನ್ನು ಹಿತಮಿತಗೊಳಿಸಿದ್ದರೆ ಈ ಕೃತಿ ಇನ್ನಷ್ಟು ರೋಚಕವಾಗಿರುತ್ತಿತ್ತು. 700 ಪುಟಗಳಿಗೂ ಮೀರಿದ ಈ ಸುದೀರ್ಘ ಕಾದಂಬರಿ ಯನ್ನು ಅಚ್ಚುಕಟ್ಟಾಗಿ, ಸಹಜ ಸುಂದರ ಭಾಷೆಯಲ್ಲಿ ಅನುವಾದಿಸಿರುವ ಅನುವಾದ

ಕರು ಈ ವರ್ಷ ಒಂದು ಅಪೂರ್ವ ಕೃತಿಯನ್ನು ಕೊಟ್ಟಿದ್ದಾರೆಂದು ಹೆಮ್ಮೆಯಿಂದ ಹೇಳಬಹುದು. ಖಾಂಡೇಕರರ 'ಯಯಾತಿ' (ಅನು : ಇನಾಂದಾರ್)ಯ ನಂತರದಲ್ಲಿ ಬಂದ ಒಂದು ಉತ್ತಮ ಅನುವಾದ ಕೃತಿ ಎಂದು 'ಅಗ್ನಿದೀಕ್ಷೆ'ಯನ್ನು ಹೆಸರಿಸಬಹುದು.

ರಾಮಚಂದ್ರ ಉಚ್ಚಿಲ್-ಅವರು ರೂಪಾಂತಿಸಿರುವ 'ಪುನರಪಿ ಜನನಂ'ಎಂಬುದು 'ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ' ಪತ್ರಿಕೆಯ ಸಂಪಾದಕರಾದ ಎಂ. ವಿ. ಕಾಮತ್ ಅವರ ಮೊದಲ ಕಾದಂಬರಿ. ಇದರ ಮೂಲ ಇಂಗ್ಲಿಷ್ ಕೃತಿ ಇನ್ನೂ ಅಚ್ಚಾಗಿಲ್ಲ. "ಜೀವನದಲ್ಲಿ ಉನ್ನತ ಆದರ್ಶವೊಂದನ್ನು ಇಟ್ಟುಕೊಂಡ ತರುಣ ಅದನ್ನು ಸಾಧಿಸಲು ಎಷ್ಟು ಹೆಣಗಬೇಕು. ಎಂಥ ಬೆಲೆ ತೆರಬೇಕು, ಎಷ್ಟು ಜನರನ್ನು ದುಃಖಕ್ಕೆ ಗುರಿಪಡಿಸಬೇಕು ಎಂಬುದನ್ನು ಈ ಕಾದಂಬರಿ ಪೃಥಕ್ಕರಿಸುತ್ತದೆ" ಎಂದು ಲೇಖಕರು ನಿವೇದಿಸಿಕೊಂಡಿದ್ದಾರೆ. ಈ ಮಾತು ಕಾದಂಬರಿಯಲ್ಲಿ ಸಮರ್ಥಿತವಾಗುತ್ತದೆ.

ಈ ಕೃತಿಯ ಪ್ರಮುಖ ಪಾತ್ರವಾದ ಗಣೇಶನ ಚಿಂತನೆಯಲ್ಲಿ ಮತ್ತೊಂದು ಮುಖ್ಯ ಪಾತ್ರವಾದ ರಮೇಶನ ಕತೆ ಸುರುಳಿ ಸುರುಳಿಯಾಗಿ ಬಿಚ್ಚಿಕೊಳ್ಳುತ್ತಾ ಹೋಗುವುದು ಈ ಕೃತಿಯ ವಿಶೇಷವಾದ ತಂತ್ರ. ತಬ್ಬಲಿಯಾದ ಗಣೇಶನನ್ನು ಪೈ ಕುಟುಂಬದ ಯಜಮಾನಿ 'ಅಕ್ಕ' ಅಕ್ಕರೆಯಿಂದ ಸಾಕಿ ಸಲಹುತ್ತಾಳೆ. ಅಕ್ಕನ ಮೊಮ್ಮಗ ರಮೇಶ ಮತ್ತು ಗಣೇಶ ಇವರಿಬ್ಬರಿಗೂ ಇಪ್ಪತ್ತೊಂದು ವರ್ಷಗಳಷ್ಟು ಅಂತರವಿದ್ದರೂ ಇಬ್ಬರ ನಡುವಿನ ನಂಟು ಅಸಾಮಾನ್ಯವಾದುದು. ಅಕ್ಕ, ರಮೇಶ ಮತ್ತು ಗಣೇಶ ಈ ಮೂವರೂ ಯಾವುದೋ ಆಂತರಿಕ ಸೂತ್ರದಿಂದ ಕಟ್ಟಿ ಹಾಕಲ್ಪಟ್ಟವರಂತೆ ಅವರುಗಳ ನಡುವೆ ಹೇಳಿಕೊಳ್ಳಲಾಗದ ಆತ್ಮೀಯತೆ ಉಂಟಾಗುತ್ತದೆ. ಸದಾ ಗಂಭೀರವಾಗಿ, ಅಂತರ್ಮುಖಿಯಾಗಿ, ಜಿಜ್ಞಾಸುವಾಗಿ, ಜ್ಞಾನಪಿಪಾಸುವಾಗಿ, ನಿರ್ಲಿಪ್ತನಾಗಿ ಇರುತ್ತಿದ್ದ ರಮೇಶ ಭಾವುಕತೆಗೆ ಬಲಿಯಾಗದೆ ತನ್ನ ಬಾಳಿನ ಗುರಿಯಾದ ಧ್ಯಾನಾಪೇಕ್ಷ ಸತ್ಯಶೋಧನೆಯ ಮಾರ್ಗದಲ್ಲಿ ನಡೆದು ಆತ್ಮೋನ್ನತಿಯನ್ನು ಸಾಧಿಸುತ್ತಾನೆ. ರಮೇಶನ ಈ ಬಗೆಯ ವಿಚಿತ್ರ ಸ್ವಭಾವವನ್ನು ಅರಿಯದ ವ್ಯವಹಾರಿಕ ದೃಷ್ಟಿಯ ಜನ ಅವನನ್ನು ಅರ್ಥ ಮಾಡಿಕೊಳ್ಳಲಾಗದೆ ಕೊರಗುತ್ತಾರೆ. ರಮೇಶನ ಸ್ನೇಹ, ಪ್ರೀತಿಯಿಂದ ವಂಚಿತರಾಗಿ ಅತೀ ದುಃಖಕ್ಕೆ ಸಾವಿಗೆ ಈಡಾಗುತ್ತಾರೆ. ಗಣೇಶನೊಬ್ಬನಿಗೆ ಮಾತ್ರ ರಮೇಶನ ವ್ಯಕ್ತಿತ್ವದ ಅರಿವಾಗುತ್ತಾ ಹೋಗುತ್ತದೆ, ರಮೇಶನನ್ನು ಮದುವೆಯಾಗಲು ಮನಃಪೂರ್ವಕವಾಗಿ ಬಯಸಿದ ಅಮೆರಿಕದ ರುತ್ ಓಪನ್ ಹೆಮರ್‌ನ ಆಕಸ್ಮಿಕ ಸಾವಿನಿಂದಾಗಿ ರಮೇಶ ತನ್ನ ಹಿಂದಿನ ನಿರ್ಧಾರಕ್ಕೆ ಅಂಟಿಕೊಳ್ಳುವ ತೀರ್ಮಾನ ತೆಗೆದುಕೊಳ್ಳುತ್ತಾನೆ. ಇದು 'ಪುನರಪಿ ಜನನಂ'ನ ರಮೇಶನ ಕಥೆ. ರಮೇಶನ ಆತ್ಮವೃತ್ತದ ಜೊತೆ ಜೊತೆಯಲ್ಲಿ ಗಣೇಶನ ಕಥೆಯೂ

ಬೆಳೆಯುತ್ತಾ ಹೋಗುತ್ತದೆ. ಡೆನಿಸ್, ಕಮಲ, ರಾಧೆ, ಗೋಪಾಲರಾಯ – ಮೊದಲಾದ ಪಾತ್ರಗಳು ಜೀವಂತವಾಗಿ ಕಂಗೊಳಿಸಿವೆ. ಗಣೇಶ–ಡೆನಿಸ್‌ರ ಪ್ರಣಯ ಕಡೆಗೆ ವಿವಾಹದಲ್ಲಿ ಮುಕ್ತಾಯವಾಗಿ ಅವರು ಭಾರತಕ್ಕೆ ಬಂದು ನೆಲೆಸುವ ಚಿತ್ರಣ ಸಹಜ ರೀತಿಯಲ್ಲಿ ಮೂಡಿಬಂದಿದೆ.

ಈ ಕಾದಂಬರಿಯ ಕಥೆಯು 40, 50 ವರ್ಷಗಳ ಹಿಂದೆ ಭಾರತವು ಆಂಗ್ಲರ ಆಡಳಿತದಲ್ಲಿದ್ದ ಸಂದರ್ಭದಲ್ಲಿ ಮೊದಲಾಗಿ ಭಾರತದ ಸ್ವಾತಂತ್ರ್ಯಾನಂತರದ 4,5 ವರ್ಷಗಳಲ್ಲಿ ಮುಗಿಯುತ್ತದೆ. ಕತೆಯ ಸ್ಥಳ, ಪರಿಸರ ಮತ್ತು ಪಾತ್ರಗಳು ಭಾರತ ಅಮೆರಿಕಾ, ಪ್ಯಾರಿಸ್–ಬಾನ್‌ದೇಶಗಳ ನಡುವೆ ಓಡಾಡಿವೆ. ಹೀಗಾಗಿ ಭಾರತ, ಆಕಾಲದ ಅಮೆರಿಕಾ, ಪ್ಯಾರಿಸ್ ದೇಶಗಳ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಪ್ರಭಾವದ ಮುದ್ರೆ ಕಾದಂಬರಿಯ ಮೇಲೆ ಬಿದ್ದಿದೆ.

ಗಂಭೀರ ವಸ್ತುವೊಂದನ್ನು ವೈಚಾರಿಕ ಹಿನ್ನೆಲೆಯಲ್ಲಿ ಸಮರ್ಥವಾಗಿ ನಿರೂಪಿಸಿರುವ ಈ ಕಾದಂಬರಿ ಕನ್ನಡಕ್ಕೆ ಒಂದು ಒಳ್ಳೆಯ ಕೊಡುಗೆ. ರಾಮಚಂದ್ರ ಉಚ್ಚಿಲರ ಭಾಷೆ ಕನ್ನಡದ ಜಾಯಮಾನಕ್ಕೆ ಸೊಗಸಾಗಿ ಹೊಂದಿಕೊಳ್ಳುತ್ತದೆ. ಮೂಲ ಲೇಖಕರು 'ನಿವೇದನೆ' ಯಲ್ಲಿ "ಇದೇ ನನ್ನ ಮೊದಲ ಕಾದಂಬರಿ ಪ್ರಾಯ : ಕೊನೆಯದೂ ಆಗಬಹುದೇನೋ" ಎಂದು ಹೇಳಿಕೊಂಡಿದ್ದಾರೆ. ಆದರೆ ಹಾಗಾಗದೆ ಅವರಿಂದ ಇನ್ನಷ್ಟು ಉತ್ತಮ ಕೃತಿಗಳು ಬರಲೆಂದು ಹಾರೈಸೋಣ.

ನೋಬಲ್ ಪಾರಿತೋಷಕ ವಿಜೇತರಾದ ನಾರ್ವೇಜಿಯನ್ ಭಾಷೆಯ, ವಿಖ್ಯಾತ ಕಾದಂಬರಿಕಾರರಾದ ನಟ್‌ಹ್ಯಾಮ್ ಸನ್‌ರ 'Sult' ಕಾದಂಬರಿಯು ಇಂಗ್ಲಿಷಿನ 'Hunger' ಕಾದಂಬರಿಯ ಮೂಲಕ ಕನ್ನಡಕ್ಕೆ 'ಹಸಿವು' ಕಾದಂಬರಿಯಾಗಿ ಬಂದಿದೆ. ಇದರ ಇಂಗ್ಲಿಷ್ ಅನುವಾದಕರು ಇಜರ್ಸನ್. ಇಂಗ್ಲಿಷ್ ಅನುವಾದವನ್ನು ಮೊಖ್ರಾಲಿಯವರು ಕನ್ನಡಿಸಿದ್ದಾರೆ. ಪತ್ರಕರ್ತನೊಬ್ಬನ ಬಡತನ ಹಾಗೂ ಅವನ ಹಸಿವಿನ ತೀವ್ರ ಭೀಕರ ಅನುಭವವನ್ನು ಈ ಕೃತಿ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಹಸಿವಿನ ಪೆಡಂಭೂತ ಈ ಕೃತಿಯ ತುಂಬಾ ವ್ಯಾಪಿಸಿದೆ. ಒಟ್ಟಿನಲ್ಲಿ 'ಹಸಿವೇ' ಈ ಕೃತಿಯ ಕೇಂದ್ರವಸ್ತುವೆನ್ನಬಹುದು. ನಾಯಕನ ಅಲೆಮಾರಿ ಜೀವನ, ಅಸ್ಥಿರತೆ ಇಲ್ಲಿಯ ವೈಶಿಷ್ಟ್ಯ. ಆದರೆ ಹಸಿವಿನ ಬಾಧೆಯಲ್ಲಿಯೂ ಬುದ್ಧಿಯ ಹರಿತ, ಸೃಜನಶೀಲತೆಯನ್ನು ಕಳೆದುಕೊಳ್ಳದ ಪ್ರಾಮಾಣಿಕ ಲೇಖಕನೊಬ್ಬನ ಬಡತನದ ಭೀಕರ ಸ್ವರೂಪದ ನಗ್ನ ಚಿತ್ರಣ ಪುಸ್ತಕದುದ್ದಕ್ಕೂ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಮನುಷ್ಯನ ವ್ಯಕ್ತಿತ್ವದ ಒಳಗನ್ನು ಕೊರೆಯುವ, ಅವನನ್ನು ಅನೇಕ ಅಕೃತ್ಯಗಳಿಗೆ ಪ್ರೇರೇಪಿಸುವ 'ಹಸಿವಿನ' ತೀವ್ರತೆ ಶಕ್ತಿಯುತವಾಗಿ ಚಿತ್ರಿತವಾಗಿದೆ. ಆದರೆ ಹಸಿವಿನ ಸಮಸ್ಯೆ ವ್ಯಕ್ತಿಯೊಬ್ಬನ ಬಡತನದ ಜೀವನವನ್ನು ಮುಗಿಸುವುದರಲ್ಲಿ ಮಾತ್ರ ಈ ಕಾದಂಬರಿ ಪರಿಹಾರವನ್ನು ಕಂಡುಕೊಳ್ಳುತ್ತದೆ.

ಅಂದರೆ ನಾಯಕನ ಬಡತನವನ್ನು ಹೋಗಲಾಡಿಸಲು ಹಡಗಿನ ಕ್ಯಾಪ್ಟನ್ ಅನ್ನು ಸೃಷ್ಟಿಸಿ ಆ ಮೂಲಕ ನಾಯಕನನ್ನು ನಗರದಿಂದಾಚೆ ಸಮುದ್ರದ ಪಯಣಕ್ಕೆ ಕಳುಹಿಸಿ ನಾಯಕನಿಗೆ ಹಡಗಿನಲ್ಲಿ ಕೆಲಸ ದೊರಕಿಸಿ ಕೊಡುವುದರ ಮೂಲಕ ವ್ಯಕ್ತಿಯ ಬಡತನಕ್ಕೆ ಮುಕ್ತಾಯ ಹಾಡುತ್ತದೆ. ಹೀಗಾದುದರಿಂದ 'ಹಸಿವಿನ' ಸಮಸ್ಯೆಯು ಕಾದಂಬರಿ ಹಾಕಿಕೊಂಡಿರುವ ಒಂದು ಪರಿಮಿತ ಚೌಕಟ್ಟಿನಲ್ಲಿ ಸುಲಭವಾದ ಪರಿಹಾರ ಕಂಡುಕೊಳ್ಳುತ್ತದೆ.

ಈ ಕೃತಿಯು ನಟ್‌ಹ್ಯಾಮ್ಸನ್‌ರ ಜೀವನದ ಹಲವಾರು ಅನುಭವಗಳನ್ನು ದಾಖಲುಗೊಳಿಸುತ್ತದೆ. ಅನುವಾದದ ಭಾಷೆ ಹಲವು ಕಡೆ ಗ್ರಾಂಥಿಕವಾಗಿದೆ. ಸಂಭಾಷಣೆಯಲ್ಲಿ ಅಸಹಜತೆ ತಲೆದೋರಿದೆ. ಒಟ್ಟಿನಲ್ಲಿ ನಾರ್ವೇಜಿಯನ್ ಭಾಷೆಯ ಕೃತಿಯನ್ನು ಮೊದಲಬಾರಿಗೆ ಕನ್ನಡಕ್ಕೆ ತಂದು ಕೊಟ್ಟಿರುವ ಅನುವಾದಕರ ಪ್ರಯತ್ನ ಮೆಚ್ಚುವಂತಹುದು.

ಟಾಲ್‌ಸ್ಟಾಯ್ ಅವರ ಕಾದಂಬ 'ಫಾದರ್ ಸೆರ್ಗಿಯಸ್' ಅನ್ನು ಟಿ.ಪಿ. ಅಶೋಕ ಅವರು ಅನುವಾದಿಸಿದ್ದಾರೆ. ವ್ಯಕ್ತಿಯೊಬ್ಬನ ಆಂತರಂಗಿಕ ತುಮುಲವನ್ನು ಧ್ವನಿ ಪೂರ್ಣವಾಗಿ ಈ ಕೃತಿ ಚಿತ್ರಿಸುತ್ತದೆ. ಇಲ್ಲಿಯ ಅನುವಾದದ ಭಾಷೆ ಮೂಲದ ಆಶಯವನ್ನು ಗ್ರಹಿಸುವಲ್ಲಿ ಅರ್ಥ ಸೂಕ್ಷ್ಮತೆಯನ್ನು ಸೆರೆ ಹಿಡಿಯುವಲ್ಲಿ ಫಲಕಾರಿ ಯಾಗಿದೆ.

ಸೆರ್ಗಿಯಸ್ ತಾನಿರುವ ವರ್ಗದ ಹಂತದಿಂದ ಮೇಲೇರಲು ತುರ್ತು ನಿರ್ಧಾರ ತೆಗೆದುಕೊಂಡು ಪಾದ್ರಿಯಾಗುತ್ತಾನೆ. ತನ್ನ ಪ್ರೇಯಸಿಯನ್ನು, ತಾಯಿಯ ಒತ್ತಾಯವನ್ನು ನಿರಾಕರಿಸಿ, 'ದೇವರಿಂದ ತನಗೆ ಕರೆ ಬಂದಿದೆ', 'ಆ ಕರೆಯ ಮುಂದೆ ಎಲ್ಲವೂ ಗೌಣ'ವೆಂದು ನಿರ್ಧರಿಸುತ್ತಾನೆ. ಅವನು ಪಾದ್ರಿಯಾದ ಮೇಲೆ ಹೊಸ ಹೊಸ ಎತ್ತರಗಳಿಗೆ ಏರಲು ಪ್ರಯತ್ನಿಸುತ್ತಾನೆ. ಈ ಸಂದರ್ಭದಲ್ಲಿ ಅವನು ತನ್ನ ಅಂತರಂಗ, ಬಹಿರಂಗದ ಪರಿಪೂರ್ಣತೆಗಾಗಿ ಪ್ರಯತ್ನಿಸುತ್ತಾನೆ. ಈ ಸಂಘರ್ಷದ ಸಮಯದಲ್ಲಿ ಅವನು ಕಾಮ, ಕ್ರೋಧ, ತನ್ನತನವನ್ನು ಗೆಲ್ಲಲು ತೀವ್ರ ಹೋರಾಟ ನಡೆಸುತ್ತಾನೆ. ಮಾನವರಿಂದ ಪ್ರತ್ಯೇಕವಾಗಿ ಏಕಾಂತದಲ್ಲಿ ವಿರಕ್ತನಾಗಿ ವಾಸಿಸುತ್ತಾ ದೇವರನ್ನು ತಲುಪುವುದು ಇಲ್ಲವೆ ಮಾನವರೊಡನೆ ಇದ್ದು ಕರ್ತವ್ಯ ನಿಷ್ಠನಾಗಿದ್ದು ದೈವತ್ವವನ್ನು ಕಾಣುವುದು - ಇವೆರಡರಲ್ಲಿ ಒಂದನ್ನು ಆರಿಸಿಕೊಳ್ಳಲು ತವಕಿಸುತ್ತಾನೆ. ಮತ್ತು ಇದರಲ್ಲಿ ಯಾವುದು ಸತ್ಯವೆಂಬ ಶೋಧನೆಗೆ ತೊಡಗುವ ಪ್ರಯತ್ನವೂ ಇಲ್ಲಿದೆ. ಕಡೆಗೆ ಪ್ರತಿಷ್ಠಿತವಾದ 'ಪಾದ್ರಿ'ಯ ಸ್ಥಾನವನ್ನು ಬಿಟ್ಟು ಬಾಲ್ಯ ಗೆಳತಿ ಪಾಶೆಂಕಾಳ ಬಳಿಗೆ ಹೋಗಿ ತನ್ನ ಮುಂದಿನ ಸಾಧನೆಯ ಮಾರ್ಗ ಕಂಡುಕೊಳ್ಳುತ್ತಾನೆ. "ದೇವರಿಗಾಗಿ ಬದುಕ್ತಿದೀನಿ ಅಂತ ನಟಿಸ್ತಾ ಮನುಷ್ಯನಿಗಾಗಿಯೇ ಬದುಕ್ತಿದ್ದೆ ; ಆದರೆ ಅವಳು ಮನುಷ್ಯನಿಗಾಗಿ ಬದುಕ್ತಿದೀನಿ ಅಂತ

ತಿಳ್ಕೊಂಡಿದ್ದು ನಿಜವಾಗಿ ದೇವರಿಗಾಗಿ ಬದುಕ್ತಿದಾಳೆ" (ಪು. 71). ಹೀಗೆ ಬದುಕಿನ ಸಾರ್ಥಕ್ಯವನ್ನು ಪಾಶೆಂಕಳಲ್ಲಿ ಕಂಡುಕೊಂಡ ಸೆರ್ಗಿಯಸ್ ಕರ್ತವ್ಯಪರನಾಗಿ ಜನಸೇವೆಯಲ್ಲಿ ತೊಡಗುತ್ತಾನೆ.

ಆಂತರಂಗಿಕ ಹೋರಾಟದ ತೀವ್ರತೆ ಹಾಗೂ ಅರ್ಥಪೂರ್ಣ ಬದುಕಿನ ಸೂಕ್ಷ್ಮ ಎಳೆಗಳನ್ನು ಧ್ವನಿಪೂರ್ಣವಾಗಿ ಚಿತ್ರಿಸಿರುವ ಟಾಲ್‌ಸ್ಟಾಯ್ ಅವರ ಈ ಚಿಕ್ಕಕೃತಿ ಓದುಗರ ಮನಸ್ಸಿನ ಮೇಲೆ ಗಾಢವಾದ ಪರಿಣಾಮ ಬೀರುತ್ತದೆ.

ಕೆ. ಎ. ಅಬ್ಬಾಸ್ ಅವರ ಇಂಗ್ಲಿಷ್ ಕಾದಂಬರಿ 'walls of glass ನ ಕನ್ನಡ ಅನುವಾದ 'ಗಾಜಿನಗೋಡೆಗಳು'. ಇದರ ಅನುವಾದಕರು ಕಾವ್ಯಜೀವಿ. ಈ ಕಾದಂಬರಿಯು ಕೇಂದ್ರ ಪಾತ್ರಗಳಾದ ಜುಲೇಖ ಮತ್ತು ಸಲೀಮರ ನಡುವಿನ ಪ್ರೇಮದ ಬೆಸುಗೆಯನ್ನು ಸೂಕ್ಷ್ಮವಾಗಿ ಚಿತ್ರಿಸುವ ಜೊತೆ ಜೊತೆಗೆ, ಹಲಕೆಲವು ದೇಶಗಳ ಐತಿಹಾಸಿಕ ಘಟನೆಗಳನ್ನು ಹೆಣೆಯುವುದರಿಂದ ಈ ಕೃತಿಗೆ ವಾಸ್ತವ ನೆಲೆಗಟ್ಟು ನಿರ್ಮಾಣವಾಗಿದೆ. ಮೂವತ್ತು ವರ್ಷಗಳ ಹಿಂದಿನ ಭಾರತ, ಅಮೆರಿಕ ಚೀನ, ಪ್ಯಾರಿಸ್, ದೇಶಗಳ ಸ್ಥಿತಿಗತಿಗಳ ದಾಖಲೆಯನ್ನು ನೀಡಿರುವ ಕೃತಿಕಾರರು. ಈ ಕೃತಿಗೆ ಹೆಚ್ಚಿನ ವೈವಿಧ್ಯವನ್ನು ತಂಬಿದ್ದಾರೆ. ಮೇಲು ನೋಟಕ್ಕೆ ಇದು ಮಾಮೂಲಿ ಗಂಡು–ಹೆಣ್ಣಿನ ಪ್ರೇಮ ಕತೆಯಂತೆ ಕಂಡರೂ ಕೃತಿಯು ಕೊನೆ ಕೊನೆಗೆ ಅರ್ಥಪೂರ್ಣವಾಗುತ್ತ ಹೋಗುತ್ತದೆ. ಮಾನವರು ತಮ್ಮ ನಡುವೆ ನಿರ್ಮಿಸುವ ಕೃತಕ ಗೋಡೆಗಳಿಂದಾಗಿ ಪ್ರೇಮಿಗಳ ಭವಿಷ್ಯದ -ಮೇಲೆ ಎಂತಹ ಭೀಕರ ಪರಿಣಾಮ ಉಂಟಾಗುತ್ತದೆ ಎಂಬುದನ್ನು ಈ ಕೃತಿ ಸೂಚಿಸುತ್ತದೆ. ಕೃತಕ ಅಡೆತಡೆಗಳಾದ ಮಾನವ ನಿರ್ಮಿತ ಗಾಜಿನ ಗೋಡೆಗಳನ್ನು ಒಡೆದು ಒಂದಾದ ಪ್ರೇಮಿಗಳು ರಾಜಕೀಯ ಕಾರಣ ಕಾರಣದಿಂದಾಗಿ ಮತ್ತೆ ಬೇರೆಯಾಗುತ್ತಾರೆ. ಜುಲೇಖ-ಸಲೀಂರ ಭೇಟಿಯ ಸಂದರ್ಭಗಳು, ಬದುಕಿನುದ್ದಕ್ಕೂ ಆಶೆ-ನಿರಾಸೆಯ ನಡುವೆ ಈ ಪ್ರೇಮಿಗಳು ಪಡುವ ಕಾತರ, ತವಕಗಳ ಚಿತ್ರಣ ಹಾಗೂ ಪ್ರೇಮಿಗಳ ನಡುವಿನ ತೀವ್ರ ಸೆಳೆತದ ಚಿತ್ರಣ– ಇವು ಶಕ್ತಿಯುತ್ತವಾಗಿ ಚಿತ್ರಿತವಾಗಿವೆ. ಕೆಲವು ಪಾತ್ರಗಳಿಂದ ಧಾರಾಳವಾಗಿ ಮಾಡಿಸುವ ಬಿರುಸಿನ ರಾಜಕೀಯ ಚರ್ಚೆ ಅನಗತ್ಯವಾಗಿ ಲಂಬಿಸಿದೆ ಎನ್ನಬಹುದು. ಕೊನೆಯಲ್ಲಿ ಬರುವ ಭಾರತದ ವಿಭಜನೆಯ ಸಂದರ್ಭ, ಸಲೀಂನ ಅನಾರೋಗ್ಯ ಇವು ಪ್ರೇಮಿಗಳ ಭವಿಷ್ಯತ್ತಿನ ಮೇಲೆ ಬಿರುವ ಪರಿಣಾಮದ ಸಂಗತಿಗಳಾದ ಕೃತಿಗೆ ಗಟ್ಟಿತನವನ್ನು ತಂದು ಕೊಟ್ಟಿವೆ. ಲೇಖಕರ ರಾಜಕೀಯ ಪ್ರಜ್ಞೆ ಅಲ್ಲಲ್ಲಿ ಮಿಂಚಿ ಇದೊಂದು ಉತ್ತಮ ಪ್ರೇಮ -ಕತೆಯಾಗಿ ಮಾರ್ಪಟ್ಟಿದೆ. ಅನುವಾದದ ಭಾಷೆ ಅಷ್ಟೊಂದು ತೃಪ್ತಿಕರವಾಗಿಲ್ಲ. ಗ್ರಾಂಥಿಕ ಭಾಷೆ, ಸಂಭಾಷಣೆಯ ಅಸಹಜತೆಯಿಂದಾಗಿ ಈ ಕೃತಿ ಅಷ್ಟೊಂದು ಉತ್ತಮ ಮಟ್ಟವನ್ನು ಕಾಯ್ದುಕೊಳ್ಳುವುದಿಲ್ಲ. ಒಟ್ಟಿನಲ್ಲಿ ಮೂಲದ ಸಾರವನ್ನು ಓದುಗರಿಗೆ ಒದಗಿಸುವಲ್ಲಿ ಈ ಕೃತಿ ಹಿಂದೆ ಬೀಳುವುದಿಲ್ಲ ಎಂಬುದೇ ಸಾಮಾಧಾನಕರವಾದ ಸಂಗತಿ. ವಾಸಿರೆಡ್ಡಿ ಸೀತಾದೇವಿ

ಅವರ ತೆಲುಗು ಕಾದಂಬರಿ 'ಸಮತಾ'ವನ್ನು ಅನುವಾದಿಸಿದವರು ಕೇಸರಿ ಅವರು. 'ಸಮತಾ' ಕಾದಂಬರಿಯ ನಾಯಕಿ ಆರುಂಧತಿಯ ಬಾಳಿನ ಏಳು-ಬೀಳಿನ ಚಿತ್ರಣ ಇಲ್ಲಿದೆ. ಅವಳ ಕೌಟುಂಬಿಕ, ಸಾಮಾಜಿಕ, ರಾಜಕೀಯ ಜೀವನದ ನಾನಾ ಮುಖಗಳನ್ನು ಈ ಕಾದಂಬರಿ ವಿಡಂಬನಾತ್ಮಕವಾಗಿ ಚಿತ್ರಿಸುತ್ತದೆ. ಈ ಕೃತಿಯ ಕಡೆಯ ಪುಟಗಳಲ್ಲಿ ಚಿತ್ರಿತವಾಗಿರ ಹೆಣ್ಣಿನ ಬಾಳಿನ ನೋವಿನ ಎಳೆಗಳು ಹೃದಯ ಸ್ಪರ್ಶಿಯಾಗಿದೆ. ಒಟ್ಟಿನಲ್ಲಿ ಈ ಕೃತಿ ಕುತೂಹಲದಿಂದ ಓದಿಸಿಕೊಳ್ಳುತ್ತದೆ. ಅನುವಾದ ಚೆನ್ನಾಗಿದೆ.

ಹೊ.ರ.ಸ. ಅವರು ತೆಲುಗಿನಿಂದ ಅನುವಾದಿಸಿರುವ ಮಾಲತಿ ಚಂದೂರ್ ಅವರ 'ಅಪರಾಜಿತೆ' ನ್ಯಾಯವಾದಿಯ ಘನತೆ, ವ್ಯಕ್ತಿತ್ವ, ವೃತ್ತಿಧರ್ಮವನ್ನು ಎತ್ತಿ ಹಿಡಿಯುವ ಹೊಸ ಬಗೆಯ ಕಾದಂಬರಿ. ಸೀನಿಯರ್ ಲಾಯರ್ ವೆಂಕಟ ರಾಮನ್‌ನ ಪಾತ್ರ ಅತಿಯಾದ ಆದರ್ಶದಿಂದ ಕೂಡಿದೆ. ಇವನಲ್ಲಿ ಜೂನಿಯರ್ ಆಗಿದ್ದ ಸುಮಿತ್ರ ತನ್ನ ವೃತ್ತಿಧರ್ಮವನ್ನು ಕಾಪಾಡಲು ಹಿಂದೊಮ್ಮೆ ತನಗೆ ವಂಚಿಸಿದ ಅಪರಾಧಿಯ ಮೇಲೆ ಹಗೆ ತೀರಿಸಿಕೊಳ್ಳುವ ಅವಕಾಶ ಸಿಕ್ಕಾಗಲೂ ಕೂಡ ಹಾಗೆ ಮಾಡದೆ ಅವನ ಪರವಾಗಿ ವಾದಿಸಿ ವಿಜಯಿಯಾಗುತ್ತಾಳೆ. ಸುಮಿತ್ರ ವಂಚನೆಗೆ ಒಳಗಾದ ಇಡೀ ಘಟನೆ ಸಹಜವಾಗಿ ಬರದೆ ಸಿನೀಮಿಯ ಎನಿಸುತ್ತದೆ. ಮಾಮೂಲಿ ಧಾಟಿಯ ವಸ್ತುವಿನಿಂದ ಬೇರೆಯಾಗಿ ನಿಲ್ಲುವ ಈ ಕೃತಿಯನ್ನು ಒಮ್ಮೆ ಓದಬಹುದು.

ಕೊಮ್ಮೂರಿ ವೇಣುಗೋಪಾಲ್ ಅವರ ತೆಲುಗು ಕಾದಂಬರಿ 'ಭಾರತಿ'ಯನ್ನು ಅನುವಾದಿಸಿದವರು ಮಿಸ್. ಸಂಪತ್. ಇದು ಕುಷ್ಟರೋಗಿಗಳ ಬಗೆಗೆ ಅನುಕಂಪ ವನ್ನು ಬಯಸುವ ಕಾದಂಬರಿ. ಈ ಕೃತಿಯ ನಾಯಕಿ ಭಾರತಿ ಕುಷ್ಟರೋಗಿ. ತಾನು ಇನ್ನೊಬ್ಬರಿಗೆ ಭಾರವಾಗಬಾರದೆಂದು ಸ್ವತಂತ್ರ ಜೀವನ ನಡೆಸುವ ಭಾರತಿ ಆದರ್ಶ ಮತ್ತು ಮಾನಸಿಕ ತೊಳಲಾಟಗಳನಡುವೆ ಹೊಯ್ದಾಡುತ್ತಾಳೆ. ಗೆಳತಿಯ ಜೀವನ ಒಂದುಘಟ್ಟ ಮುಟ್ಟುವವರೆಗೆ ತಾನು ವಿವಾಹವಾಗಬಾರದೆಂದು ಶಪಥ ಮಾಡುವ ಮಲ್ಲಿಕಾ ಮತ್ತೊಂದು ತುದಿಯಲ್ಲಿ ನಿಲ್ಲುತ್ತಾಳೆ. ಭಾರತಿ ಸಂಪ್ರದಾಯವನ್ನು ತೊರೆದು ಆದರ್ಶ ವೈದ್ಯನೊಬ್ಬನನ್ನು (ಈತನೂ ಕಡೆಗೆ ಕುಷ್ಠರೋಗಿಯಾಗುತ್ತಾನೆ) ಮರುಮದುವೆಯಾಗುವ ಘಟನೆ ಕತೆಗೆ ಒಂದು ರೀತಿಯ ತಿರುವನ್ನು ಕೊಡುತ್ತದೆ. ಇಲ್ಲಿನ ಅನುವಾದದ ಭಾಷೆ ಇನ್ನಷ್ಟು ಸಹಜವಾಗಿರಬೇಕಿತ್ತು. ಗ್ರಾಂಥಿಕ ಭಾಷೆ, ಸಂಭಾಷಣೆಯಲ್ಲಿನ ಕೃತಕತೆಯಿಂದಾಗಿ ಓದುಗರಿಗೆ ಕಿರಿಕಿರಿಯಾಗುತ್ತದೆ.

ವಂಶಿ ಅವರು ಅನುವಾದಿಸಿರುವ ಉಮ ಅವರ 'ಅಬಲೆ'ಪುರುಷರ ದಬ್ಬಾಳಿಕೆಗೆ ಒಳಗಾಗುವ ಅಮಾಯಕ ಹೆಣ್ಣಿನ ಸುತ್ತ ರಚಿತವಾದ ಕಾದಂಬರಿ. ತೀರ ಹಳಸಲು

ವಸ್ತು, ಮಾಮೂಲಿ ಧಾಟಿಯ ನಿರೂಪಣೆಯುಳ್ಳ ಈ ಕಾದಂಬರಿ ಕನ್ನಡಕ್ಕೆ ಹೊಸ ತೇನನ್ನೂ ನೀಡುವುದಿಲ್ಲ.

ನಿರುದ್ಯೋಗಿಯೊಬ್ಬನ ಮಾನಸಿಕ ಹೊಯ್ದಾಟ, ಸ್ನೇಹದ ಸೋಗಿನಲ್ಲಿ ಸ್ವಾರ್ಥ ಸಾಧನೆ – ಇವನ್ನು ಚಿತ್ರಿಸುವ ಇಚ್ಛಾಪುರುಪು ರಾಮಚಂದ್ರ ಅವರ 'ಸ್ನೇಹ' ; ಪ್ರೇಮಿಸಿಯೂ ಮುನ್ನುಗ್ಗುವ ಧೈರ್ಯವಿಲ್ಲದೆ ನಾಲ್ಕುಗೋಡೆಗಳ ಮಧ್ಯೆ ಬಂಧಿತಳಾಗಿ ಸಾವನ್ನಪ್ಪುವ ಹತಭಾಗ್ಯ ಹೆಣ್ಣಿನ ಸುತ್ತ ರಚಿತವಾದ ನವೀನ್ ಅವರ 'ಕರುಣ'–ಇವು ನಿರಾಯಾಸವಾಗಿ ಓದಿಸಿಕೊಳ್ಳುವ ಕೃತಿಗಳು. ಇವನ್ನು ಅನುವಾದಿಸಿದವರು ಎಂ. ಎಲ್. ರಾಘವೇಂದ್ರ ರಾವ್. ಇವೂ ಕೂಡ ತೀರ ಸಾಮಾನ್ಯ ಮಟ್ಟದ ಕಾದಂಬರಿಗಳು. ಇದುವರೆಗೆ ಸಮೀಕ್ಷಿಸಿದ ಅನುವಾದಿತ ಕಾದಂಬರಿಗಳ ಪೈಕಿ ಇಂಗ್ಲಿಷ್ ಮೂಲಕ ಕನ್ನಡಕ್ಕೆ ಬಂದ 4, 5 ಕೃತಿಗಳು ಕನ್ನಡದ ವಿಚಾರವಂತ ಓದುಗರು ಗಂಭೀರವಾಗಿ ಪರಿಗಣಿಸುವಂತಹುಗಳಾಗಿವೆ. ಇವು ಈ ವರ್ಷ ಕನ್ನಡಕ್ಕೆ ಬಂದ ಅಮೂಲ್ಯವೂ, ಮೌಲಿಕವೂ ಆದ ಕೊಡುಗೆಗಳೆಂಬುದರಲ್ಲಿ ಯಾವ ಅನುಮಾನವೂ ಇಲ್ಲ.

—ಎನ್. ವಿ. ವಿಮಲ

# ವಿಮರ್ಶೆ

**ಕಿ. ರಂ. ನಾಗರಾಜ**

ಎಂಭತ್ತರ ಸಾಹಿತ್ಯ ವಿಮರ್ಶೆಯ ಪುಸ್ತಕಗಳು ವೈವಿಧ್ಯದಿಂದ ಕೂಡಿದೆ. ಈ ಅವಧಿಯಲ್ಲಿ ಮಹತ್ವದ ಲೇಖಕರು, ವಿಮರ್ಶಕರು ತಮ್ಮ ಸಂಕಲನಗಳನ್ನು ಹೊರ ತಂದಿದ್ದಾರೆ. ಅಲ್ಲದೆ ಎಂದಿನಂತೆ ನಮ್ಮ ಹಿಂದಿನ ಕವಿಗಳನ್ನು ಕುರಿತ ಕೆಲವು ಪುಸ್ತಕಗಳು ಪ್ರಕಟವಾಗಿವೆ. ಅಲ್ಲದೆ 'ಕಾವ್ಯಾರ್ಥ ಪದಕೋಶ'ದಂಥ ವಿಮರ್ಶೆಯ ಮೂಲಭೂತ ಸಾಮಗ್ರಿಯ ಪುಸ್ತಕ ಪ್ರಕಟವಾಗಿದೆ. ಅನೇಕ ವಿಚಾರ ಸಂಕಿರಣ ಗಳಲ್ಲಿ ಮಂಡಿತವಾದ ಲೇಖನಗಳು ಲೇಖಕರ ಸಂಕಲನಗಳಲ್ಲಿ ಸೇರಿದೆ.

ಬೆಂಗಳೂರು ವಿಶ್ವವಿದ್ಯಾಲಯ, ಮೈಸೂರು ವಿಶ್ವವಿದ್ಯಾಲಯ ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ವಿಭಾಗಗಳು ನಡೆಸಿರುವ ಕುವೆಂಪು, ಹರಿದಾಸ ಸಾಹಿತ್ಯ ಹಾಗೂ ಬಸವ ಮಾರ್ಗವನ್ನು ಕುರಿತು ನಡೆಸಿದ ವಿಚಾರ ಸಂಕಿರಣಗಳ ಲೇಖನಗಳ ಸಂಗ್ರಹಗಳ ಈ ಅವಧಿಯಲ್ಲಿ ಹೊರಬಂದಿದೆ.

ಕನ್ನಡ ವಿಮರ್ಶೆಯ ವಿಭಿನ್ನ ಆಯಾಮಗಳನ್ನು ಈ ವರ್ಷದ ಪುಸ್ತಕಗಳ ಮೂಲಕ ತಿಳಿಯಬಹುದಾಗಿದೆ. ಬಹುಮಟ್ಟಿನ ಕೃತಿಗಳು ನಮ್ಮ ಸಮಕಾಲೀನ ವಾಗ್ವಾದಗಳ ಭೂಮಿಕೆಯನ್ನು ಒಳಗೊಂಡದ್ದಾಗಿರುವುದರಿಂದ ಹೆಚ್ಚು ಆಸಕ್ತಿಯನ್ನು ಹುಟ್ಟಿಸುತ್ತದೆ.

ಶ್ರೀ ಕುವೆಂಪು : (ಸಂ) ಜಿ. ಎಸ್. ಶಿವರುದ್ರಪ್ಪ

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ಪ್ರತಿವರ್ಷ ನಡೆಸುವ ವಿಚಾರ ಸಂಕಿರಣ ಅಂಗವಾಗಿ, ಮಂಡಿತವಾದ ಹದಿನಾಲ್ಕು ಲೇಖನಗಳ ಸಂಕಲನ. "ಕುವೆಂಪು ಅವರ ಸಾಹಿತ್ಯ ನಿರ್ಮಿತಿಯ ಹಿನ್ನೆಲೆಯನ್ನೂ ಹಲವು ಮಗ್ಗುಲುಗಳನ್ನೂ, ಒಲವು ನಿಲುವುಗಳನ್ನೂ, ಹೊಸ ನಿಟ್ಟಿನಿಂದ ಪರಿಶೀಲಿಸಿದವು ಗಳಾಗಿದೆ". (ಮುನ್ನುಡಿ).

ಈ ಹದಿನಾಲ್ಕು ಲೇಖನಗಳಲ್ಲಿ ಕುವೆಂಪುರವರ ಸಾಹಿತ್ಯ ಸೃಷ್ಟಿಯ ಅನೇಕ ನೆಲೆಗಳನ್ನು ವಿಮರ್ಶಕರು ಪರಿಶೀಲಿಸಿದ್ದಾರೆ. 'ಪರಂಪರೆ ಮತ್ತು ಕುವೆಂಪು'

(ಪೂರ್ಣಚಂದ್ರ ತೇಜಸ್ವಿ) ಈ ಲೇಖನದಲ್ಲಿ ಕಲಾನಿರ್ಮಿತಿಯ ಸಂದರ್ಭದಲ್ಲಿ ಕವಿ ವ್ಯಕ್ತಪಡಿಸುವ ಚಾರಿತ್ರಿಕ ಪ್ರಜ್ಞೆ ಮತ್ತು ಒತ್ತಡಗಗಳು ಒಂದು ಸಾಹಿತ್ಯ ಪರಂಪರೆ ಯಲ್ಲಿ ಹೇಗೆ ವ್ಯಕ್ತವಾಗುತ್ತದೆಂಬುದನ್ನು ಕುವೆಂಪುರವರ ಸಾಹಿತ್ಯಕ್ಕೆ ಹೇಗೆ ಇದೆ ಎಂಬುದನ್ನು ಇಲ್ಲಿ ಚರ್ಚೆಗೆ ಗುರಿಪಡಿಸಿದ್ದಾರೆ. ಇಡೀ ಕನ್ನಡ ಕಾವ್ಯ ಪರಂಪರೆಯ ಸಂದರ್ಭಕ್ಕಿಂತ ಆಧುನಿಕ ಸಂದರ್ಭ ಹೇಗೆ ಬೇರೆ ಎಂಬುದನ್ನು ಕುವೆಂಪುರವರಿಗೆ ಸಾಂಪ್ರದಾಯಿಕ ಅರ್ಥದ ಪರಂಪರೆ ಎಂಬುದು ಇಲ್ಲವೇ ಇಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಕುವೆಂಪು ಅವರ ಸಾಹಿತ್ಯದ ಸಂದರ್ಭವನ್ನು ಕನ್ನಡ ಸಾಹಿತ್ಯ ಚರಿತ್ರೆಯ ಮೇಲೆ ಪೃಥಕ್ಕರಿಸಿದಾಗ ಹೊಮ್ಮುವ ಅನೇಕ ವಿಮರ್ಶನ ಸಾಧ್ಯತೆಗಳು, ಹೊಳಹು ಗಳು ಈ ಲೇಖನದಲ್ಲಿ ಇದೆ.

ಶ್ರೀ ಕುವೆಂಪು ಅವರ ಕೃತಿಗಳ ತಾತ್ವಿಕ ಹಿನ್ನೆಲೆಯನ್ನು ಸುಜನಾ ಅವರು ಚರ್ಚಿಸಿದ್ದಾರೆ. ಶ್ರೀರಾಮಾಯಣ ದರ್ಶನಂ, ಬೆರಳ್‌ಗೆಕೊರಳ್, ಶ್ಮಶಾನ ಕುರುಕ್ಷೇತ್ರ ಮತ್ತು, ಮಲೆಗಳಲ್ಲಿ ಮದುಮಗಳು-ಈ ಕೃತಿಗಳ ಮೂಲಕ ಪ್ರಕಟ ಗೊಳ್ಳುವ ತಾತ್ವಿಕತೆ ಹೇಗೆ ವಿಭಿನ್ನ ಸಾಧ್ಯತೆಗಳತ್ತ ಚಾಚಿಕೊಂಡಿದೆ ಎಂಬುದನ್ನು ತೋರಿಸುತ್ತಾರೆ.

'ಕುವೆಂಪು ಅವರ ಕಾವ್ಯಭಾಷೆ' (ಜಿ. ಎಸ್. ಸಿದ್ಧಲಿಂಗಯ್ಯ) 'ಪಾಶ್ಚಾತ್ಯ 'ಮಹಾಕಾವ್ಯದಿಂದ ಕುವೆಂಪು ಪಡೆದ ಪ್ರೇರಣೆಗಳು' (ಎಲ್. ಎಸ್. ಶೇಷಗಿರಿರಾವ್) 'ಪಾಶ್ಚಾತ್ಯ ರೋಮ್ಯಾಂಟಿಕ್ ಕವಿಗಳು ಮತ್ತು ಕುವೆಂಪು' (ಪ್ರಭುಶಂಕರ) ಈ ಲೇಖನ ಗಳು ಕುವೆಂಪುರವರ ಕಾವ್ಯದ ಅಭ್ಯಾಸಕ್ಕೆ ತಕ್ಕ ಪೂರಕ ಸಾಮಗ್ರಿಗಳನ್ನು ಒದಗಿಸು ತ್ತವೆ.

'ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ ಚಿತ್ರ' (ಬಿ. ಕೃಷ್ಣಪ್ಪ), ಈ ಲೇಖನ ಸಾಹಿತ್ಯದಿಂದ ಹೊಮ್ಮುವ ಜೀವನಾನುಭವಗಳನ್ನು ಗ್ರಹಿಸದೆ ಲೇಖಕನ ಮೂಲಕ ಕೆಲವು ಆಶಯಗಳು ಸಾಧಿತವಾಗಬೇಕಾಗಿತ್ತೆಂಬ ತೀರ್ಮಾನಕ್ಕೆ ಬರುತ್ತಾರೆ. "ಕುವೆಂಪು ಅವರಲ್ಲಿರುವ ಸಂದಿಗ್ಧತೆಗಳು, ಮಿತಿಗಳು, ವರ್ಗಹಿತಾಸಕ್ತಿಗಳು, ದಲಿತ ಜೀವನ ಚಿತ್ರಣಕ್ಕೆ ಅಥೆಂಟಿಸಿಟಿಯನ್ನು ಸಮತೋಲನವನ್ನು ತಂದುಕೊಡದೇ ಹೋಗು ತ್ತದೆ". ಎಂಬ ತೀರ್ಮಾನಕ್ಕೆ ಅವರು ಬರುತ್ತಾರೆ. ಕೃಷ್ಣಪ್ಪನವರು ಕಾದಂಬರಿಯಲ್ಲಿ ದಲಿತರ ಜೀವನ ಸಹಾನುಭೂತಿಗೆ ಗುರಿಯಾಗಬೇಕಾಗಿತ್ತೆಂದು ನಿರೀಕ್ಷಿಸುತ್ತಾರೆ. ಈ ನಿರೀಕ್ಷೆಯೇನೋ ಸಹಜವೇ. ಆದರೆ ಸಾಹಿತ್ಯಕೃತಿಯೊಂದರಲ್ಲಿ ಬದುಕಿನ ಗ್ರಹಿಕೆಗಳನ್ನು ಅವುಗಳ ಎಲ್ಲ ಕ್ರಿಯಾ ಸಂಬಂಧಗಳ ಮೂಲಕ ಒಂದು ನಾಟಕೀಯ ವಾಗ್ವಾದವಾಗಿ ಪ್ರಕಟಗೊಳ್ಳುತ್ತದೆಂಬುದನ್ನು ಅವರು ಸಂಪೂರ್ಣವಾಗಿ ಮರೆ ತಂತಿದೆ. ಇಲ್ಲವೆ ಉದ್ದೇಶಪೂರ್ವಕವಾಗಿ ಕೈ ಬಿಟ್ಟಿದ್ದಾರೆ. ಹೀಗಾಗಿ ದಲಿತರ ಸಾಮಾಜಿಕ ಇರುವಿಕೆಯ ಸಂಧರ್ಭವನ್ನು ಲೇಖಕ ಸಹಾನುಭೂತಿಯಿಂದ ನೋಡುವ

ಕ್ರಮವನ್ನೇ ಅವರು ಪ್ರಶ್ನಿಸಿದಂತೆ ತೋರುತ್ತದೆ. ಮೇಲುವರ್ಗದ ದಬ್ಬಾಳಿಕೆಗೆ ದಲಿತರು ಗುರಿಯಾಗಿದ್ದಾರೆ ಎಂಬುದನ್ನು ಚಿತ್ರಿಸಲು ಕೂಡಾ ಒಬ್ಬ ಲೇಖಕನಿಗೆ ಉನ್ನತವಾದ ಸಹಾನುಭೂತಿ ಅಗತ್ಯ. ಇಂಥ ನೆಲೆಗಳು ನಮ್ಮ ಸಮಕಾಲೀನ ವಾಸ್ತವಗಳನ್ನು ಅಭಿವ್ಯಕ್ತಿಸಲು ಅತ್ಯಂತ ಅಗತ್ಯವಲ್ಲವೆ ? ಈ ದೃಷ್ಟಿಯಿಂದ ಒಂದು ಕೃತಿ ತನ್ನ ಕಾಲದ ಆಗುಹೋಗುಗಳ ಕ್ರಿಯಾತ್ಮಕವಾದ ಜೀವಂತ ದಾಖಲೆ ಎಂದು ತಿಳಿಯುವುದು ಮುಖ್ಯವೆನಿಸುತ್ತದೆ.

'ಕುವೆಂಪು ಕೃತಿಗಳಲ್ಲಿ ವರ್ಣ–ವರ್ಗ ಸಂಘರ್ಷ' (ಡಿ. ಆರ್. ನಾಗರಾಜ್) ಈ ಲೇಖನ ರಾಷ್ಟ್ರೀಯ ಆಂದೋಲನದಲ್ಲಿ ಸಾಂಪ್ರದಾಯಿಕ ಮೌಲ್ಯ ಗಳ ಪುನರೋತ್ಥಾನ ನಡೆಯುವ ಕ್ರಮವನ್ನು ಸಾಂಸ್ಕೃತಿಕವಾದ ವಿಶ್ಲೇಷಣೆಯ ಮೂಲಕ ವಿಶ್ಲೇಷಿಸಿದ್ದಾರೆ. ವರ್ಣ-ವರ್ಗಗಳ ಸಂಘರ್ಷ ಕುವೆಂಪು ಅವರ ಸೃಜನ ಶೀಲ ಅನ್ವೇಷಣೆಯ ಮೇಲೆ ಏರ್ಪಟ್ಟಿರುವ ನಿಯಂತ್ರಣಗಳನ್ನು ದಾಟಿದೆ ಎಂಬ ನಿಲುವಿಗೆ ಬರುತ್ತಾರೆ. ಜಾತಿಪದ್ಧತಿಯ ಬಗೆಗಿನ ಕುವೆಂಪು ಅವರ ವಿಚಾರ ಗಳಲ್ಲಿ ಅನೇಕ ಸಂಗತಿಗಳು ಹೊಂದಾಣಿಕೆಯಾಗದೇ ಹೋಗುತ್ತದೆಂಬುದನ್ನು ಬೆರಳ್‌ಗೆಕೊರಳ್ ಮತ್ತು ಜಲಗಾರ ನಾಟಕಗಳ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ.

'ಕುವೆಂಪು ಕವಿತೆಗಳಲ್ಲಿ ಸಾಮಾಜಿಕ ಪ್ರಜ್ಞೆ' (ಶೂದ್ರಶ್ರೀನಿವಾಸ) ಲೇಖನದಲ್ಲಿ ಕುವೆಂಪುರವರ ಕಾವ್ಯದಲ್ಲಿ ಸಾಮಾಜಿಕ ಪ್ರಜ್ಞೆ ಪ್ರಕಟವಾಗಿರುವ ನೆಲೆಗಳನ್ನು ಚರ್ಚಿಸ ಲಾಗಿದೆ.

'ವಿಮರ್ಶಕರಾಗಿ ಕುವೆಂಪು' (ಕೆ. ವಿ. ನಾರಾಯಣ) ಈ ಲೇಖನದಲ್ಲಿ ಕುವೆಂಪುರವರ ವಿಮರ್ಶನ ನಿಲುವುಗಳು ಮತ್ತು ಕಾವ್ಯಮೀಮಾಂಸೆಯ ನೆಲೆಗಳನ್ನು ಗಂಭೀರವಾಗಿ ವಿಶ್ಲೇಷಿಸಲಾಗಿದೆ. ಸೃಜನಶೀಲ ಲೇಖಕರಾಗಿ ವಿಮರ್ಶೆ ಮತ್ತು ಸಾಹಿತ್ಯ ಮೀಮಾಂಸೆಯ ತತ್ವಗಳನ್ನು ಮೀರುವ ಕುವೆಂಪುರವರು ತಮ್ಮ ಕಾವ್ಯ ಮೀಮಾಂಸೆ ತತ್ವಗಳ ನೆಲೆಯಲ್ಲಿ ಏಕಾತ್ಮವಾದಿ ನೆಲೆಯಲ್ಲಿ ನಿಲ್ಲುತ್ತಾರೆ. ಅಲ್ಲದೆ ತತ್ವ ಮತ್ತು ಅದರ ಪ್ರಯೋಗದ ನೆಲೆಗಳು ಒಂದರಿಂದ ಮತ್ತೊಂದು ಬೆಳೆಯುವುವಿಲ್ಲವೆಂಬ ತೀರ್ಮಾನಕ್ಕೆ ಕವೆಂಪುರವರ ವಿಮರ್ಶೆ ಮತ್ತು ಮೀಮಾಂಸೆಯ ಮೂಲಕ ಬಂದಿದ್ದಾರೆ.

'ಸಮಕಾಲೀನತೆಯಲ್ಲಿ ಕುವೆಂಪು – ಕ್ರಿಯೆ ಪ್ರತಿಕ್ರಿಯೆ' (ಎಂ. ಡಿ. ನಂಜುಂಡ ಸ್ವಾಮಿ) ಈ ಲೇಖನ ನಮ್ಮ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವಿಚಾರ ಮಾಡಿರುವ ಲೇಖನ. 'ಕುವೆಂಪು ಕೃತಿಗಳಲ್ಲಿ ಜಾತಿಪ್ರಜ್ಞೆ ಮಾತ್ರ ಇದೆ. ವರ್ಗ ಪ್ರಜ್ಞೆ ಇಲ್ಲ' ಎನ್ನುವ ಅಭಿಪ್ರಾಯ ಕೂಡ ಭಾರತದ ಜಾತಿಪದ್ಧತಿಯ ಸಮಗ್ರ ಅನುಭವ ಇಲ್ಲದವರಿಂದ ಬರುತ್ತಿದೆ ಎಂದು ಹೇಳಬೇಕಾಗುತ್ತದೆ, 'ವರ್ಗ ಹೋರಾಟ ಮತ್ತು ವರ್ಗ ಸಂಘರ್ಷ ಸಿದ್ಧಾಂತಗಳಲ್ಲಿ ನಂಬಿಕೆ ಇರುವವರು ಇಲ್ಲದ ವರ್ಗಗಳನ್ನು ಹುಡುಕುತ್ತಾ ಕಾಲವ್ಯಯ ಮಾಡುತ್ತಿರು ವುದು ಜಾತಿಪದ್ಧತಿಯ ಬಿಗಿಮುಷ್ಟಿಯನ್ನು ಅರ್ಥಮಾಡಿಕೊಂಡಿರದ ಕಾರಣದಿಂದ'

ಇಂಥ ಅಭಿಪ್ರಾಯಗಳು ಕುವೆಂಪು ಅಧ್ಯಯನಕ್ಕೆ ಕೆಲವು ಹೊಸನೆಲೆಗಳನ್ನು ಸೇರಿಸಲು ಸಹಾಯವಾಗುತ್ತದೆ.

'ಕುವೆಂಪುರವರ ನಾಟಕಗಳು ರಂಗ ಪ್ರಯೋಗದ ದೃಷ್ಟಿಯಿಂದ' (ಪ್ರಸನ್ನ) ಸಮಕಾಲೀನ ರಂಗಭೂಮಿಯ ಸಮಸ್ಯೆಗಳನ್ನು ಹಿನ್ನೆಲೆಗೆ ತಂದುಕೊಂಡು ಕುವೆಂಪು ರವರ ನಾಟಕಗಳ ಸಾಧ್ಯತೆಗಳನ್ನು ಇಲ್ಲಿ ಲೇಖಕರು ಚರ್ಚಿಸಿದ್ದಾರೆ. 'ಕಾವ್ಯದಲ್ಲಿ ಮಹತ್ತನ್ನು ಸಾಧಿಸುವ ಕುವೆಂಪು ನಾಟಕದಲ್ಲಿ ಸೋಲುತ್ತಾರೆ,' 'ಅಸ್ಪಷ್ಟವಾದ ಪಾತ್ರರಚನೆ ಕಲ್ಪನೆಯಲ್ಲಿ ಮೂಡಿದ ಕನಸಿನ ರೀತಿಯ ವಾತಾವರಣ ಸೃಷ್ಟಿಯಿಂದಾಗಿ ಕುವೆಂಪು ಅವರ ನಾಟಕಗಳೆಲ್ಲ ಹೆಚ್ಚಾಗಿ ಓದುವ ನಾಟಕಗಳಾಗಿ ಪರಿಣಮಿಸಿದುವು' ಎಂಬುದು ಅವರ ನಿಲುವು.

ಅನಿವಾರ್ಯ: ಜಿ. ಎಚ್. ನಾಯಕ

ಈ ಸಂಕಲನದಲ್ಲಿ ಆರು ಲೇಖನಗಳಿವೆ. ಕನ್ನಡ ನವ್ಯಕಾವ್ಯವನ್ನು ಕುರಿತ ಪರಿಚಯಾತ್ಮಕ ಸಮೀಕ್ಷೆ', 'ಕನ್ನಡ ಸಣ್ಣಕತೆ ; ಒಲವು ನಿಲುವುಗಳು' ಮತ್ತು 'ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ; ನನ್ನ ಅನಿಸಿಕೆಗಳು', ಹಾಗೂ 'ತೇಜಸ್ವಿಯವರ ಸಾಹಿತ್ಯ' ಇವುಗಳು ಪುಸ್ತಕದ ಮುಖ್ಯ ಭಾಗವಾಗಿದೆ.

'ಕನ್ನಡ ನವ್ಯಕಾವ್ಯವನ್ನೂ ಕುರಿತ ಪರಿಚಯಾತ್ಮಕ ಸಮೀಕ್ಷೆ, ನಮ್ಮ ಈ ಕಾಲದ ಕಾವ್ಯಾಸಕ್ತಿಗಳ ವಲಯುವನ್ನು ಪರಿಚಯ ಮಾಡಿಕೊಡುತ್ತವೆ. ಬಹುತೇಕ ಕವಿಗಳ ಕೃತಿಗಳನ್ನು ಒಂದೇ ಲೇಖನದಲ್ಲಿ ಅಡಗಿಸುವ ಸಂದರ್ಭದಲ್ಲಿ ವಿಮರ್ಶಕ ಎದುರಿಸ ಬಹುದಾದ ಮಿತಿಗಳನ್ನು ಈ ಲೇಖನದಲ್ಲಿ ನಾವು ಕಾಣುತ್ತೇವೆ. ಲೇಖನದ ಮೊದಲಭಾಗ ನಮ್ಮ ಕಾವ್ಯದ ನಿಲುವುಗಳನ್ನು ಕುರಿತು ಚರ್ಚೆಯನ್ನು ಆರಂಭಿಸು ತ್ತಾರಾದರೂ ಲೇಖನ ಕವಿಗಳ ಪಟ್ಟಿಯಿಂದ ಕಿಕ್ಕಿರಿದು ತುಂಬಿದೆ.

'ಕನ್ನಡ ಸಣ್ಣಕತೆ ; ಒಲವು ನಿಲುವುಗಳು,' ಎಂಬ ಲೇಖನ ನವೋದಯ, ಪ್ರಗತಿಶೀಲ, ನವ್ಯ ಹಾಗೂ ನವ್ಯೋತ್ತರ ಮಾರ್ಗಗಳಲ್ಲಿ ಬೆಳೆದಿರುವ ಸಣ್ಣಕತೆಯ ಸ್ವರೂಪ. ತಂತ್ರ ಮತ್ತು ಅನ್ವೇಷಣೆಯ ನೆಲೆಗಳನ್ನು ಸೂಕ್ಷ್ಮವಾಗಿ ಲೇಖಕರು ವಿಶ್ಲೇಷಿಸಿದ್ದಾರೆ. ನವೋದಯ ಲೇಖಕರು, "ಸಾಮಾಜಿಕ ಸಭ್ಯತೆ ಸೌಜನ್ಯಗಳ ಚೌಕಟ್ಟಿನಲ್ಲಿಯೇ ಅಪೇಕ್ಷಿತ ಪರಿಣಾಮ ರಮಣೀಯತೆಯನ್ನೂ ಸಾಧಿಸುತ್ತಾರೆ", ಸಮಾಜವನ್ನು ಪ್ರಗತಿಶೀಲರು ನೋಡಿದ ಕ್ರಮ ಪರಂಪರಾಗತ ಮೌಲ್ಯಾದರ್ಶಗಳಿಗಿಂತ ಭಿನ್ನವಾದುದ್ದಲ್ಲ". ಎಂಬ ತೀರ್ಮಾನಕ್ಕೆ ಬರುತ್ತಾರೆ. ನವ್ಯಕತೆಗಾರರು "ಭಾವನಾತ್ಮಕ ಒತ್ತಡ, ಬೌದ್ಧಿಕ ಅರಿವು ಬದುಕಿನ ನಿಷ್ಠುರ ವಾಸ್ತವವನ್ನು ಮೀರುವ ಕನಸುಗಾರಿಕೆ......ಅಂಶಗಳು ಪ್ರಜ್ಞಾವಂತ ಮನಸ್ಸಿನ ಸಂದರ್ಭದಲ್ಲಿ ಏಕಕಾಲದಲ್ಲಿ ಎದುರಾಗು"ವ ನೆಲೆಗಳನ್ನು ಒಳಗೊಂಡಿರುವ ಬಗೆಯನ್ನು ಚರ್ಚಿಸಿದ್ದಾರೆ.

'ತೇಜಸ್ವಿಯವರ ಸಾಹಿತ್ಯವನ್ನು ಕುರಿತು ಸುದೀರ್ಘವಾದ ಲೇಖನ ಈ ಪುಸ್ತಕದ ತೂಕವನ್ನು ಹೆಚ್ಚಿಸಿದೆ. ಚಿರವಾಸ್ತವಕ್ಕೂ, ಚರವಾಸ್ತವಕ್ಕೂ ಇರುವ ಸಂಬಂಧವನ್ನು ಅನ್ವೇಶಿಸುವ ಪ್ರಶ್ನೆ ತೇಜಸ್ವಿಯವರ ಕೃತಿಗಳ ಮುಖ್ಯ ಭಿತ್ತಿ ಎಂಬುದು ನಾಯಕರ ನಿಲುವು. ಅಲ್ಲದೆ ಮನುಷ್ಯ ಚೇತನದ ಅಸಂಬದ್ಧ ದುರಂತ ಸ್ಥಿತಿ ತೇಜಸ್ವಿಯವರ ಕೃತಿಗಳಲ್ಲಿ ವಿಭಿನ್ನ ಸೂಕ್ಷ್ಮಗಳೊಂದಿಗೆ ಕಾಣಿಸುವ ಕ್ರಮ ಅನೇಕ ಒಳನೋಟಗಳೊಂದಿಗೆ ದಾರಿಮಾಡಿಕೊಟ್ಟಿದೆ. ತೇಜಸ್ವಿಯವರು ನವ್ಯ ಸಾಹಿತ್ಯ ಸಂದರ್ಭವನ್ನು ಹೊಸಗುಣಾತ್ಮಕ ಸಾಧ್ಯತೆಯಲ್ಲಿ ಪುನರ್ರಚಿಸಿಕೊಳ್ಳುತ್ತಿರುವ ಹಂತದಲ್ಲಿರುವಂತೆಯೇ ತೋರುತ್ತದೆ ಎಂಬ ಅವರ ನಿಲುವು ತೇಜಸ್ವಿಯವರ ಕೃತಿಗಳ ಸೂಕ್ಷ್ಮ ಅಭ್ಯಾಸದಿಂದ ಹೊರಪಟ್ಟ ವಿಚಾರವಾಗಿದೆ.

'ಪರಂಪರೆ ಮತ್ತು ಸಮಕಾಲೀನ ಕನ್ನಡ ಸಾಹಿತ್ಯ' ಎಂಬ ಲೇಖನ ಅನೇಕ ಪ್ರಶ್ನೆಗಳನ್ನು ಎತ್ತುತ್ತದೆ. ಈ ಸಮಸ್ಯೆಗಳ ಸಂದರ್ಭದಲ್ಲಿ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯಗಳ ಕುರಿತ ಪ್ರಸ್ತಾಪ ಬಂದಿದೆ. "ಇವು ಮೂರು ಆಯಾಧರ್ಮದ ತಿಳುವಳಿಕೆಗೆ ಬದ್ಧವಾಗಿ ತಮ್ಮ ಪ್ರತಿಭೆಯನ್ನು ಕವಿಗಳು ಬೆಳಗುವ ಅವಕಾಶವಷ್ಟನ್ನೇ ಕಲ್ಪಿಸಿದ ಪರಂಪರೆಗಳು" ಎಂಬ ತೀರ್ಮಾನಕ್ಕೆ ಬರುತ್ತಾರೆ. ಯಾವುದೇ ಪರಂಪರೆಯ ಒಂದು ಕೃತಿಯ ಹುಟ್ಟು ಯಾವುದೇ ಒತ್ತಡಗಳಿಂದ ರೂಪುಗೊಂಡದ್ದಾಗಿರುತ್ತದೆ. ಅದು ತನ್ನ ಸಂಸ್ಕೃತಿಯ ಅನೇಕ ಧಾತುಗಳ ಪ್ರಕ್ರಿಯೆಗೆ ಮೈಕೊಟ್ಟದ್ದೂ ಆಗಿರುತ್ತದೆ. ಹೀಗಾಗಿ ಕನ್ನಡ ಸಾಹಿತ್ಯದ ಮಹತ್ವದ ಕೃತಿಗಳು ಇಂತಹ ಪ್ರಕ್ರಿಯೆಯ ಸ್ವರೂಪವನ್ನು ಕಲಾತ್ಮಕವಾಗಿ ಅಭಿವ್ಯಕ್ತಿಸಿದೆ. ಧರ್ಮ ನಮ್ಮ ಸಾಹಿತ್ಯಕ್ಕೆ ಪ್ರೇರಣೆಯಾಗಿದೆ, ಒತ್ತಡವಾಗಿ ಬಂದಿರಬಹುದಾದರೂ ನಮ್ಮ ಕವಿಗಳ ಮೂಲಕ ಅವು ಬದುಕಿನ ಸಂಘರ್ಷವನ್ನು ತನ್ನ ಎಲ್ಲ ಸಾಧ್ಯತೆಗಳೊಂದಿಗೆ ಅಭಿವ್ಯಕ್ತಿಸಿದೆ ಎನಿಸುತ್ತದೆ. ಹೀಗಾಗಿ ಬದ್ಧ ಸಾಹಿತ್ಯದ ಅನ್ವಯವನ್ನು ಕನ್ನಡ ಕಾವ್ಯ ಪರಂಪರೆಗೆ ಅನ್ವಯಿಸುವುದು ಎಷ್ಟು ಸಮಂಜಸವೆಂಬ ಪ್ರಶ್ನೆ ಇಲ್ಲಿ ಮುಖ್ಯವಾಗಿದೆ.

ಈ ಲೇಖನಗಳ ಹಿನ್ನೆಲೆಗೆ ಸುಶಿಕ್ಷಿತ ಮನಸ್ಸೊಂದು ಸಂವೇದನಾಶೀಲವಾಗಿ ಕೆಲಸಮಾಡಿದೆ. ನಾಯಕರ ಕೆಲವು ಹೇಳಿಕೆಗಳು ಸಮ್ಮತವೆನಿಸದಿದ್ದರೂ ಚರ್ಚೆಗೆ ಅವಕಾಶಮಾಡಿಕೊಡುವ ದೃಷ್ಟಿಯಿಂದ ಅಭ್ಯಾಸಕ್ಕೆ ಸಹಾಯಕವಾಗಿದೆ.

ಕಾವ್ಯಾರ್ಥ ಪದಕೋಶ : (ಸಂ) ಜಿ. ಎಸ್. ಶಿವರುದ್ರಪ್ಪ, ಕೆ. ವಿ. ನಾರಾಯಣ

ಇತ್ತೀಚಿನ ದಿನಗಳಲ್ಲಿ ಸಾಹಿತ್ಯದ ವಿದ್ಯಾರ್ಥಿಗಳಿಗೆ ಲಭಿಸಿರವ ಒಂದು ಮಹತ್ವದ ಕೊಡುಗೆ. ಭಾರತೀಯ ಮತ್ತು ಪಾಶ್ಚಾತ್ಯ ಸಾಹಿತ್ಯ ಚಿಂತನೆಗಳ ಸಂದರ್ಭದಲ್ಲಿ ಬಳಕೆಯಾಗುವ ಅನೇಕ ಪರಿಕಲ್ಪನೆಗಳನ್ನೂ ಸೂತ್ರೀಕರಿಸುವ, ವಿವರಿಸುವ ಉದ್ದೇಶವನ್ನು ಹೊಂದಿದೆ.

ಭಾರತೀಯ ಮತ್ತು ಪಾಶ್ಚಾತ್ಯ ವಿಮರ್ಶೆಯ ಪರಿಕಲ್ಪನೆಗಳು ನಮ್ಮ ಸಂದರ್ಭದಲ್ಲಿ ಅನೇಕ ಅವಸ್ಥಾಂತರಗಳನ್ನು ಪಡೆದಿದೆ. ಈ ಎರಡೂ ಚಿಂತನೆಗಳು ವಿಶಿಷ್ಟವಾದ ಹೊಸ ಪರಿಕಲ್ಪನೆಗಳಿಗೆ ದಾರಿಮಾಡಿಕೊಟ್ಟಿದೆ. ಅಲ್ಲದೆ ನಮ್ಮ ಈ ಹೊತ್ತಿನ ಸಾಹಿತ್ಯದ ಅಧ್ಯಯನದ ನೆಲೆಗಳನ್ನೇ ಬದಲಾಯಿಸಿದೆ ಹಾಗೂ ವಿಸ್ತರಿಸಿದೆ. ಇಂಥ ಸಂದರ್ಭದಲ್ಲಿ ನಿಂತು ಸಾಹಿತ್ಯವನ್ನು ನೋಡುವವನಿಗೆ ತಕ್ಕ ಆಕರಗ್ರಂಥಗಳು ಎಷ್ಟು ಅಗತ್ಯವೆಂಬುದನ್ನು ವಿವರಿಸಬೇಕಾಗಿಲ್ಲ.

ಕನ್ನಡದಲ್ಲಿ ಹೊಸ ವಿಮರ್ಶನ ಪರಿಭಾಷೆಯೊಂದು ಖಚಿತಗೊಳ್ಳುತ್ತಿರುವ ಕಾಲದಲ್ಲಿ ಅದನ್ನು ವಿವರಿಸುವ ಮತ್ತು ಅನ್ವಯಿಸುವ ಪ್ರಯತ್ನಕ್ಕೆ ಈ ಕೃತಿ ಪೂರಕ ವಾದದ್ದು.

ನಮ್ಮ ಸಾಹಿತ್ಯದ ಶಿಕ್ಷಣಕ್ಕೆ ಮತ್ತು ವಿಮರ್ಶೆಯ ಪರಿಕಲ್ಪನೆಗಳಲ್ಲಿ ಏಕರೂಪ ವನ್ನು ಸಾಧಿಸುವ ದೃಷ್ಟಿಯಿಂದ ಇಂಥ ಸಾಧನ ಸಾಮಗ್ರಿಗಳು ಹೆಚ್ಚಿನ ಮಾರ್ಗ ದರ್ಶನಕ್ಕೆ ಅವಕಾಶ ಮಾಡಿಕೊಡುತ್ತದೆ. ಸಾಹಿತ್ಯದ ಶ್ರದ್ಧಾವಂತ ವಿದ್ಯಾರ್ಥಿ ಗಳೆಲ್ಲರೂ ಈ ಸಾಧನೆಯನ್ನು ಸ್ವಾಗತಿಸುವುದರಲ್ಲಿ ಸಂದೇಹವಿಲ್ಲ.

ಸಮಕ್ಷಮ : ಯು. ಆರ್. ಅನಂತಮೂರ್ತಿ

ಈ ಸಂಕಲನದಲ್ಲಿ ನಮ್ಮ ಸಮಕಾಲೀನ ಸಾಂಸ್ಕೃತಿಕ ಆಸಕ್ತಿಗಳನ್ನು ಕುರಿತು ನಡೆಸಿರುವ ಚರ್ಚೆ, ಪ್ರತಿಕ್ರಿಯೆ ಹಾಗೂ ವಾಗ್ವಾದಗಳನ್ನು ಒಳಗೊಂಡಿದೆ. ಮೂರು ಸಂದರ್ಶನಗಳಿವೆ. ಅಲ್ಲದೆ ನಮ್ಮ ಲೇಖಕರನ್ನು ಮತ್ತು ಕಲಾವಿದರನ್ನು ಪರಿಚಯ ಮಾಡಿಕೊಡುವ ನಾಲ್ಕು ಟಿಪ್ಪಣಿಗಳಿವೆ. ಮೂರನೆಯ ಭಾಗದಲ್ಲಿ ನಮ್ಮ ಸಂಸ್ಕೃತಿ ಮತ್ತು ರಾಜಕೀಯವನ್ನು ಕುರಿತ ನೆಲೆಗಳನ್ನು ಬೇರೆ ಬೇರೆ ಸಂದರ್ಭಕ್ಕೆ ಸಂಬಂಧಿಸಿದಂತೆ ವಿಚಾರ ಮಾಡಲಾಗಿದೆ. ನಾಲ್ಕನೆಯ ಭಾಗ ಕೆಲವು ಸಾಹಿತ್ಯ ಕೃತಿಗಳ ಬಗೆಗೆ ನಡೆಸಿರುವ ಚರ್ಚೆಯಾಗಿದೆ. 'ಕಾದಂಬರಿ ಮತ್ತು ಹೊಸ ನೈತಿಕ ಪ್ರಜ್ಞೆ' ಎಂಬ ಲೇಖನ ಕಾದಂಬರಿಕಾರನ ತಾತ್ವಿಕ ಸಮಸ್ಯೆಗಳನ್ನು ಕುರಿತು ವಿಚಾರ ಮಾಡಿರುವ ಲೇಖನವಾಗಿದೆ.

ಯಾವುದೇ ಕಾಲಮಾನದ ಒಬ್ಬ ಲೇಖಕ ಕೆಲವು ವಿಶಿಷ್ಟ ರಾಜಕೀಯ ಸಂದರ್ಭ ಗಳಲ್ಲಿ ತನ್ನ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವುದು ಸಾಹಿತ್ಯದ ಅಭ್ಯಾಸಿಗಳಿಗೆ ತುಂಬ ಉಪಯುಕ್ತವಾಗಬಹುದು. ಸಾಮಾಜಿಕ ಆಂದೋಲನಗಳು ಹೇಗೆ ನಮ್ಮ ಸಾಂಸ್ಕೃತಿಕ ಸಂದರ್ಭದ ಭಾಗವೇ ಆಗುತ್ತದೆ. ಎಂಬುದನ್ನು ಇಲ್ಲಿನ ಅನೇಕ ಲೇಖನಗಳು ಪರಿಚಯ ಮಾಡಿಕೊಡುತ್ತದೆ. "ನಮ್ಮ ನಿತ್ಯದ ರಾಜಕೀಯ ಜೀವನವನ್ನು ವೈಚಾರಿಕತೆಯಲ್ಲಿ ತೊಯ್ಯಿಸಿ ಅರ್ಥಮಾಡಿಕೊಳ್ಳಬೇಕೆಂಬ ಹಂಬಲನನ್ನದು. ಹಾಗೆ ಮಾಡದಿದ್ದಲ್ಲಿ ನಮ್ಮ ಸಾಂಸ್ಕೃತಿಕ ಜೀವನ ಅರ್ಥಹೀನವಾಗುತ್ತದೆಂದು ನಾನು ತಿಳಿದಿರುವೆ." ಈ ನಿಲುವು

ಇಲ್ಲಿನ ಬರಹಗಳಲ್ಲಿ ಅತ್ಯಂತ ಗಾಢವಾಗಿ ಖಚಿತಗೊಳ್ಳುತ್ತವೆ. ಅನೇಕ ಹೊಸ ವಾಗ್ವಾದಗಳಿಗೆ, ಚರ್ಚೆಗಳಿಗೆ ದಾರಿ ಮಾಡಿಕೊಡುತ್ತದೆ. ಮುಖ್ಯವಾದ ಅಂಶ ವೆಂದರೆ ಅನಂತಮೂರ್ತಿಯವರು ಈ ಹಿಂದೆ ರೂಪಿಸಿದಂತೆ ಚಿಂತನೆಗಳನ್ನು ಪ್ರಸ್ತುತ ಸಂಕಲನದಲ್ಲಿ ಮುಂದುವರಿಸುತ್ತಿದ್ದಾರೆ ಎನಿಸುತ್ತದೆ. "ಎದುರಾಳಿಯ ಧೋರಣೆ ಬಗ್ಗೆ ಅಸಹನೆ ತಾಳದಂತೆ ನಡೆಸಬೇಕಾದ ಬೌದ್ಧಿಕ ಚರ್ಚೆಯ"...ನೆಲೆಯನ್ನು ಇಲ್ಲಿನ ಲೇಖನಗಳಲ್ಲಿ ಕಾಣಬಹುದು. ಕಾವ್ಯ ಸಂಗತಿ ಮತ್ತು ಇನ್ನಿತರ ಆಸಕ್ತಿಗಳನ್ನು ಕುರಿತಂತೆ ನಡೆಸಿರುವ ಸಂದರ್ಶನಗಳು ಸಾಹಿತ್ಯದ ವಿದ್ಯಾರ್ಥಿಗೆ ಉಪಯುಕ್ತವಾಗಿವೆ.

ಮೂರನೆ ಭಾಗದ ಲೇಖನಗಳು ನಮ್ಮ ಸಮಕಾಲೀನ ರಾಜಕಾರಣದ ಗತಿ ಸ್ಥಿತಿಗಳನ್ನು ಕುರಿತ ಚರ್ಚೆಯನ್ನು ಒಳಗೊಂಡಿದೆ. ನಮ್ಮ ಕಾಲದ ಪ್ರಮುಖ ಸಾಹಿತ್ಯಕ ಘಟನೆಗಳನ್ನು ಕುರಿತು ಲೇಖಕರೊಬ್ಬರ ಪ್ರತಿಕ್ರಿಯೆ ಈ ಭಾಗ ದಲ್ಲಿ ದಟ್ಟವಾಗಿ ಕಾಣಿಸಿಕೊಂಡಿದೆ. ತನ್ನ ಕಾಲಕ್ಕೆ ಪ್ರತಿಕ್ರಿಯಿಸುವುದರ ಮೂಲಕ ಹುಟ್ಟಬಹುದಾದ ಅನೇಕ ಸಮಸ್ಯೆಗಳು ಮತ್ತು ಅವುಗಳನ್ನು ವಿವರಿಸಿಕೊಳ್ಳುವ ಕ್ರಮಗಳನ್ನು ಈ ಸಂಕಲನ ನಮ್ಮ ಮುಂದಿಡುತ್ತದೆ.

ಈ ಸಂಕಲನದಲ್ಲಿನ ವ್ಯಕ್ತಿ ಚಿತ್ರಗಳು, ಸಂದರ್ಶನಗಳು ಇವುಗಳೆಲ್ಲದರ ಹಿಂದೆ ಸಾಹಿತ್ಯದ ಶ್ರೇಷ್ಠತೆಯ ಕಲ್ಪನೆಯನ್ನು ಎಚ್ಚರಗೊಳಿಸುವ ದೃಷ್ಟಿಯಿಂದ ಕೂಡಿ ದ್ದಾಗಿದೆ.

ತುಡಿತ : ಮಾಧವ ಕುಲಕರ್ಣಿ

ಸಂಕಲನದಲ್ಲಿ ಏಳು ಲೇಖನಗಳಿವೆ. ಅದರಲ್ಲಿ ಮೂರು ಲೇಖನಗಳು ಸಮ ಕಾಲೀನ ಕನ್ನಡ ಕವಿತೆಗಳನ್ನು ಕುರಿತದ್ದು. ಉಳಿದ ಮೂರು ಲೇಖನಗಳು ನಾಟಕವನ್ನು ಕುರಿತದ್ದು. ಇನ್ನೆರಡು ಲೇಖನಗಳಲ್ಲಿ ಒಂದು ವಿಮರ್ಶೆಯನ್ನು ಕುರಿತ ಟಿಪ್ಪಣಿಗಳು. ಅನುಬಂಧದಲ್ಲಿ ಸಾಹಿತ್ಯಕ ಸಂದರ್ಭದ ಅನೇಕ ಆಸಕ್ತಿಯನ್ನು ಕುರಿತದ್ದಾಗಿದೆ.

ಚಂದ್ರಶೇಖರ ಕಂಬಾರ ಅವರ ನಾಟಕಗಳು ಹಾಗೂ ಗಿರೀಶ ಕಾರ್ನಾಡರ 'ಅಂಜು ಮಲ್ಲಿಗೆ' ನಾಟಕವನ್ನು ವಿಶ್ಲೇಷಿಸಿರುವ ಲೇಖನ ಅಭ್ಯಾಸ ಪೂರ್ಣವಾಗಿದೆ. 'ಸಾಹಿತ್ಯ ಪ್ರಕಾರವಾಗಿ ನಾಟಕಗಳು' ಎಂಬ ಲೇಖನ ಆಧುನಿಕ ಕನ್ನಡ ನಾಟಕಗಳನ್ನು ಕುರಿತಂತೆ ನಿಲುವು – ತಕ್ಕ ಚರ್ಚೆಯಿಂದ ಸಿದ್ಧವಾಗಿದೆ ಎನ್ನಿಸುವುದಿಲ್ಲ.

ಕುಲಕರ್ಣಿಯವರ ಈ ಪುಸ್ತಕ ನಮ್ಮ ಕಾವ್ಯ ಮತ್ತು ನಾಟಕಗಳನ್ನು ಕುರಿತ ವ್ಯಾಪಕ ಅಭ್ಯಾಸದ ನೆಲೆಗೆ ಹೊರಡುವ ಹರವು ಮತ್ತು ಸಿದ್ಧತೆ ಕಾಣುತ್ತದೆ. ಆದರೆ ಲೇಖನಗಳು ಅನೇಕ ನಾಟಕಗಳ, ಕವಿಗಳ ಕೃತಿಗಳನ್ನು ಒಳಗೊಳ್ಳಲು ಹೊರಟು ನಿರ್ದಿಷ್ಟತೆ ಏರ್ಪಡಲು ಸಾಧ್ಯವಾಗದೇ ಹೋಗಿದೆ.

ನಾನೇಕೆ ಬರೆಯುತ್ತೇನೆ ? : ಎಸ್. ಎಲ್. ಭೈರಪ್ಪ

ಎಸ್. ಎಲ್. ಭೈರಪ್ಪನವರು ಕಳೆದ ಹತ್ತು ವರ್ಷಗಳಿಂದ ಕನ್ನಡ ಸಾಹಿತ್ಯದ ವಿಭಿನ್ನ ನೆಲೆಗಳನ್ನು ಕುರಿತು ಮಂಡಿಸಿರುವ ಚಿಂತನೆಗಳನ್ನು ಇಲ್ಲಿ ಕಾಣುತ್ತೇವೆ. ಈ ಸಂಕಲನದಲ್ಲಿನ ಅನೇಕ ಲೇಖನಗಳು 'ಸಾಹಿತ್ಯ ವಾರ್ಷಿಕ'ದ ಮೂಲಕ ಈಗಾಗಲೇ ಚರ್ಚೆಗೆ ಗುರಿಯಾಗಿದೆ.

ಮೊದಲನೆಯ ಭಾಗದಲ್ಲಿ ತಮ್ಮ ಸ್ವಂತ ಅನುಭವಗಳು ಸಾಹಿತ್ಯ ಸೃಷ್ಟಿಯ ಬಗೆಗೆ ಲೇಖಕರ ನಿಲುವುಗಳನ್ನು ತಿಳಿಯಲು ತಕ್ಕ ಭಿತ್ತಿಯನ್ನು ಒದಗಿಸಿದೆ. ಲೇಖಕ ನೊಬ್ಬ ವಿಸ್ತಾರವಾದ ಬದುಕನ್ನು ಹೇಗೆ ಗ್ರಹಿಸುವದು ? ಮತ್ತು ಅಭಿವ್ಯಕ್ತಿಸುವ ಸ್ವರೂಪವನ್ನು ಕುರಿತ ಜಿಜ್ಞಾಸೆ ಇದೆ. ತುರ್ತಪರಿಸ್ಥಿತಿಯ ಸಂದರ್ಭದಲ್ಲಿ ಶಿವ ಮೊಗ್ಗೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಂಗವಾಗಿ ಏರ್ಪಟ್ಟಿದ್ದ 'ನಾನೇಕೆ ಬರೆಯುತ್ತೇನೆ?' ಎಂಬ ಗೋಷ್ಠಿಯ ವಾದ ವಿವಾದಗಳನ್ನು ಮೊದಲ ಲೇಖನದ ಕೊನೆಯ ಭಾಗದಲ್ಲಿ ಕಾಣುತ್ತೇವೆ. ಭೈರಪ್ಪನವರು ತಮ್ಮ ನಿಲುವುಗಳನ್ನು ತಮ್ಮ ನೇರಕ್ಕಷ್ಟೇ ಗುರಿಪಡಿಸಿಕೊಂಡಿರುವ ಹಾಗೆ ಕಾಣುತ್ತದೆ. ಕೆ. ವಿ. ಸುಬ್ಬಣ್ಣ ಮತ್ತು ಭೈರಪ್ಪ ಇವರ ನಡುವೆ ನಡೆದ ವಾಗ್ವಾದದ ಪೂರ್ಣ ವಿವರ ಈ ಭಾಗದಿಂದ ತಿಳಿಯು ವುದಿಲ್ಲ.

'ಪರ್ವ' ಬರೆದದ್ದು – ಎಂಬ ಲೇಖನ ಕೃತಿರಚನೆಗೆ ಮುನ್ನ ಲೇಖಕನೊಬ್ಬ ನಡೆಸುವ ಅಧ್ಯಯನ ಚಿಂತನೆ ಇವುಗಳನ್ನು ತಿಳಿಯಲು ಸಹಕಾರಿಯಾಗುವಂಥ ಒಂದು ದಾಖಲೆ. ಕೃತಿರಚನೆಯ ಪೂರ್ವ ಸಿದ್ಧತೆಯ ಅನೇಕ ಒಳನೋಟಗಳನ್ನು ಈ ಮೂಲಕ ನಾವು ತಿಳಿಯುತ್ತೇವೆ. ಭೈರಪ್ಪನವರೇ ಹೇಳಿಕೊಂಡಂತೆ "ಕಾದಂಬರಿಯೊಂದೇ ನನ್ನ ಅಭಿವ್ಯಕ್ತಿ ಮಾಧ್ಯಮ ಪೂರ್ಣಸೃಷ್ಟಿ ; ಉಳಿದ ವಿಮರ್ಶೆ ಮೊದಲಾದವು ದ್ವಿತೀಯ ಅಥವಾ ತೃತೀಯ ಹಂತದ ಅನುಸೃಷ್ಟಿ ಅಥವಾ ಅನು ಕ್ರಿಯೆ" ಎಂಬ ಮಾತಿನ ನಿಜಸ್ವರೂಪ ಏನೇ ಇರಲಿ ಲೇಖಕನೊಬ್ಬ ತನ್ನ ಪರಿಸರಕ್ಕೆ ಪ್ರತಿಕ್ರಿಯಿಸುವುದರ ಸ್ವರೂಪವನ್ನು ಇಲ್ಲಿ ಕಾಣಬಹುದು.

ಕಂಪಿನ ಕರೆ—ಬೇಂದ್ರೆ ಕಾವ್ಯದೃಷ್ಟಿ : ಗೌರೀಶ ಕಾಯ್ಕಿಣಿ

ಬೇಂದ್ರೆಯವರ ಕಾವ್ಯ ದೃಷ್ಟಿಯನ್ನು ಕುರಿತು ಬರೆದಿರುವ ಈ ಪುಸ್ತಕದಲ್ಲಿ ಹತ್ತೊಂಬತ್ತು ಉಪವಿಭಾಗಗಳಿವೆ. ಇದರಲ್ಲಿ ಬೇಂದ್ರೆಯವರ ಕಾವ್ಯದ ನೆಲೆಯನ್ನು ಅವರ ಕವಿತೆಗಳ ಮೂಲಕ ವಿಶ್ಲೇಷಿಸಲಾಗಿದೆ. ಬೇಂದ್ರೆ ಕವಿಯ ಶಬ್ದಶಕ್ತಿ, ಅನುಭಾವಿಯ ನೆಲೆ, ಜಾನಪದ ಪ್ರಭಾವದಿಂದ ಒಡಮೂಡಿರುವ ಸೃಜನಶೀಲತೆ ಪ್ರತೀಕ ಇವುಗಳ ಹಿನ್ನೆಲೆಯಲ್ಲಿ ಕಾಯ್ಕಿಣಿಯವರು ಚಿಂತನೆ ನಡೆಸಿದ್ದಾರೆ.

ಬೇಂದ್ರೆ ಕಾವ್ಯವನ್ನು ಕಾಯ್ಕಿಣಿಯವರು ತುಂಬ ಗಾಢವಾಗಿ ಮತ್ತು ಶ್ರದ್ಧೆಯಿಂದ ಅಭ್ಯಾಸ ಮಾಡಿದ್ದಾರೆ. ಸಹೃದಯ ವಿಮರ್ಶೆಯ ನೆಲೆ ಇಲ್ಲಿ ಪ್ರಧಾನ. ಬೇಂದ್ರೆಯವರ ಸೌಂದರ್ಯ ಪ್ರಜ್ಞೆಯ ನೆಲೆಗಳನ್ನು ಅದರ ಬೇರೆ ಬೇರೆ ಹಂತಗಳನ್ನು ಕುರಿತು ಚರ್ಚಿಸಿದ್ದಾರೆ. ಬೇಂದ್ರೆಯವರ ಕಾವ್ಯ ಒಳಗೊಳ್ಳುವ ಐಂದ್ರಿಯಕ, ರಸಾತ್ಮಕ, ಬೌದ್ಧಿಕ, ಮತ್ತು ಆಧ್ಯಾತ್ಮಿಕ ಸ್ವರೂಪವನ್ನು ಅವರು ಇಡೀ ಕಾವ್ಯದ ಒಟ್ಟು ಸಂದರ್ಭವನ್ನು ಗಮನಕ್ಕೆ ತಂದುಕೊಂಡು ವಿವೇಚಿಸಿದ್ದಾರೆ. ಬೇಂದ್ರೆಯವರ ಪ್ರತಿಭೆಯ ಬಹುರೂಪತೆಯನ್ನು ಈ ಪುಸ್ತಕ ನಮಗೆ ಪರಿಚಯ ಮಾಡಿಕೊಡುತ್ತದೆ.

ಬೇಂದ್ರೆ ಕಾವ್ಯಾಭ್ಯಾಸಕ್ಕೆ ತುಂಬ ಮಹತ್ವದ ಒಳನೋಟಗಳನ್ನು ಈ ಪುಸ್ತಕದಿಂದ ಪಡೆಯಬಹುದಾಗಿದೆ.

ಕಾವ್ಯ ಮಂಥನ—ಪ್ರಾಯೋಗಿಕ ವಿಮರ್ಶೆ : ಜಾ. ಗೋ.

ಆಧುನಿಕ ಕನ್ನಡ ಕವಿತೆಯ ಹತ್ತು ಕವಿಗಳ ಒಂದೊಂದು ಕವನಗಳನ್ನು ಪ್ರಾಯೋಗಿಕ ವಿಮರ್ಶೆಗೆ ಗುರಿಪಡಿಸಿದ್ದಾರೆ. ಶ್ರೀನಿವಾಸ, ಅಂಬಿಕಾತನಯದತ್ತ, ವಿ.ಸೀ., ಕುವೆಂಪು, ಪು.ತಿ.ನ. ವಿನಾಯಕ, ಕೆ. ಎಸ್. ನರಸಿಂಹಸ್ವಾಮಿ, ಗೋಪಾಲಕೃಷ್ಣ ಅಡಿಗ, ಜಿ.ಎಸ್. ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿ– ಇವರುಗಳ ಕವಿತೆಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಪ್ರಾಯೋಗಿಕ ವಿಮರ್ಶೆ ಕನ್ನಡದ ಸಂದರ್ಭದಲ್ಲಿ ತನ್ನ ನಿರ್ದಿಷ್ಟ ವಾಗ್ವಾದಗಳನ್ನು ಈ ಕಾಲದಲ್ಲಿ ಹುಟ್ಟು ಹಾಕಿದೆ. ತನ್ನ ಅನೇಕ ಸೂಕ್ಷ್ಮಗಳನ್ನು ಬೇರೆ ಬೇರೆ ಮಟ್ಟಗಳಲ್ಲಿ ತನ್ನ ಸಾತತ್ಯವನ್ನು ಪಡೆದುಕೊಂಡಿದೆ.

ಜಾ. ಗೋ, ಅವರ ಪ್ರಾಯೋಗಿಕ ವಿಮರ್ಶೆಯ ಸ್ವರೂಪವು ಪ್ರಾಯೋಗಿಕ ವಿಮರ್ಶೆಯ ನೆಲೆ ಮತ್ತು ತಮ್ಮ ಸಾಹಿತ್ಯಕ ವಿಶ್ಲೇಷಣೆಯ, ವ್ಯಾಖ್ಯಾನದ ಭಾಗದಲ್ಲಿ ಸೇರಿಕೊಂಡು ಹೊರಡುತ್ತದೆ. ಮೇಲು ನೋಟಕ್ಕೆ ಪ್ರಾಯೋಗಿಕ ವಿಮರ್ಶೆಯ ತಲೆಬರಹವನ್ನು ಪಡೆದುಕೊಂಡಿದೆಯಾದರೂ ಬಹುಮಟ್ಟಿಗೆ ಈ ವಿಶ್ಲೇಷಣೆಗಳು ವ್ಯಾಖ್ಯಾನ ವಿಮರ್ಶೆಯನ್ನೇ ಮಾಡುತ್ತಿದೆ.

ಸಾಹಿತ್ಯದ ವಿದ್ಯಾರ್ಥಿಯೊಬ್ಬ ಒಂದು ಕವನವನ್ನು ಹೇಗೆ ಗ್ರಹಿಸಬೇಕೆನ್ನುವುದರ ಶಿಸ್ತು ಇಲ್ಲಿ ಕಂಡು ಬರುತ್ತದೆ. ಆದರೆ ಲೇಖಕರಿಗೆ ಖಚಿತವಾದ ವಿಮರ್ಶನ ನಿಲುವುಗಳನ್ನು ಕಟ್ಟಿಕೊಳ್ಳದೇ ಹೋಗಿರುವುದರಿಂದ ಕೃತಿಗೆ ನೇರವಾಗಿ ಸಂಬಂಧಪಡದ ಅನೇಕ ಅಂಶಗಳು ಸಾಕಷ್ಟು ಪ್ರಮಾಣದಲ್ಲಿ ಅನೇಕ ಕಡೆ ಕಂಡು ಬರುತ್ತದೆ. ಕವನಗಳ ವಿಶ್ಲೇಷಣೆಯ ಸಂದರ್ಭದಲ್ಲಿ ಏರ್ಪಡದ ಎಷ್ಟೋ ಅಂಶಗಳಿಗೂ ಲೇಖಕರ ಕೊನೆಯ ತೀರ್ಮಾನಕ್ಕೂ ಸಂಬಂಧ ಏರ್ಪಡುವುದಿಲ್ಲ. ಹೀಗಾಗಿ ಇಲ್ಲಿನ ವಿಶ್ಲೇಷಣೆಗಳಿಗೆ ತಕ್ಕ ಶಿಸ್ತು ಏರ್ಪಡುವುದಿಲ್ಲ.

ಪು.ತಿ.ನ. — ಒಂದು ಅಧ್ಯಯನ : ವಿವಿಧ ಲೇಖಕರು.

ಈ ಸಂಕಲನದಲ್ಲಿ ಏಳು ಲೇಖನಗಳಿವೆ. ಪುಸ್ತಕದ ಸ್ವರೂಪ ನಿರ್ದಿಷ್ಟವಾಗಿಲ್ಲ. ಸಂಪಾದಕರು ಯಾರು ಎಂದು ತಿಳಿಯುವಂತಿಲ್ಲ. ಪು.ತಿ.ನ. ಅವರಿಗೆ ಎಪ್ಪತ್ತೈದು ವರ್ಷ ತುಂಬಿದ ಸಂದರ್ಭದಲ್ಲಿ ಪುಸ್ತಕವನ್ನು ತರಬೇಕೆಂಬ ಗಡುವನ್ನು ಇಟ್ಟು ಕೊಂಡಿದ್ದರಿಂದ ಸಕಾಲದಲ್ಲಿ ಕವಿ ಕೃತಿಗಳ ಸಮಗ್ರವಾದ ಸಮಾಲೋಚನೆಯನ್ನು ನೀಡುವುದು ಸಾಧ್ಯವಾಗಲಿಲ್ಲ ಎಂದು ಪ್ರಕಾಶಕರು -ಹೇಳಿಕೊಂಡಿದ್ದಾರೆ. ಪ್ರಕಾಶ ಕರು ಹೇಳಿಕೊಂಡಿರುವಂತೆ "ಸಾಧ್ಯವಿದ್ದಷ್ಟು ಸರ್ವತೋಮುಖವಾದ" ಈ ಪುಸ್ತಕ ವನ್ನು ನೋಡುವುದರಲ್ಲಿ ಸಫಲವಾಗಿದೆ ಎಂದು ನಂಬಿದ್ದಾರೆ.

ಎಚ್ಚೆಸ್ಕೆ ಅವರ ಎರಡು ಲೇಖನಗಳಿವೆ. ಮೊದಲನೆಯದು ಬದುಕು ಬರಹ ಎಂಬ ಪರಿಚಯಾತ್ಮಕ ಟಿಪ್ಪಣಿ. ಇದರಲ್ಲಿ ಪು.ತಿ.ನ. ಅವರ ಸಾಂಸ್ಕೃತಿಕ ವ್ಯಕ್ತಿತ್ವವನ್ನು ತಮ್ಮ ಎಂದಿನ ಶೈಲಿಯಲ್ಲಿ ಮಾಡಿಕೊಟ್ಟಿದ್ದಾರೆ. ಪು.ತಿ.ನ. ಅವರ ಪ್ರಬಂಧ ಸಾಹಿತ್ಯವನ್ನು ಕುರಿತ ಮತ್ತೊಂದು ಲೇಖನ ವಿವರಣಾತ್ಮಕವಾಗಿ ಬೆಳೆದಿದೆ. ಪು.ತಿ.ನ. ಅವರ ಗದ್ಯಶೈಲಿ ಮತ್ತು ಚಿಂತನ ಶೀಲತೆಗಳ ಮೇಲೆ ವಿಶೇಷವಾದ ಗಮನ ಸೆಳೆದಿದ್ದಾರೆ.

ಸಿ.ಪಿ.ಕೆ. ಯವರ 'ವಿಮರ್ಶೆಯ ನಿಲುವು' ಎಂಬ ಲೇಖನ ಪು.ತಿ.ನ. ಅವರ 'ಕಾವ್ಯಕುತೂಹಲ'ವನ್ನು ಕುರಿತ ಲೇಖನ. ಸ್ವತಃ ವಿಮರ್ಶಕರಾದ ಸಿ.ಪಿ.ಕೆ.ಯವರು ಕಾವ್ಯಕೂತೂಹಲದ ಸೂಕ್ಷ್ಮಗಳನ್ನು ಚೆನ್ನಾಗಿ ಗ್ರಹಿಸಿದ್ದಾರೆ.

ಇನ್ನುಳಿದ ಲೇಖನಗಳು ಪರಿಚಯಾತ್ಮಕ ಮಟ್ಟಕ್ಕೆ ಸೀಮಿತವಾಗಿದೆ. ಪುಸ್ತಕದ ಸಂಯೋಜನೆಯಲ್ಲಿ ಯಾವುದೇ ವಿಧವಾದ ಅಚ್ಚುಕಟ್ಟುತನ ಇಲ್ಲ.

ದೇವನೂರ ಮಹದೇವ ಅವರ ಕತೆಗಳು : ಟಿ. ಪಿ. ಅಶೋಕ

ಈ ಪುಸ್ತಕ ನಮ್ಮ ಅತ್ಯಂತ ಮಹತ್ವದ ಕತೆಗಾರರಲ್ಲಿ ಒಬ್ಬರಾದ ದೇವನೂರ ಮಹದೇವ ಅವರ ಕತೆಗಳನ್ನು ಕುರಿತದ್ದು. ಅಶೋಕರ ಈ ಲೇಖನದ ತುಂಬ ಸಾಮಾನ್ಯೀಕರಣ ತುಂಬಿದೆ. ಕತೆಗಾರರ ಯಾವೊಂದು ನೆಲೆಯ ಬಗ್ಗೆಯೂ ನಿರ್ದಿ ಷ್ಟತೆ ಏರ್ಪಡುವುದಿಲ್ಲ. ವಿಪುಲವಾದ ಹೇಳಿಕೆಗಳು ಲೇಖನದ ತುಂಬಾ ಹರಡಿಕೊಂಡಿದೆ. "ಕುವೆಂಪು, ಗೊರೂರು ಮುಂತಾದವರ ಕತೆ ಕಾದಂಬರಿಗಳಲ್ಲಿ ಹಲವಾರು ದಲಿತ ಪಾತ್ರಗಳಿವೆ. ಅವರ ಒಳಜೀವನವನ್ನು ಚಿತ್ರಿಸುವ ಪ್ರಯತ್ನ ವಿದೆ. ಆದರೆ ಇಲ್ಲೆಲ್ಲಾ ಮೇಲ್ವರ್ಗದ ಒಟ್ಟು ಅನುಭವದ ಹಿನ್ನೆಲೆಯಲ್ಲೇ ದಲಿತರ ಅಸ್ತಿತ್ವ ಇದೆ ಅನ್ನಿಸುತ್ತದೆ. ಅಂದರೆ, ಪಾತ್ರಗಳು ದಲಿತ ಪಾತ್ರಗಳೇ ಆದರೂ

ಸಂವೇದನೆ ಮೇಲ್ವರ್ಗದ ಸಂವೇದನೆಯೇ ಆಗಿದೆ" ಇಂಥ ಹಾರಿಕೆಯ ಬುಡ ವಿಲ್ಲದ ಹೇಳಿಕೆಗಳನ್ನು ಹೆಣೆಯುವ ಕ್ರಮ ಇವರ ವಿಮರ್ಶೆಯ ಬಗೆಗೆ ಸಂಶಯ ಹುಟ್ಟಿಸುತ್ತದೆ.

ತಿರುಮಲಾರ್ಯ : (ಸಂ.) ವಿ. ಸೀತಾರಾಮಯ್ಯ

ಐ.ಬಿ.ಎಚ್. ಪ್ರಕಾಶನ ಸಂಸ್ಥೆ ಪ್ರಕಟಿಸುತ್ತ ಬಂದಿರುವ 'ಕವಿಕಾವ್ಯಪರಂಪರೆ' ಮಾಲಿಕೆಯ ಪುಸ್ತಕ. ವಿ. ಸೀತಾರಾಮಯ್ಯನವರ ಮುನ್ನುಡಿ ಮತ್ತು ಸಮೀಕ್ಷೆಗಳನ್ನು ಒಳಗೊಂಡ ಈ ಪುಸ್ತಕದಲ್ಲಿ ಸೂರ್ಯನಾಥ್ ಕಾಮತ್, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹಾಗೂ ಎನ್. ಚೆನ್ನಕೇಶವಯ್ಯ ಅವರ ಲೇಖನಗಳಿವೆ. ಎಲ್. ಬಸವರಾಜು ಅವರ 'ತಿರುಮಲಾರ್ಯ' ಪುಸ್ತಕದ ಕೆಲವು ಭಾಗಗಳನ್ನು ಆಯ್ದು ಅನುಬಂಧವಾಗಿ ಕೊಡಲಾಗಿದೆ. ಮುನ್ನುಡಿಯಲ್ಲಿ ಪ್ರಸ್ತುತ ಪುಸ್ತಕಕ್ಕೆ ಸಂಬಂಧಿಸಿದ ಪ್ರಸ್ತಾಪ ಇಲ್ಲ. ಆದರೆ ಇದೇ ಮಾಲಿಕೆಯಲ್ಲಿ ಈ ಹಿಂದೆ ಬಂದ ವಿಮರ್ಶೆ, ಟೀಕೆ ಟಿಪ್ಪಣಿಗಳಿಗೆ ವಿ.ಸೀಯವರು ಪ್ರತಿಕ್ರಿಯಿಸಿದ್ದಾರೆ. ಅಲ್ಲಿ ಇಂದು ಬೆಳೆದ "ವಿವಿಧ ಶಾಖೋಪಶಾಖೆಗಳಾಗಿ ಬೆಳೆದಿರುವ ಭಾಷಾಜ್ಞಾನದ ನೆಲೆಗಳನ್ನು (ತಾವು ಗುರುತಿಸಿಕೊಂಡಂತೆ) ಟಿಪ್ಪಣಿ ಮಾಡಿದ್ದಾರೆ.

ಸೂರ್ಯನಾಥ ಕಾಮತರ, 'ಕಾಲ, ಸನ್ನಿವೇಶ' ಎಂಬ ಲೇಖನ ಈವರೆವಿಗೆ ದಾಖಲಾಗಿರುವ ಸಾಹಿತ್ಯಕ ಸಂಗತಿಗಳು ಮತ್ತು ಚಾರಿತ್ರಿಕ ಆಕರಗಳ ಹಿನ್ನೆಲೆಯಲ್ಲಿ ಸಿದ್ಧಗೊಂಡಿದೆ. ಹದಿನೇಳು ಹದಿನೆಂಟನೆಯ ಶತಮಾನಗಳು ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ತುಂಬ ಸಂಕ್ರಮಣಾವಸ್ಥೆಯ ಕಾಲ. ಒಂದು ರೀತಿಯಲ್ಲಿ 'ಅನುಸರಣಯುಗ' ವೆಂದು ಕರೆಯಬಹುದಾದ ಕಾಲ. ಹಿಂದಿನ ಸೃಜನಶೀಲತೆ ಈ ಕಾಲಮಾನದಲ್ಲಿ ಕಾಣಬರುವುದಿಲ್ಲ. ಇವುಗಳ ಸಮಸ್ಯೆಗಳನ್ನು 'ಸಮೀಕ್ಷೆ'ಯಲ್ಲಿ ವಿ.ಸೀ ಅವರು, ಎಲ್. ಬಸವರಾಜು ಅವರ ಲೇಖನದಲ್ಲಿ ಮಾಡ ಲಾಗಿದೆ. ಕಾಮತರ ಲೇಖನ ಒಂದು ಸಂಕಲಿತ ವರದಿಯ ಮಟ್ಟಕ್ಕಷ್ಟೇ ಸೀಮಿತ ಗೊಂಡಿದೆ.

ತಿರುಮಲಾರ್ಯನ ಕೃತಿಗಳನ್ನು ಕುರಿತು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ವಿಸ್ತಾರವಾಗಿ ಬರೆದಿದ್ದಾರೆ. ಮೈಸೂರು ಅರಸರ ಚರಿತ್ರೆಯ ತಿಳಿವಿಗೆ ತಿರುಮಲಾರ್ಯನ ಕೃತಿಗಳು ಸಹಾಯಮಾಡುತ್ತದೆಂಬುದನ್ನು ವಿವರಗಳಲ್ಲಿ ಎತ್ತಿ ತೋರಿದ್ದಾರೆ. 'ಚಿಕ್ಕದೇವರಾಜ ವಂಶಾವಳಿ' 'ಚಿಕ್ಕದೇವರಾಜ ವಿಜಯಂ' ಹಾಗೂ 'ಅಪ್ರತಿಮ ವೀರಚರಿತಂ' ಇವುಗಳನ್ನು ಆಳವಾಗಿ ಅಭ್ಯಾಸಮಾಡಿ ಬರೆದ ಲೇಖನ ಇದಾಗಿದೆ. ಚಿಕ್ಕದೇವರಾಜನ ಶೈಲಿ, ಅಲಂಕಾರ ಮತ್ತು ವರ್ಣನಾ ಸಾಮರ್ಥ್ಯವನ್ನು ಕವಿಯ ಕಾವ್ಯಗಳ ಮೂಲಕ ವಿವರಿಸಿದ್ದಾರೆ.

ಎನ್. ಚೆನ್ನಕೇಶವಯ್ಯನವರು 'ಗೀತ ಗೋಪಾಲ'ವನ್ನು ಕುರಿತು ಬರೆದಿರುವ ಲೇಖನದ ಮೊದಲ ಭಾಗಗಳು ಅಷ್ಟೇನೂ ಮಹತ್ವದ್ದಲ್ಲ. ಗೀತಗಳನ್ನು ಗದ್ಯಕ್ಕೆ ತಿರುಗಿಸಿ ಇಡುವ ಕೆಲಸ ಅದು. 'ಗೀತಗೋಪಾಲ'ದಲ್ಲಿ ಸಂಗೀತವನ್ನು ಕುರಿತು ಬರೆದಿರುವ ಕೊನೆಯ ಕೆಲವು ಟಿಪ್ಪಣಿಗಳು ಸಂಗೀತ ಶಾಸ್ತ್ರದ ದೃಷ್ಟಿಯಿಂದ ಉಪಯುಕ್ತವಾಗಿದೆ.

ವಿ.ಸೀ. ಯವರ ಸಮೀಕ್ಷೆ ಒಂದು ರೀತಿಯಲ್ಲಿ ಕನ್ನಡ ಸಾಹಿತ್ಯದ ಒಟ್ಟು ಸಂದರ್ಭದಲ್ಲಿ ಹದಿನೇಳು ಮತ್ತು ಹದಿನೆಂಟನೆಯ ಶತಮಾನದ ಸಾಂಸ್ಕೃತಿಕ ನೆಲೆಗಳನ್ನು ಸಮಗ್ರವಾಗಿ ವಿಶ್ಲೇಷಿಸಿದ್ದಾರೆ. ಪುಸ್ತಕದಲ್ಲಿ ಸಂಕಲಿತವಾಗಿರುವ ಲೇಖನಗಳು ಕೊಡುವ ವಿವರಣೆಗಿಂತ ಈ ಲೇಖನ ಕೊಡುವ ಒಳನೋಟಗಳು ಹೆಚ್ಚು ಮೌಲಿಕವಾಗಿದೆ. ಅನುಬಂಧ ಎರಡರಲ್ಲಿ ಎಲ್. ಬಸವರಾಜು ಅವರ ಪುಸ್ತಕ (ತಿರುಮಲಾರ್ಯ)ದ ಭಾಗ ಸೇರಿರುವುದು ತುಂಬಾ ಔಚಿತ್ಯದಿಂದ ಕೂಡಿದೆ. ಈ ಲೇಖನ ಚಿಕ್ಕುಪಾಧ್ಯಾಯನ ಕಾವ್ಯರಚನೆಯ ಸ್ವರೂಪ, ಧರ್ಮ ಮತ್ತು ಚರಿತ್ರೆಯ ಕ್ರಮಗಳನ್ನು ಸಮರ್ಥವಾಗಿ ವಿವರಿಸುತ್ತದೆ.

ಶ್ರೀನಿವಾಸರ ಕಾದಂಬರಿಗಳಲ್ಲಿ ಜೀವನ ದರ್ಶನ : ವಿ. ಎಂ. ಇನಾಂದಾರ್

ವಿ. ಎಂ. ಇನಾಂದಾರ್ ಅವರ ಈ ಪುಸ್ತಕ ಬೆಂಗಳೂರು ವಿಶ್ವವಿದ್ಯಾಲಯದ ಮಾಸ್ತಿ ತಿರುಮಲಮ್ಮ ದತ್ತಿ ಉಪನ್ಯಾಸದ ಅಂಗವಾಗಿ ಪ್ರಕಟವಾಗಿದೆ. ಶ್ರೀನಿವಾಸರ 'ಸುಬ್ಬಣ್ಣ', 'ಶೇಷಮ್ಮ', 'ಚೆನ್ನಬಸವನಾಯಕ' ಮತ್ತು 'ಚಿಕವೀರ ರಾಜೇಂದ್ರ' ಕಾದಂಬರಿಗಳಲ್ಲಿನ ಜೀವನದರ್ಶನದ ಸ್ವರೂಪವನ್ನು ಈ ಪುಸ್ತಕ ಅನೇಕ ವಿವರಗಳ ಮೂಲಕ ವಿಶ್ಲೇಷಿಸುತ್ತದೆ. "ಕಥೆ ಕಾದಂಬರಿಗಳಲ್ಲಿಯ ಜೀವನದರ್ಶನ ಎಂದರೆ ಚಿತ್ರಿಸಿದ ಜೀವನಾನುಭವದಲ್ಲಿ ಲೇಖಕ ಕಂಡುಕೊಂಡ ಅರ್ಥವಂತಿಕೆಯ ವಿಶ್ಲೇಷಣೆ ಎಂದು ಸ್ಥೂಲವಾಗಿ ಹೇಳಬಹುದು. ಕಥೆಯೇ ಆಗಲಿ, ಕಾದಂಬರಿಯೇ ಆಗಲಿ, ಅಲ್ಲಿ ನಡೆಯುವುದು ಜೀವನಾನುಭವದ ಒಂದು ಬಗೆಯ ಶೋಧ".

ಈ ಹಿನ್ನೆಲೆಯಲ್ಲಿ ನಡೆದಿರುವ ಜಿಜ್ಞಾಸೆಗೆ ಅಚ್ಚುಕಟ್ಟಾದ ನಿರೂಪಣಾ ವಿಧಾನವಿದೆ. ಅನೇಕ ಘಟನೆಗಳನ್ನು, ಪ್ರಸಂಗಗಳನ್ನು ಆರಿಸಿಕೊಳ್ಳುತ್ತಾ ಇಡೀ ಕಾದಂಬರಿಯನ್ನು ತಮ್ಮ ಚಿಂತನೆಗೆ ಭಿತ್ತಿಯಾಗಿ ಮಾಡಿಕೊಂಡಿರುವ ಕ್ರಮ ಗಮನಾರ್ಹವಾದದ್ದಾಗಿದೆ.

ಮನುಷ್ಯ ಮತ್ತು ಸಮಾಜದ ಜೀವನ ಗತಿಯ ವಿಕಾಸ, ಅಲ್ಲಿ ಏರ್ಪಡುವ ಸಂಘರ್ಷದ ಹಿನ್ನೆಲೆಯಲ್ಲಿ ಕಾಣುವ ದೃಶ್ಯ ಮತ್ತು ಅದೃಶ್ಯ ಸನ್ನಾಹದ ವೈಚಿತ್ರವನ್ನು ಶ್ರೀನಿವಾಸರ ಕಾದಂಬರಿಗಳು ರೂಪಿಸಿರುವ ನೆಲೆಯನ್ನು ಈ ಪುಸ್ತಕದಿಂದ ಕನ್ನಡ ಕಾದಂಬರಿಯ ವಿದ್ಯಾರ್ಥಿ ತಿಳಿಯಬಹುದಾಗಿದೆ.

ರನ್ನ—ಕವಿ ಕಾವ್ಯ ವಿಮರ್ಶೆ: ವಿವಿಧ ಲೇಖಕರು

ಸಾಹಿತ್ಯ ಪರಿಷತ್ತು ರನ್ನನನ್ನು ಕುರಿತು ಮುಧೋಳದಲ್ಲಿ ನಡೆಸಿದ ವಿಚಾರ ಸಂಕಿರಣದ ಪ್ರಬಂಧಗಳು ಈ ಸಂಕಲನದಲ್ಲಿ ಇದೆ. ಇದರಲ್ಲಿ ಹದಿನೈದು ಲೇಖನಗಳಿವೆ. ಲೇಖನಗಳ ಜೋಡಣೆಯಲ್ಲಿ ಯಾವ ನಿರ್ದಿಷ್ಟ ಕ್ರಮವೂ ಇಲ್ಲ. ರನ್ನನ ಕೃತಿಗಳಾದ 'ಅಜಿತಪುರಾಣ' ಮತ್ತು 'ಗದಾಯುದ್ಧ'ವನ್ನು ಕುರಿತ ಬೇರೆ ಬೇರೆ ದೃಷ್ಟಿಕೋನದ ಲೇಖನಗಳು ಇದರಲ್ಲಿವೆ. ಬಹುತೇಕ ಲೇಖನಗಳು ಕವಿಯ ಕಾವ್ಯ ಭಾಗಗಳಿಂದ ಉದಾಹರಿಸಿದ ಭಾಗಗಳಿಂದ ಕಿಕ್ಕಿರಿದು, ಲೇಖಕರು ಏನನ್ನು ಹೇಳುತ್ತಿದ್ದಾರೆ ಎಂಬುದು ತಿಳಿಯುವಂತಿಲ್ಲ.

'ಗದಾಯುದ್ಧ—ಸಾಂಸ್ಕೃತಿಕ ಅಧ್ಯಯನ' (ದೇವರ ಕೊಂಡಾರೆಡ್ಡಿ) ಈ ಲೇಖನದಲ್ಲಿ ಸಂಸ್ಕೃತಿಯ ನಿರ್ವಚನವನ್ನೇ ತಪ್ಪಾಗಿ ಗ್ರಹಿಸಿಕೊಂಡಿದ್ದಾರೆ. ಎಂದರೆ ಸಾಹಿತ್ಯ ಕೃತಿಯ ಮೂಲಕ ಉತ್ಪನ್ನವಾಗುವ ಸಾಂಸ್ಕೃತಿಕ ಸಂಘರ್ಷದ ಸ್ವರೂಪವನ್ನು ಅವರು ಚರ್ಚಿಸುವುದಿಲ್ಲ. ಅದಕ್ಕಿಂತ ಕೃತಿಯಲ್ಲಿನ ಕೆಲವು ವಿವರಗಳನ್ನು ಸಂದರ್ಭದಿಂದ ಕಿತ್ತುಹಾಕಿ ಇಡೀ ಸಂಸ್ಕೃತಿಯ ಎಲ್ಲ ಸಂಘರ್ಷಗಳನ್ನು ನೀರಸವಾದ ಪಟ್ಟಿಗೆ ಇಳಿಸಿದ್ದಾರೆ. ಧರ್ಮ, ಶೌರ್ಯ, ಯುದ್ಧ, ವ್ಯವಸಾಯ, ಪ್ರಾಣಿ, ಪಕ್ಷಿಗಳು–ಹೀಗೆ ಲೆಕ್ಕಾಚಾರದ ಮಟ್ಟಕ್ಕೆ ಸಾಹಿತ್ಯ ಕೃತಿಯನ್ನು ಇಳಿಸುವುದರಿಂದ ಕೃತಿಯ ಅಧ್ಯಯನಕ್ಕೆ ಯಾವ ಹೆಚ್ಚಿನ ಲಾಭವು ಉಂಟಾಗುವುದಿಲ್ಲ. ಉದಾಹರಣೆಗಾಗಿ ಲೇಖಕರು ಸಂಸ್ಕೃತಿಯನ್ನು ವಿವರಿಸಿಕೊಂಡಿರುವ ಸ್ವರೂಪವನ್ನು ನೋಡಿ: "ಸಂಸ್ಕೃತಿ ಎಂಬ ಶಬ್ದದ ಅರ್ಥದ ಬಗ್ಗೆ ಯಾರ ಅಭಿಪ್ರಾಯ ಹೇಗೇ ಇರಲಿ, ಆ ಕಾಲದ ಜನರ ಜೀವನದ ಫಲಿತಾಂಶವೇ ಸಂಸ್ಕೃತಿ. ಆ ಜನರ ಜೀವನ, ವೇಷಭೂಷಣ ಕಲೆ, ಯುದ್ಧ ಇತ್ಯಾದಿಗಳ ಅಭ್ಯಾಸವೇ ಸಾಂಸ್ಕೃತಿಕ ಅಭ್ಯಾಸ. ಜನರು ಬದುಕಿ ಉಳಿದ ರೀತಿಯೇ ಸಾಂಸ್ಕೃತಿಕ ಚರಿತ್ರೆ" ಇಂಥ ಸರಳಗೊಳಿಸಿದ ಸಂಸ್ಕೃತಿ ನಿರ್ವಚನದಿಂದ ಹೊರಟಿರುವ ಈ ಲೇಖನ ಈ ಹೊತ್ತಿನ ಯಾವ ಸೂಕ್ಷ್ಮ ಅಧ್ಯಯನಗಳನ್ನೂ ತಮ್ಮ ಗಮನಕ್ಕೆ ಲೇಖಕರು ತಂದುಕೊಂಡಿಲ್ಲವೆಂಬುದು ಸ್ಪಷ್ಟವಾಗುತ್ತದೆ.

'ಆದಿಪುರಾಣ—ಅಜಿತಪುರಾಣ' (ಎಸ್. ಪಿ. ಪಾಟೀಲ) 'ಅಜಿತ ಮತ್ತು ಉತ್ತರ ಪುರಾಣ' (ಜೀವಂಧರ ಕುಮಾರ) ರನ್ನ, ಅತ್ತಿಮಬ್ಬೆ (ಎಸ್. ವಿಮಲಾ ಸುಮತಿ ಕುಮಾರ) ಈ ಮೂರೂ ಲೇಖನಗಳು ರನ್ನನ ಅಜಿತಪುರಾಣವನ್ನು ಯಾವ ಮಹತ್ವದ ಆಶಯವನ್ನಾಗಲೀ, ನಿರ್ದಿಷ್ಟ ಉದ್ದೇಶದ ಹಿನ್ನೆಲೆಗಳನ್ನಾಗಲೀ ಪಡೆದುಕೊಳ್ಳದ ನೀರಸ ಲೇಖನಗಳು. ಈವರೆಗೆ ಅತ್ಯಂತ ಸೂಕ್ಷ್ಮವಾಗಿ ಬರೆಯಲಾಗಿರುವ ಲೇಖನಗಳನ್ನು ಅಸ್ತವ್ಯಸ್ತಗೊಳಿಸಿ, ಬಳಸಿಕೊಂಡಿರುವ ಬರಹಗಳಾಗಿವೆ. ರನ್ನನ ಅಧ್ಯಯನಕ್ಕೆ ಈ ಲೇಖನಗಳಿಂದ ಯಾವ ಉಪಯೋಗವೂ ಇಲ್ಲ.

'ಗದಾಯುದ್ಧ ಮತ್ತು ಇತಿಹಾಸ' (ಬಾ. ರಾ. ಗೋಪಾಲ) ಈ ಲೇಖನ ಸಾಹಿತ್ಯದ ವಿದ್ಯಾರ್ಥಿಗಳಿಗೆ ಚರಿತ್ರೆಯ ನೆಲೆಗಟ್ಟೊಂದನ್ನು ಖಚಿತಪಡಿಸಿಕೊಳ್ಳುತ್ತದೆ.

'ಅಜಿತಪುರಾಣ—ಸಾಂಸ್ಕೃತಿಕ ಅಧ್ಯಯನ' (ಬಿ. ಸಿ. ವೀರೇಂದ್ರಕುಮಾರ್) ಈ ಲೇಖನ ಕೃತಿಯೊಂದನ್ನು ಸಾಂಸ್ಕೃತಿಕವಾಗಿ ಹೇಗೆ ವಿವರಿಸಿಕೊಳ್ಳಬಹುದೆಂಬುನ್ನು ಅನೇಕ ಮಿತಿಗಳ ಮಧ್ಯೆಯೂ ಲೇಖಕರು ಪ್ರಯತ್ನಿಸಿದ್ದಾರೆ. ಜೈನಧರ್ಮದ ಪ್ರಕ್ರಿಯಾತ್ಮಕ ಸ್ವರೂಪವನ್ನು ಅಜಿತಪುರಾಣದ ಮೂಲಕ ಗುರುತಿಸಲು ಪ್ರಯತ್ನಿಸುತ್ತಾರೆ. ಲೇಖನದ ಆರಂಭಕ್ಕೆ ಪ್ರತೀಕ ಮತ್ತು ಪಾತ್ರಗಳ ಸಂಬಂಧವನ್ನು ಕುರಿತು ವಿವರಿಸುತ್ತಾರಾದರೂ ಲೇಖನ ಅದರ ಅನ್ವಯವನ್ನು ಕೈಬಿಟ್ಟಿದೆ. ಅಜಿತಪುರಾಣ ಅಧ್ಯಯನದ ಶಿಸ್ತು ಸಮಗ್ರವಾದ ವಿಶ್ಲೇಷಣೆಯಾಗಿ ಮಾರ್ಪಡದೆ ಹೋಗುತ್ತದೆ. ರನ್ನನ ಬಗೆಗೆ ನಡೆಯಬಹುದಾದ ಗಂಭೀರವಾದ ಚರ್ಚೆಗೆ ಇಲ್ಲಿ ಕೆಲವು ಹೊಳವುಗಳನ್ನು ಕಾಣಬಹುದಾಗಿದೆ.

'ರನ್ನ—ಸಮಗ್ರ ಸಮೀಕ್ಷೆ' (ಸಿ. ಪಿ. ಕೃಷ್ಣಕುಮಾರ್) ರನ್ನ—ಗದಾಯುದ್ಧದ ನಾಯಕ (ಎಚ್. ತಿಪ್ಪೇರುದ್ರಸ್ವಾಮಿ) ಈ ಎರಡು ರನ್ನನ ಕಾವ್ಯವನ್ನು ನೇರವಾಗಿಯೂ, ಸರಳವಾಗಿಯೂ ಪರಿಚಯ ಮಾಡಿಕೊಡುವ ಲೇಖನಗಳಾಗಿವೆ. ರನ್ನನ ಕೆಲವು ವೈಶಿಷ್ಟ್ಯಗಳನ್ನು ಸೂಕ್ತ ಉದಾಹರಣೆಗಳೊಂದಿಗೆ ವಿವರಿಸಲಾಗಿದೆ.

'ಗದಾಯುದ್ಧದಲ್ಲಿ ಸ್ವೋಪಜ್ಞತೆ' (ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ) ಗದಾಯುದ್ಧ ನಾಟಕ (ಎಚ್. ಬಿ. ಲೋಕೂರ) ಇದರಲ್ಲಿ ಮೊದಲನೆಯ ಲೇಖನ ರನ್ನನ ವಿಶಿಷ್ಟತೆಯನ್ನು ಕುರಿತು ಚರ್ಚೆ ಮಾಡಿದರೆ ಲೋಕೂರ ಅವರ ಲೇಖನ ಬಿ. ಎಂ. ಶ್ರೀ. ಅವರ ಗದಾಯುದ್ಧ ನಾಟಕದ ರಚನಾಸ್ವರೂಪ ಮತ್ತು ಧೋರಣೆಗಳನ್ನು ಚರ್ಚೆ ಮಾಡಿದ್ದಾರೆ. ರನ್ನನ ದುರ್ಯೋಧನ ಪಾತ್ರ ಕಲ್ಪನೆ, ನಾಟಕೀಯ ಶೈಲಿ ಇವುಗಳ ಸ್ವರೂಪವನ್ನು ಭಟ್ಟರು ವಿಶ್ಲೇಷಿಸಿದ್ದಾರೆ. ನಾಟಕೀಯತೆಯನ್ನು ಕಾವ್ಯ—ಲಯಗಳ ಮೂಲಕ ರನ್ನ ಹೊರಪಡಿಸಿರುವ ಸ್ವರೂಪವನ್ನು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸುತ್ತಾರೆ. ಈ ಎರಡೂ ಅಂಶಗಳು ರನ್ನನ ವಿಶಿಷ್ಟತೆಗಳೇನೋ ನಿಜ. ಆದರೆ ಈ ಬಗೆಗಿನ ವಿಸ್ತಾರವಾದ ಚರ್ಚೆ, ಸಾಕಷ್ಟು ಪ್ರಮಾಣದಲ್ಲಿ ನಡೆದಿದೆ. ಈ ಹಿನ್ನೆಲೆಯಲ್ಲಿ ಈ ಲೇಖನಗಳು ಮಹತ್ವದ ಒಳನೋಟಗಳನ್ನೇನೂ ಕೊಡುವುದಿಲ್ಲ.

'ರನ್ನ ಭಾಷಾಕಾವ್ಯಶಾಸ್ತ್ರದ ಅಧ್ಯಯನ' (ಜಯವಂತ ಕುಳ್ಳಿ) ರನ್ನನ ನಿಘಂಟು' ಪಿ. ವಿ. ನಾರಾಯಣ) 'ರನ್ನನ ಕಾವ್ಯಗಳು ಛಂದಸ್ಸಿನ ದೃಷ್ಟಿಯಿಂದ' (ಸೀತಾರಾಮ ಜಾಗೀರ್ದಾರ್) ಜಾಗೀರ್ದಾರರ ಲೇಖನ ಅಭ್ಯಾಸಪೂರ್ಣವಾದ ಲೇಖನ. ಈ ಲೇಖನದಲ್ಲಿ ರನ್ನನ ಛಂದೋಪ್ರಯೋಗಗಳ ವಿಶಿಷ್ಟಾಂಶಗಳನ್ನು ವಿವರಿಸಿದ್ದಾರೆ. ಜಯವಂತ ಕುಳ್ಳಿಯವರ ಲೇಖನ ಇತ್ತ ಕಾವ್ಯಮೀಮಾಂಸೆಯ ನೆಲೆಯನ್ನೂ ಗಟ್ಟಿಯಾಗಿ ಪಡೆಯದೆ, ಶೈಲಿಶಾಸ್ತ್ರದ ನೆಲೆಯನ್ನೂ ಖಚಿತಪಡಿಸಿಕೊಳ್ಳದೆ ಬರೆದಿರುವ ಲೇಖನ. ರನ್ನನ ಕೆಲವು ವ್ಯಾಕರಣ ಪ್ರಯೋಗಗಳನ್ನು ಮಾತ್ರ ವಿವರಿಸುತ್ತದೆ. ಪಿ. ವಿ. ನಾರಾಯಣರ ಲೇಖನ ರನ್ನನ ನಿಘಂಟನ್ನು ಪರಿಚಯ ಮಾಡಿಕೊಡುತ್ತದೆ. ಅದರಲ್ಲಿನ ಅಪೂರ್ವವಾದ ಶಬ್ದಗಳ ಮೇಲೆ ಬೆಳಕು ಚೆಲ್ಲಿದ್ದಾರೆ.

ರನ್ನ—ಒಂದು ಜನಪದ ಅಧ್ಯಯನ (ಶ್ರೀಕಂಠ ಕೂಡಿಗೆ) ಸಾಹಿತ್ಯ ಕೃತಿಯ ಮೂಲಕ ಜನಪದದ ನೆಲೆಯನ್ನು ಹೇಗೆ ಗ್ರಹಿಸಬೇಕೆಂಬುದರ ನೆಲೆ ಈ ಲೇಖನಕ್ಕೆ ಇಲ್ಲ. ಹೀಗಾಗಿ ಲೇಖನ ಅನೇಕ ಗೊಂದಲಗಳಿಂದ ಕೂಡಿ ಕಡೆಗೆ ಏನನ್ನೂ ಹೇಳಿದಂತೆ ಆಗುವುದಿಲ್ಲ.

ಕರ್ನಾಟಕ ಶಾಕುಂತಲ ನಾಟಕಂ—ಒಂದು ಸಮೀಕ್ಷೆ : ಪ. ವಿ. ಚಂದ್ರಶೇಖರ

ಪುಸ್ತಕದ ಹೆಸರು ಶಾಕುಂತಲ ನಾಟಕದ ಸಮೀಕ್ಷೆ ಎಂದಿದೆ. ಆದರೆ ಕರ್ನಾಟಕ ಶಾಕುಂತಲವನ್ನು ಕನ್ನಡಕ್ಕೆ ಭಾಷಾಂತರಿಸಿದ ಶಾಸ್ತ್ರಿಗಳ ಉಲ್ಲೇಖ ಕಡೆಯ ಒಂದೆರಡು ಪುಟಗಳಲ್ಲಿ ಮಾತ್ರ ಪ್ರಾಸಂಗಿಕವಾಗಿ ಕಾಣಿಸಿಕೊಂಡಿದೆ. ಅಲ್ಲಲ್ಲೆ ಕರ್ನಾಟಕ ಶಾಕುಂತಲದ ಪದ್ಯಗಳನ್ನು ಉಲ್ಲೇಖಿಸಿರುವುದನ್ನು ಬಿಟ್ಟರೆ ಕರ್ನಾಟಕ ಶಾಕುಂತಲದ ಬಗೆಗೆ ಈ ಪುಸ್ತಕ ಹೊಸದೇನನ್ನೂ ಹೇಳುವುದಿಲ್ಲ. ಅಲ್ಲದೆ ಶಾಕುಂತಲ ನಾಟಕದ ಬಗೆಗೆ ವಿಮರ್ಶಾತ್ಮಕ ನೋಟಕ್ಕಿಂತ ಶಾಕುಂತಲದ ಕತೆಯನ್ನು ಹೇಳುವುದೇ ಪುಸ್ತಕದ ಉದ್ದೇಶವಾಗಿದೆ.

ಶಾಕುಂತಲ ನಾಟಕದಲ್ಲಿ ಸಾಂಕೇತಿಕತೆ ಎಂಬ ಭಾಗ ಲೇಖಕರ ಸೂಕ್ಷ್ಮವಾದ ಗ್ರಹಿಕೆಯ ಮೇಲೆ ಬೆಳಕು ಚೆಲ್ಲುತ್ತದೆ. ಆದರೆ ಆ ಭಾಗ ಬೆಳೆದಂತೆಲ್ಲ ಸಾಮಾನ್ಯ ವಿವರವಾಗಿ ಕೊನೆಗೊಳ್ಳುತ್ತದೆ.

ಬಸಪ್ಪಶಾಸ್ತ್ರಿಗಳ ಅನುವಾದದ ಬಗೆಗಾಗಲೀ, ಸಂಸ್ಕೃತದ ಶಾಕುಂತಲ ಮತ್ತು ಕನ್ನಡ ಶಾಕುಂತಲದ ಬಗೆಗೆ ತೌಲನಿಕ ಸಮೀಕ್ಷೆಯಾಗಲೀ ಇಲ್ಲಿ ಕಾಣಲಾಗುವುದಿಲ್ಲ. ಹೀಗಾಗಿ ಪುಸ್ತಕ ಸೀಮಿತ ಉದ್ದೇಶದ ಬರಹವಾಗಿದೆ.

ಜೈನ ಭಾಗವತ ಭಾರತಗಳು—ಒಂದು ಸಮೀಕ್ಷೆ : ಟಿ. ವಿ. ವೆಂಕಟಾಚಲಶಾಸ್ತ್ರಿ

ಈ ಕೃತಿ ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ ಎಂಬ ನಿಬಂಧದ ಒಂದು ಭಾಗ. ಕನ್ನಡ ನೇಮಿನಾಥ ಪುರಾಣಗಳ ಅಭ್ಯಾಸಿಗಳಿಗೆ ಮತ್ತು ಜೈನ ಪುರಾಣಗಳ ಅಭ್ಯಾಸ ಮಾಡುವವರಿಗೆ ಉಪಯುಕ್ತವಾದ ಸಾಮಗ್ರಿ ಇಲ್ಲಿದೆ. ಜೈನ ಭಾಗವತ ಭಾರತಗಳು—ಹರಿವಂಶ ಪುರಾಣದಿಂದ ಹಿಡಿದು ನೇಮಿನಾಥ ಪುರಾಣದ ವರೆಗೆ ಬಂದಿರುವ ಭಾಗವತ ಮತ್ತು ಭಾಗವತ ವಸ್ತುಗಳ ಸ್ವರೂಪ ಮತ್ತು ವಸ್ತುವಿನ ಆಶಯಗಳ ವ್ಯತ್ಯಾಸಗಳನ್ನು ಇಲ್ಲಿ ಗುರುತಿಸಲಾಗಿದೆ. ಗುಣಭದ್ರಾಚಾರ್ಯರ 'ಉತ್ತರ ಪುರಾಣ, ಚಾವುಂಡರಾಯನ 'ಚಾವುಂಡರಾಯ ಪುರಾಣ', ಕರ್ಣಪಾರ್ಯನ 'ನೇಮಿನಾಥ ಪುರಾಣ', ನೇಮಿಚಂದ್ರನ 'ನೇಮಿನಾಥ ಪುರಾಣ'–ಇವೇ ಮೊದಲಾದ ಕೃತಿಗಳಲ್ಲಿ ಭಾಗವತ ಭಾರತಗಳ ಪ್ರಕರಣಗಳು ಪಡೆದುಕೊಂಡಿರುವ ಸಾಮ್ಯ—ವ್ಯತ್ಯಾಸಗಳು ಹಾಗೂ ಸಂಬಂಧಾಂತರಗಳನ್ನು ಇಲ್ಲಿ ಗುರುತಿಸಲಾಗಿದೆ.

ವಿಮರ್ಶೆಯ ದೃಷ್ಟಿಗಿಂತ ಮೇಲೆ ಹೇಳಿದ ಎಲ್ಲ ಬೇರೆ ಬೇರೆ ಕೃತಿಗಳ ಮೂಲಕ ಸಂಯೋಜಿಸಿರುವ ರೀತಿ ಸಾಹಿತ್ಯಾಭ್ಯಾಸಿಗಳಿಗೆ ಉಪಯುಕ್ತವಾಗಿದೆ. ಲೇಖಕರು ಬೇರೆ ಬೇರೆ ಕೃತಿಗಳಲ್ಲಿನ ವಸ್ತುವನ್ನು ಮೌಲ್ಯಮಾಪನಕ್ಕೆ ಗುರಿಪಡಿಸಲಾಗಿದೆ ಎಂದು ಹೇಳಿದ್ದಾರೆ. ಆದರೆ ಅಂಥ ಪ್ರಯತ್ನ ನಡೆದಂತೆ ತೋರುವುದಿಲ್ಲ. ಹೆಚ್ಚೆಂದರೆ ಬೇರೆ ಬೇರೆ ಕೃತಿಗಳಲ್ಲಿ ಭಾಗವತ ಮತ್ತು ಭಾರತದ ಕಥಾವಿನ್ಯಾಸಗಳ ಸ್ವರೂಪವನ್ನು ಈ ಕೃತಿಯಿಂದ ನಾವು ತಿಳಿಯುತ್ತೇವೆ.

ಆಯ್ದ ಆರು ಲೇಖನಗಳು : ಎಸ್. ವಿ. ಪರಮೇಶ್ವರ ಭಟ್ಟ

ಎಸ್. ವಿ. ಪರಮೇಶ್ವರ ಭಟ್ಟರು ಕಳೆದ ಹದಿನೈದು ಇಪ್ಪತ್ತು ವರ್ಷಗಳಲ್ಲಿ ಬರೆದ ಆರು ಲೇಖನಗಳ ಸಂಕಲನ. ಈಗಾಗಲೇ ಇದರಲ್ಲಿನ ಲೇಖನಗಳು ಬೇರೆ ಬೇರೆ ಪುಸ್ತಕಗಳಲ್ಲಿ ಸೇರಿವೆ. ಅದನ್ನು ಮತ್ತೆ ಒಂದು ಸಂಕಲನದ ರೂಪಕ್ಕೆ ತರಲಾಗಿದೆ.

'ಪಂಪನು ಬೆಳಗಿರುವ ಲೌಕಿಕ ಚಿತ್ರ' ಎಂಬ ಮೊದಲನೆಯ ಲೇಖನ ಪಂಪ ಭಾರತದ ಕರ್ಣ, ಭೀಷ್ಮ ಮತ್ತು ದ್ರೋಣರು ವೀರಪಟ್ಟದ ಸಂದರ್ಭದಲ್ಲಿ ನಡೆಸುವ ವಾಗ್ವಾದವನ್ನು ಪರಿಚಯ ಮಾಡಿಕೊಡುವ ಲೇಖನ.

'ಬಸವಣ್ಣನವರ ವಚನಗಳಲ್ಲಿನ ರೂಪಾಂಶ' ಎಂಬ ಲೇಖನ ವಚನಗಳಲ್ಲಿನ ಸಂಕ್ಷಿಪ್ತ, ವ್ಯಾಕರಣ ವಿಶೇಷ, ಗಾದೆ ಮಾತು, ಸೂಕ್ತಪ್ರಾಯವಾದ ಮಾತು ಇವುಗಳ ಹಿನ್ನೆಲೆಯಲ್ಲಿ ವಚನಗಳ ವಿಶ್ಲೇಷಣೆಯನ್ನು ನಡೆಸಿದ್ದಾರೆ.

ಬಸವಮಾರ್ಗ (ಸಂಪುಟ 1)—(ಸಂ) ಎಂ. ಎಂ. ಕಲಬುರ್ಗಿ

ಇದು ಬಸವ ಮಾರ್ಗದ ಮೊದಲನೆಯ ಸಂಪುಟ. ಎರಡು ವಿಚಾರಸಂಕಿರಣಗಳ ಆರು ಲೇಖನಗಳಿವೆ. 'ಸಾಮಾಜಿಕ ಮೌಲ್ಯವಾಗಿ ಗುರು—ಲಿಂಗ—ಜಂಗಮ' ಮತ್ತು 'ಕಾವ್ಯಗಳಲ್ಲಿ ಬಸವಮೌಲ್ಯ ಪ್ರತಿಪಾದನೆ' ಎಂಬ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಗುರು—ಲಿಂಗ—ಜಂಗಮ ಈ ಪರಿಕಲ್ಪನೆಗಳ ನೆಲೆಗಳನ್ನು ಪರಿಶೀಲಿಸಲಾಗಿದೆ. ಈ ಪರಿಕಲ್ಪನೆಗಳು ಮೂಲಭೂತವಾಗಿ ಧಾರ್ಮಿಕವಾದದ್ದಾದರೂ, ಹನ್ನೆರಡನೆಯ ಶತಮಾನದ ವಚನಕಾರರು ಮತ್ತು ಅನಂತರದ ಕವಿಗಳು ಅವುಗಳನ್ನು ತಮ್ಮ ಅಭಿವ್ಯಕ್ತಿಯ ಸಂದರ್ಭದಲ್ಲೆ ಹೇಗೆ ಬಳಸಿಕೊಂಡರೆಂಬುದು ಇದರ ಮಹತ್ವದ ನೆಲೆ.

ಬಿ. ಬಿ. ಹಂಡಿಯವರ ಲೇಖನಕ್ಕೆ ಸಾಹಿತ್ಯ ಮತ್ತು ಧರ್ಮಗಳ ಸಂಬಂಧದಿಂದ ಹೊರಡುವ ಚಿಂತನೆಗಳ ಹಿನ್ನೆಲೆ ಇದೆ. ಜಂಗಮ ಪರಿಕಲ್ಪನೆಗೆ ವ್ಯಾಪಕವಾದ

ಅರ್ಥದ ಸ್ವರೂಪವಿರುವುದನ್ನು ಎ. ಎಲ್. ಶಿವರುದ್ರಪ್ಪನವರ ಲೇಖನ ವಿಶ್ಲೇಷಿಸುತ್ತದೆ. 'ಜಂಗಮ ಎಂಬುದೊಂದು ವೀರಶೈವ ಧರ್ಮದಲ್ಲಿ ಮಾತ್ರವೇ ಇರುವಂತಹ ಧಾರ್ಮಿಕ ಹಾಗೂ ಸಾಮಾಜಿಕ ಪ್ರತಿಷ್ಠಾನ' ಎಂಬ ಅವರ ನಿಲುವು ಲೇಖನದಲ್ಲೆ ಪ್ರಕಟಗೊಂಡಿದೆ. ಅಲ್ಲದೆ ಈ ಪರಿಕಲ್ಪನೆಯ ಮೂಲಕ ಹೊರಡುವ ಸೂಕ್ಷ್ಮವಾದ ಗ್ರಹಿಕೆಗಳನ್ನು ಅವರು ಗುರುತಿಸಿದ್ದಾರೆ.

'ಬಸವರಾಜದೇವರ ರಗಳೆಯಲ್ಲಿ ಬಸವಮೌಲ್ಯ ಪ್ರತಿಪಾದನೆ' (ಎಂ. ಎಂ. ಕಲಬುರ್ಗಿ) ಈ ಪ್ರಬಂಧ ಹರಿಹರ ಕವಿಯ ಬಸವರಾಜದೇವರ ರಗಳೆಯಲ್ಲಿ ವೀರಶೈವ ಧರ್ಮದ ನೆಲೆಗಳು ಕಾಣಿಸಿಕೊಂಡಿರುವ ನೆಲೆಗಳನ್ನು ಅಚ್ಚುಕಟ್ಟಾಗಿ ವಿವರಿಸಿದ್ದಾರೆ. ವಚನಕಾರರ ಚಳವಳಿಯ ಪ್ರಭಾವ ಹರಿಹರನ ಕಾವ್ಯದಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ತೋರುವುದೇ ಇಲ್ಲಿನ ಉದ್ದೇಶ. ಮುಖ್ಯವಾದ ಮಾತೆಂದರೆ ಕಾವ್ಯ ಮತ್ತು ಧರ್ಮದ ನೆಲೆಗಳು ಒಂದುಗೂಡುವ, ಎದುರಿಸುವ ಪ್ರಕ್ರಿಯಾತ್ಮಕವಾದ ಸವಾಲುಗಳ ಸ್ವರೂಪವನ್ನು ಗಮನಕ್ಕೆ ತಂದುಕೊಳ್ಳುವುದು ಮುಖ್ಯ ಎನ್ನಿಸುತ್ತದೆ.

'ಬಸವಪುರಾಣದಲ್ಲಿ ಬಸವ ಮೌಲ್ಯ ಪ್ರತಿಪಾದನೆ' (ಎಸ್. ವಿದ್ಯಾಶಂಕರ) ಎಂಬ ಲೇಖನ ಪುರಾಣ ಮತ್ತು ಕಾವ್ಯಗಳ ಸಂಬಂಧ ಹೇಗೆ ಪ್ರವರ್ತಿಸುತ್ತಿದೆ ಎಂಬುದನ್ನು ಗಮನಕ್ಕೆ ತಂದುಕೊಂಡಿಲ್ಲ. ಬಸವಪುರಾಣದಲ್ಲಿ ಬಸವಮೌಲ್ಯದ ಪ್ರತಿಪಾದನೆಯನ್ನು ಕಾವ್ಯಾಂತರ್ಗತವಾದ ನೆಲೆಗಳಲ್ಲಿ ಪರಿಶೀಲಿಸುವುದು ಲೇಖಕರಿಗೆ ಮುಖ್ಯವಾಗಬೇಕಾಗಿತ್ತು. ಹೀಗಾಗಿ ಪುರಾಣದ ಆಂತರಿಕ ನಾಟ್ಯಕ್ರಿಯೆಯಾಗಲಿ, ವರ್ಣನಾತ್ಮಕ ನೆಲೆಗಳನ್ನಾಗಲಿ ಪರಿಶೀಲಿಸದೆ ಕಥಾಮುಖವನ್ನು ನೇರವಾಗಿ ಸ್ವೀಕರಿಸಿರುವುದರಿಂದ ಉಂಟಾಗಿರುವ ಏರುಪೇರು ಇದಾಗಿದೆ.

'ಸಿಂಗಿರಾಜಪುರಾಣದಲ್ಲಿ ಬಸವಮೌಲ್ಯ ಪ್ರತಿಪಾದನೆ' (ಎಸ್. ಎಸ್. ಹಿರೇಮಠ) ಈ ಲೇಖನ ಸಮಸ್ಯೆಯ ಸೂಕ್ಷ್ಮವಾದ ನೆಲೆಗಳನ್ನು ಸಿಂಗಿರಾಜ ಪುರಾಣದಿಂದ ಹೇಗೆ ಕಂಡುಕೊಳ್ಳಬಹುದೆಂಬ ಪ್ರಯತ್ನವಾಗಿದೆ. ಅಲ್ಲದೆ ಪ್ರತಿಪಾದಿತ ಮೌಲ್ಯವು ಕೃತಿಯ ಆಂತರ್ಯದಲ್ಲಿ ನಾಟ್ಯಕ್ರಿಯೆಗೆ ಹೇಗೆ ಗುರಿಯಾಗುತ್ತದೆಂಬುದನ್ನು ತೋರಿದ್ದಾರೆ. ಅಲ್ಲದೆ ಪುರಾಣದ ಪಾತ್ರಗಳ ಮುಖೇನ ನಡೆಯುವ ವಾಗ್ವಾದವನ್ನು ಹಿನ್ನೆಲೆಗೆ ತಂದು ಕೊಂಡಿರುವುದರಿಂದ ಲೇಖಕರ ಪ್ರಯತ್ನ ತನ್ನ ಮಿತಿಯೊಳಗೆ ಗಮನೀಯವಾದದ್ದಾಗಿದೆ.

ವಿಮರ್ಶಾಸುಧೆ : ಅರ್ಜುನಪುರಿ ಅಪ್ಪಾಜಿಗೌಡ

ಇದೊಂದು ಸಂಕೀರ್ಣ ಲೇಖನಗಳ ಸಂಕಲನ. ಶಬ್ದಮಣಿದರ್ಪಣ, ಅಹಲ್ಯೆ, ರಾಮಾಯಣ ದರ್ಶನ, ರನ್ನನ ಅಜಿತಪುರಾಣ, ಕಾಳಿದಾಸ, ಹರಿಹರ–ಈ ಮುಂತಾದ ಕೃತಿಕಾರರ ಲೇಖನಗಳಿವೆ. ಎಲ್ಲ ಲೇಖನಗಳು ವಿಪುಲವಾದ ಕಾವ್ಯಭಾಗಗಳಿಂದ

ತುಂಬಿವೆ. ಲೇಖಕರ ಕಾವ್ಯಾಸ್ವಾದದ ನೆಲೆಗಳನ್ನು ವಿವರ ವಿವರವಾಗಿ ತಮ್ಮ ಮಾತುಗಳಲ್ಲಿ ಹೇಳುವುದೇ ಈ ಲೇಖನಗಳ ಮುಖ್ಯ ಉದ್ದೇಶವಾಗಿದೆ.

ಕರ್ನಾಟಕದ ಕವಯಿತ್ರಿಯರು : (ಸಂ.) ನಿರುಪಮಾ

ಕರ್ನಾಟಕದ ಕವಯಿತ್ರಿಯರು ಎಂಬ ವಿಚಾರಸಂಕಿರಣದಲ್ಲಿ ಓದಿದ ಲೇಖನಗಳ ಪುಸ್ತಕ. ಇಲ್ಲಿನ ಹದಿಮೂರು ಲೇಖನಗಳು ಕನ್ನಡ ಸಾಹಿತ್ಯದಲ್ಲಿ ಕೃತಿರಚನೆ ಮಾಡಿದ ಕವಯಿತ್ರಿಯರನ್ನು ಪರಿಚಯ ಮಾಡಿಕೊಡುವ ಉದ್ದೇಶವನ್ನು ಹೊಂದಿದೆ. ಇವುಗಳಲ್ಲಿ ಕವಯಿತ್ರಿಯರನ್ನು ಕುರಿತು ಹತ್ತು ಲೇಖನಗಳು, ಕವಯಿತ್ರಿಯರ ನೆಲೆಗಳನ್ನು ವಿವರಿಸುವ ಮೂರು ಲೇಖನಗಳು ಸೇರಿವೆ. 'ಅಕ್ಕಮಹಾದೇವಿ' (ಡಿ. ಮಾಣಿಕ್ಯ)—ಲೇಖನ ಅಕ್ಕಮಹಾದೇವಿಯ ವಚನಗಳ ಹಿನ್ನಲೆಯಲ್ಲಿ ಆಕೆಯ ನಿಲುವುಗಳನ್ನು ಮತ್ತು ಧೋರಣೆಗಳನ್ನು ಪರಿಚಯಮಾಡಿಕೊಡುತ್ತದೆ. 'ಇತರ ವೈಷ್ಣವ ಪಂಥದ ಕವಯಿತ್ರಿಯರು' (ಟಿ. ಎನ್. ನಾಗರತ್ನ) ಲೇಖನ ಕವಯಿತ್ರಿಯರ ಕೃತಿ ರಚನೆ ಮತ್ತು ಅವರ ಕಾಲದ ಬಗೆಗೆ ವಿವರಗಳನ್ನು ಕೊಡುತ್ತದೆ. 'ಕನ್ನಡ ಕವಯಿತ್ರಿಯರು' (ಡಿ. ವಿಜಯಾ)—ಈ ಲೇಖನ ಕನ್ನಡ ಕವಯಿತ್ರಿಯರ ಕಾವ್ಯಧೋರಣೆ ಮತ್ತು ಅಂತಹ ಧೋರಣೆಯ ಹಿನ್ನೆಲೆಗೆ ಕಾರಣವಾದ ಸಂದರ್ಭಗಳನ್ನು ಒಳಗೊಳ್ಳುತ್ತದೆ.

ಅಕ್ಕನ ವಚನಗಳ ಬಗೆಗೆ ಲೇಖಕರು ಗಂಭೀರವಾಗಿ ಚರ್ಚಿಸುತ್ತಾರಾದರೂ ಕೆಲವು ತೋರ್ಕೆಯ ಹೇಳಿಕೆಗಳನ್ನು ಅಲ್ಲಲ್ಲಿ ಜಾರಿ ಮಾಡುತ್ತಾರೆ. ಉದಾಹರಣೆಗೆ ಸಾಲುಗಳನ್ನು ನೋಡಿ:

'ಇಂಥ ಅನೇಕ ಗುಣಾಂಶಗಳು ಅಕ್ಕನ ಕಾವ್ಯದಲ್ಲಿದ್ದರೂ ಪ್ರಪಂಚದ ಅತ್ಯುತ್ತಮ ಕೃತಿಯೊಂದಿಗೆ ಅಕ್ಕನ ಕಾವ್ಯ ಸ್ಪರ್ಧಿಸಲಾರದು'

'ಒಂದು ನಿಟ್ಟಿನ ಅಂತರಂಗಿಕ ತುಮುಲ ಆಳವು ತೀಕ್ಷ್ಣ ಆಗಿದ್ದರೂ ಪರಿಸರದ ಬೇರೆ ಬೇರೆ ಸೂಕ್ಷ್ಮಗಳಿಗೆ ಇಂಥ ಲೇಖಕರು ನಿರ್ಲಕ್ಷ್ಯ ತೋರುವುದರಿಂದ ಈ ಕಾವ್ಯದ ಪರಿಧಿ ಕಿರಿದಾಗುವುದು'.

ವಚನಕಾರರ ಚಳವಳಿಯ ನೆಲೆಗಳನ್ನು ತುಂಬ ಸಾಮಾನ್ಯೀಕರಿಸಿ ನಿರ್ವಚಿಸಿಕೊಂಡಿರುವುದರಿಂದ ಇಂಥ ಹೇಳಿಕೆಗಳು ಹೊರಟಿವೆ. ವಚನಕಾರರ ಚಳವಳಿ ಕೇವಲ ಅಂತರಂಗದ ಒತ್ತಡದಿಂದ ಮಾತ್ರ ಪ್ರಕಟವಾದದ್ದೆಂದು ತಿಳಿಯುವಂತಿಲ್ಲ. ಅಂತರಂಗದ ಒತ್ತಡ ಮತ್ತು ಬದುಕಿನ ಒತ್ತಡ ಇವುಗಳ ಸಂಘರ್ಷ ಮತ್ತು ಪ್ರಕ್ರಿಯೆಗಳ ಮೂಲಕ ಈ ಚಳವಳಿ ರೂಪುಗೊಂಡದ್ದೆಂಬುದು ಯಾವ ವಚನ ಕಾರರನ್ನೇ ಅಭ್ಯಾಸ ಮಾಡಿದರೂ ತಿಳಿದೀತು. ವಚನಕಾರರಿಗೆ ಕಾವ್ಯ ರಚನೆಯ ಉದ್ದೇಶ ಇಲ್ಲ. ಆದರೆ ಈ ಒತ್ತಡಗಳು ಅವರ ಉದ್ದೇಶವನ್ನು ಮೀರಿ ಅವರ ಅಭಿವ್ಯಕ್ತಿಗೆ ಕಾವ್ಯದ ಶಕ್ತಿಯನ್ನು ತಂದುಕೊಟ್ಟಿದೆ. ಈ ಹಿನ್ನೆಲೆಯಲ್ಲಿ ಸಾಹಿತ್ಯದ ವಿದ್ಯಾರ್ಥಿಗಳಾದ ನಾವು ವಚನಕಾರರನ್ನು ಅವರ ಮೂಲಕ ಹೊರಡುವ ವಾಗ್ವಾದವನ್ನು ಗಮನಿಸಬೇಕು.

ಸಾಹಿತ್ಯ ಮತು ಭಾಷೆ : ಶಾಂತಿನಾಥ ದೇಸಾಯಿ

ಬೆಂಗಳೂರು ವಿಶ್ವವಿದ್ಯಾಲಯದ ಮಾಸ್ತಿ ರಾಮಸ್ವಾಮಿ ತಿರುಮಲಮ್ಮ ದತ್ತಿ ಉಪನ್ಯಾಸದ ಅಂಗವಾಗಿ ದೇಸಾಯಿಯವರು ಮಾಡಿದ ಉಪನ್ಯಾಸವೇ ಈ ಪುಸ್ತಕ.

ಶೈಲಿವಿಜ್ಞಾನ ಇತ್ತೀಚಿನ ದಿನಗಳಲ್ಲಿ ವಿಶೇಷವಾದ ಅಧ್ಯಯನಕ್ಕೆ ಪಕ್ಕಾಗಿದೆ. ಅಲ್ಲದೆ ಭಾಷಾವಿಜ್ಞಾನದ ವಿದ್ಯಾರ್ಥಿ ಕಾವ್ಯಶೈಲಿಯನ್ನು ಗ್ರಹಿಸುವ ಚಿಂತನೆಗಳನ್ನು ಈ ಶಿಸ್ತು ಒಳಗೊಳ್ಳುತ್ತದೆ. ಶೈಲಿಶಾಸ್ತ್ರದ ಮೂಲಭೂತ ನೆಲೆಗಳನ್ನು ಈ ಕೃತಿ ಪರಿಚಯ ಮಾಡಿಕೊಟ್ಟಿದೆ. ಶೈಲಿವಿಜ್ಞಾನವನ್ನು ಕುರಿತು ಇದೀಗ ತಾನೆ ಅಲ್ಲಲ್ಲಿ ಬರಹಗಳು ಕಾಣಿಸಿಕೊಳ್ಳುತ್ತಲಿವೆ. ಈ ದಿಸೆಯಲ್ಲಿ ದೇಸಾಯರ ಈ ಪುಸ್ತಕ ಶೈಲಿ ಶಾಸ್ತ್ರವನ್ನು ತಿಳಿಯಬೇಕೆನ್ನುವವವರಿಗೆ ಒಂದು ಉತ್ತಮ ಪ್ರಾಥಮಿಕ ಮಾರ್ಗದರ್ಶಿಯಾಗಿದೆ.

ಹರಿದಾಸ ಸಾಹಿತ್ಯ ಸಮೀಕ್ಷೆ : (ಸಂ) ಜಿ. ವರದರಾಜರಾವ್

ಕನ್ನಡ ಅಧ್ಯಯನ ಸಂಸ್ಥೆಯ 'ಹರಿದಾಸ ಸಾಹಿತ್ಯಮಾಲೆ'ಯ ಮೊದಲನೆಯ ಪುಸ್ತಕ. ಹರಿದಾಸ ಸಾಹಿತ್ಯವನ್ನು ಕುರಿತು ಏರ್ಪಡಿಸಿದ ವಿಚಾರ ಸಂಕಿರಣದ ಲೇಖನಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಒಟ್ಟು ಏಳು ಲೇಖನಗಳಿವೆ. ಹರಿದಾಸ ಸಾಹಿತ್ಯದ ವಿಭಿನ್ನ ನೆಲೆಗಳನ್ನು ಪರಿಶೀಲಿಸುವುದು ಸಂಕಿರಣದ ಉದ್ದೇಶವೆಂದು ತಿಳಿಯುತ್ತದೆ. ಎಂದರೆ ಸಂಪಾದನೆಯ ಸಮಸ್ಯೆಗಳು, ಪೌರಾಣಿಕ ಮೌಲ್ಯ, ಸಂಗೀತ ಮೌಲ್ಯ, ಸಾಮಾಜಿಕ ಮೌಲ್ಯ, ಸಂಸ್ಕೃತ ವೇದಾಂತ ಗ್ರಂಥಗಳ ಪ್ರಭಾವ, ಸಾಹಿತ್ಯ ಮೌಲ್ಯ, ದ್ವೈತ ಸಿದ್ಧಾಂತ ಹೀಗೆ ಬೇರೆ ಬೇರೆ ದೃಷ್ಟಿಕೋನದ ಲೇಖನಗಳಿವೆ. ಬಹುತೇಕ ಲೇಖನಗಳಲ್ಲಿನ ಹರಿದಾಸ ಸಾಹಿತ್ಯದ ಬಗೆಗೆ ಈಗಾಗಲೇ ರೂಪುಗೊಂಡಿರು ಗ್ರಹಿಕೆಗಳ ಪುನರ್ ನಿರೂಪಣೆಯೇ ಹೊರತು ಬೇರೆಯಲ್ಲ. ಜಿ. ವರದರಾಜ ರಾಯರು ಹರಿದಾಸ ಸಾಹಿತ್ಯವನ್ನು ಸಂಪಾದಿಸುವುದರಲ್ಲಿ ಎದುರಿಸಬೇಕಾಗಿ ಬರುವ ಸಮಸ್ಯೆಗಳನ್ನು ಕುರಿತು ಸಮರ್ಥ ಲೇಖನವನ್ನು ಬರೆದಿದ್ದಾರೆ. ಇನ್ನೂ ಅಧಿಕೃತಗೊಳ್ಳದೇ ಹೋಗಿರುವ ಹರಿದಾಸ ಸಾಹಿತ್ಯವನ್ನು ಸಂಪಾದಿಸುವುದರ ಮೂಲಕ ಭಕ್ತಿಪಂಥದ ಸ್ಪಷ್ಟರೂಪದ ನಿರ್ಮಾಣಕ್ಕೆ ದಾರಿಯಾಗಿತ್ತದೆಂಬುದು ಅವರ ಆಶಯ.

ರಾ. ಸತ್ಯನಾರಾಯಣ ಅವರು ಹರಿದಾಸ ಸಾಹಿತ್ಯದ ಮೂಲಕ ಹೊರ ಪಟ್ಟಿರುವ ಸಂಗೀತದ ಮೌಲ್ಯವನ್ನು ಕುರಿತು ವಿಶ್ಲೇಷಿಸಿದ್ದಾರೆ.

'ಹರಿದಾಸ ಸಾಹಿತ್ಯದ ಸಾಮಾಜಿಕ ಮೌಲ್ಯ' (ಎಚ್. ಆರ್. ದೊರೆಸ್ವಾಮಿ) ಎಂಬ ಲೇಖನ ಕನ್ನಡ ಸಂಸ್ಕೃತಿಯಲ್ಲಿ ಏರ್ಪಟ್ಟ ಚಳುವಳಿಯೊಂದನ್ನು ನಿಷೇಧಾತ್ಮಕವಾಗಿ ಕಾಣುವ ದೃಷ್ಟಿಯಿಂದ ಕೂಡಿದೆ.

ತಮಿಳು ಸಾಹಿತ್ಯ ಚರಿತ್ರೆ : (ಮೂಲ : ಮು. ವರದರಾಜನ್)
ಅನು : ಎಲ್. ಗುಂಡಪ್ಪ

ಭಾರತೀಯ ಭಾಷಾಸಾಹಿತ್ಯದ ಚರಿತ್ರೆಗಳನ್ನು ಪ್ರಕಟಿಸುವ ಸಾಹಿತ್ಯ ಅಕಾಡೆಮಿಯ ಯೋಜನೆಗೆ ಅನುಸಾರವಾಗಿ ಈ ಪುಸ್ತಕ ಪ್ರಕಟವಾಗಿದೆ. ಇಂದು ತೌಲನಿಕ ಸಾಹಿತ್ಯದ ನೆಲೆಗಳು ವಿಶೇಷವಾಗಿ ರೂಪುಗೊಳ್ಳುತ್ತಿರುವ ಕಾಲ. ಭಾರತೀಯ ಭಾಷೆಗಳ ಸಾಹಿತ್ಯಕ ಪರಂಪರೆ ಸಾಂಸ್ಕೃತಿಕ ಹಿನ್ನೆಲೆ, ಮಹತ್ವದ ಸಾಹಿತ್ಯಕ ಚಳುವಳಿಗಳನ್ನು ಕುರಿತು ಚರ್ಚೆ ಅತ್ಯಂತ ಅಗತ್ಯವಾಗಿದೆ. ಆಧುನಿಕ ಭಾರತೀಯ ಸಾಹಿತ್ಯವನ್ನು ಕೇವಲ ಪಾಶ್ಚಾತ್ಯ ಪ್ರಭಾವದ ಅಡಿಯಲ್ಲಿಯೇ ಗುರ್ತಿಸಿಕೊಂಡು ಬಂದಿರುವ ಅಸಂಗತ ನೆಲೆಯೊಂದು ನಮ್ಮ ಸುತ್ತ ಹಬ್ಬಿದೆ. ಆಧುನಿಕ ಸಾಹಿತ್ಯಕ್ಕೆ ಮೊದಲಿನ ಸಾಹಿತ್ಯರಚನೆಗಳನ್ನು ಸಂಸ್ಕೃತವೇ ಮೊದಲಾದ ಭಾಷೆಗಳೊಂದಿಗೆ ಇಟ್ಟು ನೋಡುವ ದೃಷ್ಟಿಯೊಂದು ವ್ಯಾಪಕವಾಗಿ ಹಬ್ಬಿತ್ತು. ತೌಲನಿಕ ಅಧ್ಯಯನ ಮುಖ್ಯವಾದಂತೆಲ್ಲ ಭಾರತೀಯ ಭಾಷೆಗಳ ಸಾಹಿತ್ಯವನ್ನು ತನ್ನ ಸೋದರ ಭಾಷೆಗಳೊಂದಿಗೆ ಮತ್ತು ಇನ್ನಿತರ ಭಾಷಾ ಸಾಹಿತ್ಯಗಳೊಂದಿಗೆ ನೋಡುವ ದೃಷ್ಟಿ ಬೆಳೆದಿದೆ. ಈ ದಿಶೆಯಲ್ಲಿ ಭಾರತೀಯ ಸಾಹಿತ್ಯದ ಮೂಲ ಪ್ರೇರಣೆಗಳು ಹೇಗೆ ಆಯಾ ಭಾಷೆಯ ಸಾಂಸ್ಕೃತಿಕ ವಿಶಿಷ್ಟತೆಗಳೊಂದಿಗೆ ಅರ್ಥಪೂರ್ಣವಾಗಿ ಸೇರಿದೆ ಎಂಬುದನ್ನು ತಿಳಿಯುವುದರ ಜೊತೆಗೆ ಪ್ರತಿಯೊಂದು ಭಾಷೆಗೂ ಇರುವ ವಿಭಿನ್ನ ಒತ್ತಡಗಳನ್ನು ತಿಳಿಯಲು ಸಾಧ್ಯವಾಗುತ್ತದೆ.

ಪ್ರಸ್ತುತ ತಮಿಳು ಸಾಹಿತ್ಯ ಚರಿತ್ರೆ ಓದುಗನಿಗೆ ತಮಿಳು ಸಾಹಿತ್ಯದ ಬೇರೆ ಬೇರೆ ನೆಲೆಗಳನ್ನು ಮತ್ತು ಆ ಸಾಹಿತ್ಯದ ಮಹತ್ವದ ಕೃತಿಗಳನ್ನು ಇಲ್ಲಿ ಗಂಭೀರವಾಗಿ ಚರ್ಚಿಸಲಾಗಿದೆ. ತಮಿಳು ಬಲ್ಲ ಕನ್ನಡ ಲೇಖಕರಾದ ಎಲ್. ಗುಂಡಪ್ಪನವರ ಅನುವಾದ ಸಮರ್ಥವಾಗಿ ಮೂಡಿ ಬಂದಿರಬಹುದೆಂದು ಪುಸ್ತಕ ಓದಿದವರಿಗೆ ತಿಳಿಯುತ್ತದೆ.

# ಜೀವನಚರಿತ್ರೆ ಮತ್ತು ಪ್ರಬಂಧಗಳು

**ಸುಮತೀಂದ್ರ ನಾಡಿಗ**

1980ರಲ್ಲಿ ಜೀವನ ಚರಿತ್ರೆ, ಆತ್ಮಚರಿತ್ರೆ, ವ್ಯಕ್ತಿಚಿತ್ರ, ನೆನಪುಗಳೂ ಸೇರಿ ಇಪ್ಪತ್ತೇಳು ಪುಸ್ತಕಗಳು ಬಂದಿವೆ. ಕುವೆಂಪು ಅವರ 'ನೆನಪಿನದೋಣಿ'ಯಲ್ಲಿ 'ನಾನು' ಅನ್ನುವ ಕೇಂದ್ರದ ಸುತ್ತಲಿರುವ ತನ್ನ ಅಂತರಂಗವನ್ನು ಮತ್ತು ಬಹಿರಂಗವನ್ನು ಸಂಪೂರ್ಣವಾಗಿ ತೆರೆದಿಡುವ ಆತ್ಮಚರಿತ್ರೆ. ಸೂರ್ಯನಾಥಕಾಮತರು ಸಂಪಾದಿಸಿದ 'ಸ್ವಾತಂತ್ರ ಸಂಗ್ರಾಮದ ಸ್ಮೃತಿಗಳು' (ಭಾಗ 3) ನಾಡು ನುಡಿ ಸಂಸ್ಕೃತಿ ಸಮಾಜ ಚರಿತ್ರೆ ಸಂವಹನ ಹೀಗೆ ಅನೇಕ ವಿಷಯಗಳಲ್ಲಿ ಆಸಕ್ತಿಯುಳ್ಳವರಿಗೆ ಬೇಕಾಗುವ ಆಕರ ಗ್ರಂಥ. ಇದರಲ್ಲಿ ನೂರಾರು ಸ್ವಾತಂತ್ರ್ಯವೀರರ ನೆನಪುಗಳಿವೆ. ಇಡಿಯಾದ ಬದುಕನ್ನು ಚಿತ್ರಿಸುವ ಎರಡು ಜೀವನ ಚರಿತ್ರೆಗಳು, ಜಿ. ಟಿ. ನಾರಾಯಣ ರಾವ್ ಬರೆದ 'ಆಲ್ಬರ್ಟ್ ಐನ್‌ಸ್ಟೈನ್' ಮತ್ತು ಕೋತಿನ ಅವರು ಬರೆದ 'ಸೋನೂ ಬಾಯಿ ದೊಡ್ಡಮನಿ' ಸೇ. ಗೋ. ಕುಲಕರ್ಣಿಯವರ 'ನಾನು ಕಂಡ ಗೆಳೆಯರ ಗುಂಪು' (ಭಾಗ 2) ಸಾಧನ ಮುದ್ರಣಾಲಯ ಮತ್ತು ಜೀವನ ಪತ್ರಿಕೆ ಪ್ರಾರಂಭವಾದ ದಿನಗಳನ್ನು ಕುರಿತದ್ದು. ವೀರಶೈವ ಪುಣ್ಯ ಪುರುಷರ ಸಾಹಿತ್ಯ ರತ್ನಮಾಲೆಯಲ್ಲಿ ಪ್ರಕಟವಾಗಿರುವ ಹತ್ತು ಪುಸ್ತಕಗಳಲ್ಲಿ 'ಬಸರೀಗಿಡದ ವೀರಪ್ಪನವರು' ಗುಬ್ಬಿ ತೋಟದಪ್ಪನವರು, 'ಸರದಾರ ವೀರನಗೌಡರು', 'ದೊಡ್ಡಮೇಟಿ ಅಂದಾನಪ್ಪನವರು' ಗಮನಾರ್ಹವಾಗಿವೆ. ಜೀವನ ಚರಿತ್ರೆಯ ಪ್ರಕಾರದಲ್ಲಿ ಇದು 1980ರ ಸಾಧನೆ. ಇದರ ಜೊತೆಗೆ 'ಅರವತ್ತು ವರ್ಷಗಳು' ಎನ್ನುವ ಡಿ. ಕೆಂಪರಾಜ ಅರಸರ ಆತ್ಮ ಚರಿತ್ರೆಯನ್ನು ಸೇರಿಸಿಕೊಳ್ಳಬೇಕು.

ವ್ಯಕ್ತಿ ಚಿತ್ರವನ್ನು ಬರೆಯುವಾಗ ಆ ವ್ಯಕ್ತಿಯ ಪರಿಸರ ಬಗ್ಗೆ ಗಮನ ಕೊಡಬೇಕು. ಮನೆ, ಮನೆತನ, ತಂದೆ ತಾಯಿಯರ ಸ್ವಭಾವ, ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆ ಅವನ ಮೇಲೆ ಬೀರಿದ ಪ್ರಭಾವವನ್ನು ಗಮನಿಸಬೇಕು. ಈ ಪರಿಸರ ಅವನಿಗೆ ಅನುಕೂಲವಾಗಿತ್ತೆ ಅಥವಾ ಪ್ರತಿಕೂಲವಾಗಿತ್ತೆ ? ಪರಿಸರದಲ್ಲಿ ಯಾವ ಬದಲಾವಣೆಗಳು ಅವನ ಮೇಲೆ ಪರಿಣಾಮ ಬೀರಿದವು. ಯಾವ ಯಾವ ಸನ್ನಿವೇಶದಲ್ಲಿ ಅವನ ಭಾವ ಸಂವೇದನೆ ರೂಪುಗೊಂಡಿತು ?—ಎಂದೆಲ್ಲ ಗಮನಿಸಿ ಅವನ ವ್ಯಕ್ತಿತ್ವದ ನಾನಾ ಅಂಶಗಳನ್ನು ಮಾತಿನಲ್ಲಿ ಮೂಡಿಸುವಾಗ, ಪ್ರಸಂಗಗಳು, ಘಟನೆಗಳು, ಸನ್ನಿವೇಶಗಳು, ಅವರಿವರು ಆಯಾ ಸಂದರ್ಭದಲ್ಲಿ ಆಡಿದ ಮಾತು, ನಡೆದುಕೊಂಡ ರೀತಿ, ತೋರಿದ ಪ್ರತಿಕ್ರಿಯೆ, ಉಳಿದವರ ನೆನಪಿನಲ್ಲಿ ಅವುಗಳ

ಪಡಿಯಚ್ಚು ಇಂಥವನ್ನು ಆಧಾರವಾಗಿಟ್ಟುಕೊಳ್ಳಬೇಕು. ಎಲ್ಲಕ್ಕಿಂತ ಹೆಚ್ಚಾಗಿ ತನ್ನ ಮೇಲೆ ಆ ವ್ಯಕ್ತಿ ಬೀರಿದ ಪರಿಣಾಮವೇನು, ಅವನು ತನ್ನನ್ನು ಆಕರ್ಷಿಸಿದ್ದೇಕೆ, ಅವನಿಂದ ತಾನು ಕಲಿತದ್ದೇನು ಎಂದು ಸ್ಪಷ್ಟಪಡಿಸಿಕೊಂಡು ಆ ವ್ಯಕ್ತಿಗೂ ಮತ್ತು ತನಗೂ ಇರುವ ಸಂಬಂಧದ ಬಣ್ಣದಲ್ಲಿ ಇಡೀ ವ್ಯಕ್ತಿ ಚಿತ್ರವನ್ನು ಅದ್ದಿ ತೆಗೆಯದಿದ್ದರೆ, ತನ್ನ ದರ್ಶನ, ತನ್ನ ಹೃದಯ ಸಂಸ್ಕಾರ, ತನ್ನ ಆದರ್ಶ ತನ್ನ ಧೋರಣೆಗಳ ಮೆರುಗನ್ನು ಬರಹಕ್ಕೆ ತರದಿದ್ದರೆ ವ್ಯಕ್ತಿ -ಚಿತ್ರಗಳು ಬರೀ ವರದಿಗಳಾಗುತ್ತವೆ. ಈ ಅಪಾಯದಿಂದ ಪಾರಾದ ಕೆಲವು ಕೃತಿಗಳ ಹೆಸರನ್ನು ಈಗಾಗಲೆ ನಮೂದಿಸಿದೆ.

ಕಳೆದವರ್ಷ ನಾಲ್ಕು ಪ್ರಬಂಧ ಸಂಕಲನಗಳಿದ್ದರೆ, ಈ ವರ್ಷ ಎರಡೇ ಎರಡು. ಒಂದು ಪುತಿನ ಅವರ 'ದೀಪರೇಖೆ' ; ಇನ್ನೊಂಡು ಗೊರೂರು ರಾಮಸ್ವಾಮಿ ಅಯ್ಯಂಗಾರರ 'ಹಳೆಯ ಪಳೆಯ ಮುಖಗಳು'. ಇವರಿಬ್ಬರೂ ಹಿಂದಿನ ತಲೆಮಾರಿಗೆ ಸೇರಿದವರು. ನವ್ಯದವರಿಗೆ ಪ್ರಬಂಧ ಒಂದು ಮುಖ್ಯವಾದ ಪ್ರಕಾರವಾಗಿ ಕಾಣಿಸಲೇ ಇಲ್ಲ 'ಎನ್ನುವುದನ್ನು' ಗಮನಿಸಬೇಕು. ಪ್ರಬಂಧ ಯಾವಾಗಲೂ ಬಿಗಿತದಲ್ಲಿ (ಟೆನ್ನಿಸನ್) ಸಿಕ್ಕ ಮನಸ್ಥಿತಿಗೆ ಒಗ್ಗುವ ಪ್ರಕಾರವಲ್ಲ. ಬಹುಶಃ ಯಾರಿಗೆ ಜನ ಬಳಕೆ ಸಾಧ್ಯವೋ, ಹರಟೆ ಕೊಚ್ಚುವುದು ಸಾಧ್ಯವೋ, ಯಾರು ಲಹರಿಗಾರರೋ, ಕಲ್ಪನಾಲೋಕಸಂಚಾರಿಗಳೋ ಅಂಥವರು ಮಾತ್ರ ಪ್ರಬಂಧಗಳನ್ನು ಬರೆಯಬಲ್ಲರು.

ಆಲ್ಬರ್ಟ್ ಐನ್‌ಸ್ಟೈನ್ : 444 ಪುಟಗಳಷ್ಟು ದೊಡ್ಡದಾದ ಜೀವನಚರಿತ್ರೆ ಇದು. ಜಿ. ಟಿ. ನಾರಾಯಣರಾವ್ ಅವರು ಬರೆದಿದ್ದಾರೆ. 74 ಅಧ್ಯಾಯಗಳಲ್ಲಿರುವ ಈ ಪುಸ್ತಕವನ್ನು ಬರೆಯಬೇಕಾದರೆ ಅವರು ಅನೇಕ ಪುಸ್ತಕಗಳನ್ನು ಓದಿ, ವಿದ್ವಾಂಸ ಮಿತ್ರರೊಡನೆ ಚರ್ಚಿಸಿ, ದೂರದ ದೇಶಗಳಿಂದ ಮಾಹಿತಿಗಳನ್ನು ತರಿಸಿಕೊಂಡು, ಇದಕ್ಕೆ ತಕ್ಕ ಶೈಲಿಯನ್ನು ಕುರಿತು ವಿಚಾರಮಾಡಿ, ಅದನ್ನು ರೂಪಿಸಿಕೊಳ್ಳುವುದಕ್ಕೆ ಹೆಣಗಾಡಿದ್ದನ್ನು ಪುಸ್ತಕದ ಮೊದಲಿಗೇ ಹೇಳಿದ್ದಾರೆ. ಈ ಪುಸ್ತಕದಲ್ಲಿ ಐನ್‌ಸ್ಟೀನರ ವ್ಯಕ್ತಿತ್ವ, ಸಾಹಸ, ಸಿದ್ಧಿಗಳೇ ಅಲ್ಲದೇ ವಿಜ್ಞಾನದ ವಿಕಾಸದ ಚಿತ್ರಣವನ್ನೂ ಕೊಟ್ಟಿರುವುದು ದೊಡ್ಡ ಸಾಧನೆಯೇ ಸರಿ. ಆದರೆ ಕಾವ್ಯಮಯ(?) ಮತ್ತು ಸಂಸ್ಕೃತಮಯವಾದ ಗದ್ಯಶೈಲಿಯನ್ನು ಉಪಯೋಗಿಸಿಕೊಳ್ಳಲಿಕ್ಕೆ ಹೋದದ್ದರಿಂದ ಅನಾಹುತಗಳಾಗಿವೆ. ಪದಶಃ ಅನುವಾದಕ್ಕೆ ಹೊರಟು ಇನ್ನು ಕೆಲವು ಕಡೆ ಕಗ್ಗಂಟುಗಳಾಗಿವೆ. ಶೈಲಿಯಲ್ಲಿರುವ ಮೊದಲನೆಯ ರೀತಿಯ ತೊಡರಿಗೆ ಈ ಉದಾಹರಣೆಗಳನ್ನು ನೋಡಿ (1) ಜಾತಿ ಭೇದಗರಳದ ಹರಡಿಕೆಗೆ ಜನ ತಿಳಿದೊ ತಿಳಿಯದೆಯೊ ಅನುಸರಿಸುವ ಪ್ರಚ್ಛನ್ನ ವಿಧಾನಗಳು ಹಲವು ಹನ್ನೊಂದು. ಇಂಥ ಒಂದು ಸನ್ನಿವೇಶ ಆ 'ತುರಂಗಶಾಲೆ' ಯಲ್ಲಿ ಒಮ್ಮೆ ತಲೆದೋರಿತು (ಪುಟ 7). (2) ಹಗಲು ರಾತ್ರಿಗಳ ಎಂದೂ ಮುಗಿಯದ ಒಂದನ್ನಿನ್ನೊಂದು ಹಿಡಿಯುವ ಆಟ, ಗಗನವೈಭವವಾದ ಸೂರ್ಯನ ಸರ್ವಗ್ರಹಣ ಸಾಮರ್ಥ್ಯ, ಇರುಳರಸನಾದ ಉಡುಪತಿಯ ಬಗೆಬಗೆಯ ವರಿಸೆಗಳು, ನಕ್ಷತ್ರಗಳ ಚಿರಂತನ ಮೂಕಶ್ಲೋಕ...ಇವನ ಮನಸ್ಸಿನಮೇಲೆ ಅಗಾಧ ಪ್ರಭಾವವನ್ನು ಅಚ್ಚೊತ್ತಿದ್ದವು (ಪು. 9). (3) ಸ್ನೇಹಿತರಿಂದ ದೊರೆತ ಜನಪ್ರಿಯ ವಿಜ್ಞಾನ

ಪುಸ್ತಕಗಳನ್ನು ಇವನು ಬರಗೇಡಿ ಆಶನವನ್ನು ಕಬಳಿಸುವ ಆತುರತೆಯಿಂದ ಓದಿ ಅರಗಿಸಿಕೊಂಡ (ಪುಟ. 12). (4) ಆಲ್ಬರ್ಟ್ ಐನ್‌ಸ್ಟೈನ್ ಸ್ವಿಟ್ಸರ್ಲೆಂಡಿನ ಪ್ರಜೆ ಆದರು. ಅಲ್ಲಿಗೆ ಇವರ ಪೌರರಾಹಿತ್ಯ ತ್ರಿಶಂಕುತ್ವ ಕೊನೆಗೊಂಡಂತಾಯಿತು. ಜರ್ಮನಿಯ ಸೈನಿಕಮೂರಿಲೇಪ -ಅಳಿಸಿ ಹೋದಂತಾಯಿತು. (ಪುಟ. 23). (5) ಐನ್‌ಸ್ಟೈನರ ಗಣಿತ ಸುವಿಖ್ಯಾತ ಮಿಂಕೋವ್ಸ್ಕೀ (ಇವರ ತರಗತಿಗಳಿಗೂ ವಿದ್ಯಾರ್ಥಿ ಐನ್‌ಸ್ಟೈನ್ ಚಕ್ಕರ್ ಹೊಡೆಯುತ್ತಿದ್ದರೆಂಬ ಸಂಗತಿ ಅಲಾಯಿದ !) ಈ ನಿಬಂಧ ಓದಿ ಸಂತೋಷಾಶ್ಚರ್ಯಪುಳಕಿತರಾಗಿ ಬಾಯಿಗೆ ಬೆರಳಿಟ್ಟರು—ತರಗತಿಯಲ್ಲಿ ತಾನು 'ಸೋಮಾರಿನಾಯಿ' ಎಂದು ಹೆಸರಿಸಿದ್ದ ಆ ಅಗಣ್ಯ ಈ ಪರಮಗಣ್ಯ ನಿರೂಪಣೆಯ ಕಾರಣಿಕ ಕರಣಿಕನೇ ಎಂದು ! (ಪುಟ. 33). (6) ಐನ್‌ಸ್ಟೈನ್‌ರ ಸಿದ್ಧಾಂತ ಸಮಕಾಲೀನ ವಿಜ್ಞಾನಿಗಳನ್ನು ದಿಙ್ಮೂಢರನ್ನಾಗಿಸಿತು—ಹಿಮಾಶ್ಮ ಪ್ರವಾಹ ಬಯಲ ಸೀಮೆಯವರ ಮೇಲೆ ಹಠಾತ್ತನೆ ಆಕ್ರಮಣ ನಡೆಸಿದರೆ ಆಗುವಂತೆ (ಪುಟ. 45) (7) ಜರ್ಮನರ ದಾನಿನಾನುತನವೂ (superiority complex) ಚೆಕ್ಕರ ದೀನನಾನುತನವೂ (inferiority complex) ಎದುರು ಬದುರಾಗಿ ನಿಂತು ಕಳದಲ್ಲಿ ಕಾವೇರುತ್ತಿತ್ತು (ಪುಟ 56). (8) ಪ್ರಪಂಚದಲ್ಲಿ ಜರ್ಮನ್ ಜನಾಂಗದವರೇ—ತಮ್ಮ ಧಮನಿಗಳಲ್ಲಿ ಪರಿಶುದ್ಧ ಆರ್ಯರಕ್ತ ಪ್ರವಹಿಸುತ್ತಿರುವ ನಾರ್ಡಿಕ್ ವಂಶಸ್ಥರೇ—ಪರಮೋತ್ಕೃಷ್ಟ ಮಾನವರು ಎಂಬ ಭಾವ ಪ್ರಚ್ಛನ್ನವಾಗಿ ರಾಷ್ಟ್ರಕರಲ್ಲಿ ಪಸರಿಸುತ್ತಿತ್ತು. ಶಿಕ್ಷಣ ದೇವಾಲಯಗಳ ಅರ್ಚಕರೂ (ಅಂದರೆ ಪ್ರಾಧ್ಯಾಪಕರು) ಸಾಧಾರಣವಾಗಿ ಈ ವಿಷಾನಲದಿಂದ ಕಲುಷಿತರಾಗದಿರಲಿಲ್ಲ. ಉಗ್ರರಾಷ್ಟ್ರೀಯತೆ ಎಂಬುದೊಂದು ದಾನಿನಾಮತನ ನಿಲವು, ಇತರರೊಡನೆ ವ್ಯವಹರಿಸುವಾಗ ಸ್ವಯಂಚಾಲಿತವಾಗಿ ಪುಟನೆಗೆದು ಮಂಚೂಣಿಯಲ್ಲಿ ನಿಲ್ಲುವ ಬೇಲಿ, ಇತರರು ಸರ್ವವಿಧದಲ್ಲಿಯೂ ತಮಗೆ ಅಡಿಯಾಳುಗಳಾಗಿ—ಎಂದೂ ಸಮಾನಾರಾಗಿ ಅಲ್ಲ, ಇನ್ನು ಮೇಲಿನವರಾಗುವುದು ಸಾಧ್ಯವೇ ಇಲ್ಲವಷ್ಟೆ—ಜೈ ಜೈಕಾರ ಘೋಷಿಸುತ್ತಾ ಕುರ್ನಿಸಾತ್ ಮಾಡುತ್ತಾ ನಜರೊಪ್ಪಿಸುತ್ತಿರಬೇಕೆಂಬ ಅಹಂಭಾವ (ಪುಟ. 66).

ಇಷ್ಟು ಉದಾಹರಣೆಗಳು ಸಾಕು ಎನ್ನಿಸುತ್ತದೆ. ಇಂತಹವು ಪುಸ್ತಕದುದ್ದಕ್ಕೂ ಸಿಗುತ್ತವೆ. ಪದಶಃ ಅನುವಾದಗಳಿಂದ ಆಗಿರುವ ಅನರ್ಥಕ್ಕೆ ಈ ಉದಾಹರಣೆಗಳನ್ನು ನೋಡಿ : (1) ತರಗತಿಗೆ ಉಪಾಧ್ಯಾಯರು ದೊಡ್ಡ ಮೊಳೆಯೊಂದನ್ನು ತಂದು ಜೀಸಸ್‌ಗೆ ಬಡಿದ ಮೊಳೆಗಳು ಅಷ್ಟು ದೊಡ್ಡವು ಎಂದು ವಿವರಿಸಿದನಂತೆ. ಬಾಲಕ ಐನ್‌ಸ್ಟೈನ್ ಮನೆಗೆ ಹೋದಮೇಲೆ ಅದನ್ನು ತಾಯಿಗೆ ವಿವರಿಸುತ್ತಾ "ಆ ರಾವಣ ಮೊಳೆಯನ್ನು ಬಡಿದಾಗ ಅವನಿಗೆಷ್ಟು ನೋವಾಗಿರಬಹುದು..." (ಪುಟ. 7) ಎಂದು ಹೇಳಿದರಂತೆ. ಐನ್‌ಸ್ಟೈನರ ಬಾಯಲ್ಲಿ ಇಂತಹ ಮಾತುಗಳನ್ನು ಆಡಿಸಿದಾಗ ಆಭಾಸವಾಗುತ್ತದೆ. (2) ಪ್ರತ್ಯುತ್ಪನ್ನಮತಿಯೊಂದೇ ಭೌತವಿಜ್ಞಾನವನ್ನು ಈ ಕುರುಡುಗಲ್ಲಿಯಿಂದ ಪಾರುಗಾಣಿಸಬಲ್ಲದಾಗಿತ್ತು (3) ಕಛೇರಿಯಲ್ಲಿ

ಐನ್‌ಸ್ಟೈನ್ ಮಾಡುತ್ತಿದ್ದ 'ಮೋಚಿ' ಕೆಲಸ ಬಲುಬೇಗ, ಒಂದೆರಡು ಗಂಟೆಗಳಲ್ಲೇ, ಮುಗಿಯುತ್ತಿತ್ತು. (ಪುಟ. 31). (4) ಹೀಗಾಗಿ ಕಛೇರಿಯ ಕಡತದಲ್ಲಿ "ಐನ್‌ಸ್ಟೈನ್ ಕೊನೆಗೊಳ್ಳಲಿಲ್ಲ" ಎಂಬ ಷರಾ ಉಳಿದಿತ್ತು. (ಪುಟ 62). (5) ಇದು ಮಗುವಿನ ಮುಗ್ಧತೆ ಎಂದೆನ್ನಿಸಿದರೂ ಇದನ್ನು ಕಟ್ಟಾವಮ್ಲಟೀಕೆ ಎಂಬುದಾಗಿಯೂ ಪರಿಗಣಿಸ ಬಹುದು. (ಪುಟ. 77). (6) ತೋಳ-ಕುರಿಮರಿ ವ್ಯಾಜ್ಯದಲ್ಲಿ ನ್ಯಾಯತುಲಾಯಂತ್ರದ ಸೂಚಿ ಸದಾ ತೋಳದತ್ತ ವಾಲಿರಬೇಕಾದದ್ದು ಲೌಕಿಕ ನೀತಿಯಷ್ಟೆ, ಸ್ವತಃ ತುಲಾ ಯಂತ್ರದ ದೃಷ್ಟಿಯಿಂದ ಇದು ಅಗತ್ಯವೂ ಹೌದಷ್ಟೆ !" (ಪುಟ. 108) (7) ನನ್ನ ಮಿದುಳು ಸ್ರವಿಸಿಕೊಡಹುವ ಬೆವರುಹನಿಗಳನ್ನು ಕಲೆಹಾಕುವುದು ಮಾತ್ರ ಈ ಎಲ್ಲರ ಉದ್ದೇಶವಲ್ಲ (ಪುಟ. 121). (8) ನಾಲಿಗೆ ತಿರುಚಕ ಪಾರಿಭಾಷಿಕ ಪದ (ಪುಟ. 123). (9) ಅಮೆರಿಕದ ತರುಣ ಜನಾಂಗದಿಂದ ನಿರೀಕ್ಷಿಸಬಹುದಾದದ್ದು ಬಹಳಷ್ಟು ಉಂಟು : ಅದಿನ್ನೂ ಹೀರಿರದ ಮಧುಚಷಕ—ಶಸಿರು ಮತ್ತು ಹೊಸತು. (ಪುಟ. 164).

ಮೇಲೆ ಉದಾಹರಿಸಿದಂತಹ ಎರಡು ರೀತಿಯ ದೋಷಗಳ ಜೊತೆಯಲ್ಲೇ ಇನ್ನು ಕೆಲವು ಕನ್ನಡೀಕರಣದ ಆಭಾಸಗಳೂ ಈ ರೀತಿಯಲ್ಲಿವೆ : Tie = ಕಂಠ ಕೌಪೀನ (ಪುಟ. 46) Specialisation = ವಿಶೇಷೀಕರಣ (ಪುಟ. 66) War = ಕೊಳುಗುಳ (ಪುಟ. 68 discovery = ಆವಿಷ್ಕಾರ (ಪುಟ 88) discoverer = ಆವಿಷ್ಕರ್ತೃ (ಪುಟ. 115) Tooth Paste = ದಂತ ಕೂರ್ಚ (ಪುಟ. 132) Toothbrush = ಹಲ್ಲುಸರಿ (ಪುಟ. 132) Anti-semetism = ಪ್ರತಿ ಸೆಮೆಟಿ ಸಮ್ (ಪುಟ. 142) dress = ದುಸ್ತು (ಪುಟ. 151) Hat ಕರಿಮರಿಗೆ (ಪುಟ. 151) Inventor = ಉಪಜ್ಞೆಕಾರ (ಪುಟ. 157) Gramaphone Record = ಗಾನದೋಸೆ (ಪುಟ 162) Clergymen = ಪುರೋಹಿತರು (ಪುಟ. 184) Book ish Knowledge = ಪುಸ್ತಕೀಯ ಕಲ್ಪನೆ (ಪುಟ. 196) Full Moon = ತುಂಬುಪೆರೆ (ಪುಟ. 201) Good will ಸುನಾಮ (ಪುಟ. 202) dislike = ಒಗ್ಗದಿಕೆ (ಪುಟ. 207) Blind alley = ಕುರುಡುಗಲ್ಲಿ (ಪುಟ. 224) Brain wash = ಮಿದುಳಮೀಹ (ಪುಟ. 256) Poisonfcup = ವಿಷಚಷಕ (ಪುಟ. 243) Gas Chamber = ಅನಿಲಕೋಷ್ಠ (ಪುಟ. 281) Razor = ಬಾಳು (ಪುಟ. 380).

ಇವಿಷ್ಟೇ ಅಲ್ಲದೆ ಜಿ. ಟಿ. ನಾರಾಯಣರಾಯರ ಹಳಗನ್ನಡದ ಪ್ರೀತಿ ಮತ್ತು ಮತ್ತು ಸಂಸ್ಕೃತದ ಪ್ರೀತಿ ಓದುವುದಕ್ಕೆ ಅಡ್ಡಿಯನ್ನುಂಟುಮಾಡುತ್ತವೆ. (ಇದನ್ನು ಬರೆದಿರುವುದು 'ಸಾಮಾನ್ಯವಾಚಕನ ದೃಷ್ಟಿಯಿಂದ' ಎಂದು ಹೇಳಿರು ವುದನ್ನು ಜ್ಞಾಪಿಸಿಕೊಳ್ಳಬಹುದು) ಉದಾಹರಣೆಗೆ -ಈ ಪದಗಳನ್ನು ಮತ್ತು ಪದ ಬಂಧಗಳನ್ನು ಗಮನಿಸಿ : ಹೆಗ್ಗೆ (ಪು, xxxii) ಅಣುಗ (ಪುಟ. 2) ಪ್ರಚ್ಛನ್ನ (ಪುಟ. 7)

ಕೂರಸಿ (ಪುಟ 8) ಚಮೂದಳ (ಪುಟ 8) ತುಬ್ಬು (ಪುಟ 10) ತಸ್ಕರಶೋಧನೆ (ಪುಟ 11) ಮೂರಿ (ಪುಟ 23) ದೂಲ (ಪುಟ 38) ಕಳ (ಪುಟ 56) ಸಬಳ (ಪುಟ 69) ಕಡುಹಸುಗೆ (ಪುಟ 77) ಚಕ್ರವಾತ (ಪುಟ 93) ಭೂರಿಸಂತೆ (ಪುಟ 101) ಎರೆ (ಪುಟ 101) ಕಂಬಳ (ಪುಟ 111) ಕೂರುಹಲ್ಲೆ (ಪುಟ 121) ಕುಪ್ಪಿ (ಪುಟ 125) ಕರಿಕೂಟ (ಪುಟ 131) ಪರಿವ್ರಾಜಕ (ಪುಟ 155) ಮಹಾಗಾತ್ರದ ವಾತಾಯನಗಳು, ಕಿಟಕಿ ಗವಾಕ್ಷಗಳು (ಪುಟ 185) ಕ್ವಥನ (ಪುಟ 187) ಕೇವಲ ತೊಗಲನೋಟ (ಪುಟ 192) ಬಾಳು (ಪುಟ 229) ಕಡವೆ (ಪುಟ 253) ಕೊಡಿ (ಪುಟ 257) ಕೈತವಕೊಂಡೆಯ (ಪುಟ 272, 273, 275) ಚೂಷಿಸಲ್ಪಡದೆ (ಪುಟ 288, 292) ಅಳಕಗುಚ್ಛ (ಪುಟ 305) ಅರಿಲು (ಪುಟ 340) ಅಧ್ವರ ನಿರ್ವಹಣೆ (ಪುಟ 361) ಚತ್ತು (ಪುಟ 362) ಅವಸರ್ಪಿಣಿ (ಪುಟ 366) ಇತ್ಯಾದಿ.

ಜಿ. ಟಿ. ನಾರಾಯಣರಾಯರು ಐನ್‌ಸ್ಟೈನ್ ಜೀವನದ ಅನೇಕ ಘಟನೆಗಳನ್ನು, ಅವನ ಸಾಧನೆಗಳನ್ನು ಬಹಳ ಶ್ರಮದಿಂದ ರೂಪಿಸಿದ್ದಾರೆ. ಆದರೆ ಬರವಣಿಗೆಯನ್ನು ಆಕರ್ಷಕವಾಗಿ ಮಾಡಲು ಹೊರಟು ಅನೇಕ ಕವಿಗಳಿಂದ ಪದ್ಯಭಾಗಗಳನ್ನು ಆರಿಸಿಹಾಕಿರುವುದರಲ್ಲಿ, ಅನೇಕ ಕಡೆಗಳಲ್ಲಿ ಹೊಂದಾಣಿಕೆಯಿಲ್ಲದೆ, ಇದು ಅನೌಚಿತ್ಯವೆನಿಸುತ್ತದೆ. ಅದರಲ್ಲೂ, ಬಹುಶಃ ಜಿ. ಟಿ. ನಾರಾಯಣರಾಯರೇ ಮಾಡಿರುವಂತಹ ಪದ್ಯಾನುವಾದಗಳಂತೂ ಪದ್ಯಗಳನ್ನು ಹೇಗೆ ಬರೆಯಬಾರದು ಎನ್ನುವುದಕ್ಕೆ ಮಾದರಿಗಳಾಗಿವೆ, ಉದಾ :

ಸುದೀರ್ಘ ಕಾಲವಿದುಳಿದಿರಲಿಲ್ಲ —ಆದರೆ
ಬೊಬ್ಬೆಯನಿಡುತ್ತ ಬಂದನ್ ಸೈತಾನ್
'ಐನ್‌ಸ್ಟೈನ್ ಬರಲೆಂ' ದನ್, ಅಗೊ! ಪೂರ್ವ
ಸ್ಥಿತಿಯನ್ ಕ್ಷಣದೊಳ್ ತಂದೇ ಬಿಟ್ಟನ್! (ಪುಟ 177).

ಐನ್‌ಸ್ಟೈನರ -ಬಗ್ಗೆ ಅನೇಕ ವಿಷಯಗಳನ್ನು ತಿಳಿಸಿಕೊಡುವ ಈ ಉಪಯುಕ್ತವಾದ ಪುಸ್ತಕ ಮೇಲೆ ಹೇಳಿದಂತಹ ದೋಷಗಳಿಂದ ಮುಕ್ತವಾದರೆ, 'ಅಂತಾರಾಷ್ಟ್ರೀಯ', 'ಪುನಾರಚನಾ' ಇಂತಹ ಪ್ರಯೋಗಗಳನ್ನು ಸುಧಾರಿಸಿಕೊಂಡರೆ, ಮುಂದಿನ ಆವೃತ್ತಿಯಲ್ಲಿ ಸರ್ವಾದರಣೀಯವಾದ ಗ್ರಂಥವಾಗುತ್ತದೆ.

ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆಯಲ್ಲಿ 1980ರಲ್ಲಿ ಹತ್ತು ಪುಸ್ತಕಗಳು ಪ್ರಕಟವಾಗಿವೆ. ಇವೆಲ್ಲವೂ ಚಾರಿತ್ರಿಕ ದಾಖಲೆಗಳೆ. ಇವು ಎಷ್ಟರಮಟ್ಟಿಗೆ ನಮಗೆ ಆತ್ಮೀಯವಾಗುತ್ತವೆ. ಎಂದು ನೋಡುವುದೇ ಇಲ್ಲಿರುವ ಪ್ರಯತ್ನ. 'ಬಸರೀಗಿಡದ ವೀರಪ್ಪನವರು' ಎನ್ನುವುದನ್ನು ಶಾಂತರಸರು ಬರೆದಿದ್ದಾರೆ. ಕರ್ನಾಟಕ ಏಕೀಕರಣಕ್ಕೆ ಹಂಬಲಿಸಿ, ಅನೇಕ ರೀತಿಯಿಂದ ಅದಕ್ಕಾಗಿ ದುಡಿದ ಬಸರೀಗಿಡದ ವೀರಪ್ಪನವರು ಜೀವನವನ್ನು ಪ್ರಾರಂಭಿಸಿದ್ದು ಬಡತನದಲ್ಲಿ. ಆಮೇಲೆ ಹಮಾಲಿ

ಯಾಗಿ, ಕಿರಾಣಿ ವ್ಯಾಪಾರಿಯಾಗಿ, ಡ್ರೈವರ್ ಆಗಿ, ಬಸ್‌ಕಂಪೆನಿಯ ಮಾಲೀಕರಾಗಿ, ಬರಗಾಲದಲ್ಲಿ ಬಡವರಿಗೆ ಅನ್ನದಾತರಾಗಿ, ಕೃಷಿಯಲ್ಲಿ ಪ್ರಯೋಗಶೀಲರಾಗಿ, ಸಂಗೀತ ಗಾರರಿಗೆ ವಿದ್ಯಾರ್ಥಿಗಳಿಗೆ ಪೋಷಕರಾಗಿ, ಮಹಾದಾನಿಯಾಗಿ, ರಜಕಾರರ ವಿರುದ್ಧ ಹೋರಾಟಗಾರನಾಗಿ, ಮಹಾರಾಜತ್ವದ ವಿರೋಧಿಯಾಗಿ, ಹಡಗಿನ ಕಂಪೆನಿ ಯೊಂದನ್ನು ನಡೆಸಬೇಕೆಂದು ತಯಾರಿ ನಡೆಸಿದ್ದ ವೀರಪ್ಪನವರು ತಮ್ಮ ಹೋರಾಟದ ಮೂಲಕ ವಿಶಿಷ್ಟತೆಯನ್ನು ಗಳಿಸಿಕೊಂಡವರು. ಈ ಪುಣ್ಯಾತ್ಮನ ಆತ್ಮವಿಶ್ವಾಸ ಆತ್ಮ ಗೌರವ, ಮಾನವೀಯತೆಯನ್ನು ಅನೇಕ ನಿರ್ದಿಷ್ಟ ಸನ್ನಿವೇಶ ಮೂಲಕ ಚಿತ್ರಿಸುವ ಈ ಚಿಕ್ಕ ಪುಸ್ತಕದ ಶೈಲಿ, ಸರಳವಾದದ್ದು, ನೇರವಾದದ್ದು, ಅಂತಃಕರಣ ಪೂರ್ವಕವಾದದ್ದು. ಬಸರೀ ಗಿಡದ ವೀರಪ್ಪನವರ ವ್ಯಕ್ತಿಚಿತ್ರ ಅತ್ಮೀಯವಾಗು ವಂತೆ ಚಿತ್ರಿಸಿರುವುದರಲ್ಲಿ ಶಾಂತರವರು ಯಶಸ್ವಿಯಾಗಿದ್ದಾರೆ.'ಗುಬ್ಬಿತೋಟದಪ್ಪನವರು' ಎನ್ನುವ ಪುಸ್ತಕವನ್ನು ಆರ್. ರಾಜಪ್ಪನವರು ಬರೆದಿದ್ದಾರೆ. ತೋಟದಪ್ಪನವರನ್ನು ಮದುವೆಯಾಗಬೇಕಾದ ಹುಡುಗಿ 'ಮಾವಯ್ಯ ಒಡವೆಗಳಿಗಾಗಿ ಬಹಳ ಶ್ರಮ ಪಡುತ್ತಿರುವರಂತೆ. ನನಗಾಗಿ ಎರವಲು ನಗಗಳನ್ನು ತರುವುದು ಬೇಡ. ಮುಂದೆ ಅದೃಷ್ಟ ಕೂಡಿ ಬಂದಾಗ ಮಾಡಿಸಿಕೊಂಡರಾಯಿತು' ಎಂದು ಹೇಳಿದ್ದು ; ತೋಟದಪ್ಪ ನವರಿಂದ ಸರಕನ್ನು ಪಡೆದಿದ್ದ ವ್ಯಾಪಾರಿಗಳು ನಷ್ಟಕ್ಕೀಡಾಗಿದ್ದಾಗ ತೋಟದಪ್ಪ ನವರು ಅವರನ್ನೆಲ್ಲಾ ಕರೆಸಿ, ಸಾಲಕ್ಕೆ ಯೋಚಿಸಬೇಕಾಗಿಲ್ಲವೆಂದೂ, ಎಂದಿನಂತೆ ಮಾಲು ಕೊಂಡೊಯ್ಯುಬಹುದೆಂದೂ ಹೇಳಿದ್ದು ; ಅಂಗಡಿಯ ಬಿರಾಂ ಸಾಹೇಬರು ಮೂರು ಸಾವಿರ ಸಾಲ ಪಡೆಯದು ಅಕಾಲ ಮರಣಕ್ಕೆ ತುತ್ತಾದಾಗ ತೋಟದಪ್ಪ ನವರು ಅವರ ಮಕ್ಕಳನ್ನು ಕರೆಸಿ, 'ನನಗೆ ಸಾಹೇಬರ ಸಾಲ ವಾಪಸ್ ಬಂದಿದೆ' ಎಂದು ಶರಾ ಬರೆದು ತಮಗೆ ಬರೆದುಕೊಟ್ಟಿದ್ದ ಸಾಲ ಪತ್ರವನ್ನು ಹಿಂತಿರುಗಿಸಿದ್ದು, ಇಂತಹ ಘಟನೆಗಳ ಮೂಲಕ ತೋಟದಪ್ಪನವರ ಜೀವನವನ್ನು ಚಿತ್ರಿಸುವ ಈ ಪ್ರಯತ್ನ ಶ್ಲಾಘನೀಯವಾದದ್ದು. ಎನ್. ಆರ್. ಕರಿಬಸವ ಶಾಸ್ತ್ರಿಗಳು ಮಾಡಿದ ಪ್ರಶಂಸೆ, ಬೆಂಗಳೂರು ಪುರನಿವಾಸಿಗಳು ಅರ್ಪಿಸಿದ ಬಿನ್ನವತ್ತಳೆ ಮತ್ತು ತೋಟದಪ್ಪ ನವರ ವಿಲ್ ಶಾಸನಗಳನ್ನು ಅನುಬಂಧವಾಗಿ ಕೊಟ್ಟಿರುವುದು ಈ ಲೇಖಕರ ಪರಿಶ್ರಮ ಶೀಲತೆಯ ಗುರುತಾಗಿವೆ. 'ಸರದಾರ ವೀರನಗೌಡರು' ಎನ್ನುವ ಪುಸ್ತಕವನ್ನು ಶಾಂತಾದೇವಿ ಮಾಳವಾಡರು ಬರೆದಿದ್ದಾರೆ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡ ವೀರನಗೌಡರು ವಿದ್ಯಾಭ್ಯಾಸಕ್ಕಾಗಿ ಅಸುಂಡಿಯವರ ಮನೆಯಲ್ಲಿ ಬಟ್ಟೆ ಒಗೆಯುತ್ತ, ನೀರು ತರುತ್ತ, ಪೇಟೆಗೆ ಹೋಗಿ ಸಾಮಾನು ತರುತ್ತ, ಕೆರೆಗೆ ಹೋಗಿ ಎಮ್ಮೆಯ ಮೈಯನ್ನು ತೊಳೆಯುತ್ತ, ದಿವಾನರ ಮನೆಯ ಎದುರಿಗೆ ಎಮ್ಮೆ ಹೊಡೆದುಕೊಂಡು ಹೋಗುವುದಕ್ಕೆ ನಾಚಿ ಬೇರೆ ಮಾರ್ಗದಿಂದ ಎಮ್ಮೆ ಹೊಡೆದುಕೊಂಡು ಹೋಗುತ್ತಿದ್ದಂತ ಆತ್ಮೀಯ ವಿವರಗಳ ಮೂಲಕ, ವಿದ್ಯಾ ಭ್ಯಾಸದ ಕ್ಷೇತ್ರದಲ್ಲಿ ರಾಜಕೀಯದಲ್ಲಿ ಹಿರಿಯ ವ್ಯಕ್ತಿಯಾಗಿ ಬೆಳೆದ ವೀರನಗೌಡರ

ಚಿತ್ರ ಯಶಸ್ವಿಯಾಗಿ ಮೂಡಿಬಂದಿದೆ. 'ಸೊಲ್ಲಾಪುರದ ರುದ್ರಮ್ಮನವರು' ಎನ್ನುವ ಪುಸ್ತಕವನ್ನು ಸೊಲ್ಲಾಪುರದ ರವಿದೇವಿ ಮತ್ತು ಸುಗ್ಗಲಾದೇವಿಯವರು ಬರೆದಿದ್ದಾರೆ. ಶರಣೆಯರ ಎತ್ತರಕ್ಕೆ ಏರಿದ ರುದ್ರಮ್ಮನವರ ಜೀವನದ ಬಗ್ಗೆ ಮೇಲು ಮೇಲಿನ ವಿವರಗಳನ್ನುಳ್ಳ ಈ ಪುಸ್ತಕದ ಮುಖ್ಯ ಆಕರ್ಷಣೆಯೆಂದರೆ ಇದರಲ್ಲಿರುವ ಚಿತ್ರಗಳು ಮಾತ್ರ. 'ಹಳಕಟ್ಟಿ ಫಕೀರಪ್ಪನವರು' ಎನ್ನುವುದನ್ನು ಸಂಗಮನಾಥ ಹಂಡಿಯವರು ಬರೆದಿದ್ದಾರೆ. ಹಳಕಟ್ಟಿಯವರು ಕೇವಲ ವಿದ್ವಾಂಸರಾಗಿರಲಿಲ್ಲ. ವಚನಗಳನ್ನು ಸಂಗ್ರಹಿಸುವ ಮಹತ್ವವಾದ ಕಾರ್ಯವೊಂದೇ ಅವರ ಸಿದ್ಧಿಯಲ್ಲ. ಅವರು ಸಮಾಜದ ಬೆಳವಣಿಗೆಗೆ ಶ್ರಮಿಸಿದ ಶ್ರೇಷ್ಠ ವ್ಯಕ್ತಿಗಳೂ ಆಗಿದ್ದರೆನ್ನುವುದನ್ನು ಈ ಪುಸ್ತಕ ತಿಳಿಸುತ್ತದೆ. ಪತ್ರಿಕಾ ಪ್ರಕಟಣೆ, ಶಿಕ್ಷಣ ಸಂಸ್ಥೆ, ಬ್ಯಾಂಕುಗಳು ಸ್ಥಾಪನೆ, ಅನೇಕ ಸಂಸ್ಥೆಗಳ ಸದಸ್ಯತ್ವ, ಮೊದಲಾದ ಹಳಕಟ್ಟಿಯವರ ಅನೇಕ ರೀತಿಯ ದುಡಿಮೆಯನ್ನು ಲೇಖಕರು ಪಟ್ಟಿ ಮಾಡಿದ್ದಾರೆ. 'ಪಂಡಿತ ವೈ. ನಾಗೇಶ ಶಾಸ್ತ್ರಿಗಳು' ಎನ್ನುವ ಪುಸ್ತಕವನ್ನು ಜೋಳದ ರಾಶಿ ದೊಡ್ಡನಗೌಡರು ಬರೆದಿದ್ದಾರೆ. ಸಂಸ್ಕೃತ ಪಾಂಡಿತ್ಯಕ್ಕೆ ಪ್ರಸಿದ್ಧರಾದ ನಾಗೇಶ ಶಾಸ್ತ್ರಿಗಳು ಬಡತನದ ಇಕ್ಕಟ್ಟುಗಳನ್ನು ಮೀರಿ ದೊಡ್ಡ ವಿದ್ವಾಂಸರಾಗಿ ಬೆಳೆದವರು. ಬಾಲ್ಯದಲ್ಲಿ ಅವರು ಕಡಲೆಕಾಯಿ ಕದ್ದ ಪ್ರಸಂಗ, ಅವರ ಆತ್ಮಾಭಿಮಾನವನ್ನು ತೋರಿಸುವ ಪ್ರಸಂಗಗಳು, ಅವರ ವ್ಯಕ್ತಿ ಚಿತ್ರಕ್ಕೆ ಮೆರುಗನ್ನು ತಂದಿವೆ. ಈ ಎರಡು ಮೂರು ಸನ್ನಿವೇಶಗಳನ್ನು ಬಿಟ್ಟರೆ ಮಿಕ್ಕವೆಲ್ಲಾ ಒಣವಿವರಗಳು. ನಾಗೇಶ ಶಾಸ್ತ್ರಿಗಳು ಕರ್ನಾಟಕ ಬಂಧು ಪತ್ರಿಕೆಯ ಸಂಪಾದಕರಾಗಿ ಆಸ್ಥಾನ ವಿದ್ವಾಂಸರಾಗಿ, ಸಂಸ್ಕೃತ ಗ್ರಂಥಗಳ ಅನುವಾದಕರಾಗಿ, ಸ್ವತಂತ್ರ ನಾಟಕಗಳನ್ನು ರಚಿಸಿದವರಾಗಿ ಜನಪ್ರಿಯರಾಗಿದ್ದರು ಎನ್ನುವಂತಹ ವಿವರಗಳು ನಮ್ಮ ಜ್ಞಾನವನ್ನು ಹೆಚ್ಚಿಸುತ್ತವೆಯೇ ಹೊರತು, ವ್ಯಕ್ತಿಚಿತ್ರಗಳು ಮೂಡಿಸಬಹುದಾದ ಆತ್ಮೀಯತೆಯನ್ನು ಹುಟ್ಟಿಸುವುದಿಲ್ಲ. 'ಚಿಕ್ಕೋಡಿ ಪಂಡಿತಪ್ಪನವರು' ಎನ್ನುವ ಪುಸ್ತಕವನ್ನು ದು. ನಿಂ. ಬೆಳಗಲಿಯವರು ಬರೆದಿದ್ದಾರೆ. ಈ ಪುಸ್ತಕದಲ್ಲಿ ಲೇಖಕರೇ ಹೇಳುವಂತೆ 'ಮೂಗಿಗಿಂತ ಮೂಗುತಿ ಭಾರವಾದಂತೆ' ದಾಖಲೆಗಳು ಹೆಚ್ಚಾಗಿವೆ ; ವ್ಯಕ್ತಿಚಿತ್ರಕ್ಕೆ ದಾಖಲೆಗಳು ಪ್ರಮಾಣವನ್ನು ಒದಗಿಸುತ್ತವೆಯೇ ಹೊರತು ಅವೇ ವ್ಯಕ್ತಿಚಿತ್ರವಾಗುವುದಿಲ್ಲ. ದಾಖಲೆಗಳನ್ನು ಪಡೆಯುವುದರಲ್ಲಿ ಬೆಳಗಲಿಯವರು ತೋರಿಸಿರುವ ಆಸ್ಥೆ ಪ್ರಶಂಸಾರ್ಹವಾಗಿದೆ. 'ದೊಡ್ಡಮೇಟಿ ಅಂದಾನಪ್ಪನವರು' ಎನ್ನುವ ಪುಸ್ತಕವನ್ನು ಜ್ಞಾನದೇವ ದೊಡ್ಡಮೇಟಿ ಬರೆದಿದ್ದಾರೆ. ಮಗನೇ ತಂದೆಯ ಬಗ್ಗೆ ಬರೆದಿರುವುದರಿಂದ ಓದುಗರು ಇಲ್ಲಿ ನಿರೀಕ್ಷಿಸುವುದು ಹೆಚ್ಚು. ತಂದೆಯವರ ಮಾತುಗಳನ್ನಷ್ಟೇ ಕೊಟ್ಟು 'ಇದರಲ್ಲಿ ನನ್ನದು ಏನೂ ಇಲ್ಲ' ಎಂದು ಹೇಳಿದ್ದಾರೆ. ತಾವು ತಂದೆಯನ್ನು ಕಂಡ ರೀತಿಗೆ ಪ್ರಾಶಸ್ತ್ಯ ಕೊಟ್ಟಿದ್ದರೆ, ಈ ಪುಸ್ತಕಕ್ಕೆ ಇನ್ನಷ್ಟು ಮೆರುಗು ಬರುತ್ತಿತ್ತು. ಈಗಿರುವ ಹಾಗೆ ಇದು ದೊಡ್ಡಮೇಟಿ ಅಂದಾನಪ್ಪನವರು ತಮ್ಮನ್ನು ತಾವೇ ಕಂಡ ರೀತಿಗೆ ದಾಖಲೆಯಾಗಿದೆ. ಅಂದಾನಪ್ಪನವರು ಮುದುಕಿಯೊಬ್ಬಳ ಸಾಲವನ್ನು ಬಿಟ್ಟುಕೊಟ್ಟದ್ದು, ಮುಂಬೈ ಗವರ್ನರರನ್ನು ಭೇಟಿಯಾಗಲಿಕ್ಕೆ ಭಾರೀ ಸಡಗರದಿಂದ

ಹೋದದ್ದು, ನಟಿಯೊಬ್ಬಳು ಕಿತ್ತೂರರಾಣಿಯ ಪಾತ್ರವಹಿಸಿದ್ದನ್ನು ನೋಡಿ, ದೇಶಾಭಿಮಾನ, ಬ್ರಿಟಿಷ್ ದ್ವೇಷಗಳು ಕೆರಳಿ ನಿಂತದ್ದೇ ಅಲ್ಲದೆ, ನಟಿಯ ಬಗ್ಗೆ ಪ್ರೀತಿಯೂ ಮೂಡಿ, ಅವಳನ್ನು ಮೂರನೆಯ ಪತ್ನಿಯಾಗಿ ಸ್ವೀಕರಿಸಿದ್ದು, ಪೋಲೀಸರಿಗೆ ಬೆದರದ ಸತ್ಯಾಗ್ರಹಿಯಾಗಿದ್ದು, ಜೈಲು ಶಿಕ್ಷೆಯನ್ನು ಅನುಭವಿಸ ಲಾರದೆ ಕ್ಷಮಾಪಣೆ ಕೇಳಿ ಮನೆಗೆ ಬಂದವರ ಮೇಲೆ ಸಿಟ್ಟಾದದ್ದು, ಕುದುರೆ ಜೂಜಿಗೆ ಬಂದ ಕಾಂಪ್ಲಿಮೆಂಟರಿ ಪಾಸುಗಳನ್ನು ಹರಿಸಿ ಹಾಕಿದ್ದು, ಇಂತಹ ಘಟನೆಗಳ ಮೂಲಕ ದೊಡ್ಡಮೇಟಿ ಅಂದಾನಪ್ಪನವರ ಚಿತ್ರ ಸ್ಫುಟವಾಗಿ ಮೂಡಿಬರುತ್ತದೆ. ಮೊದಲ ಅರ್ಧದಲ್ಲಿ ಕಾಣಿಸುವ ಜೀವನ ಕಥೆಯ ಸ್ವಾರಸ್ಯ ಉತ್ತರಾರ್ಧದಲ್ಲಿ ಅಷ್ಟಾಗಿ ಇಲ್ಲ ವಾದರೂ, ಈ ಮಾಲೆಯಲ್ಲಿನ ಉತ್ತಮ ಪುಸ್ತಕಗಳಲ್ಲಿ ಇದೂ ಒಂದು ಎನ್ನುವುದನ್ನು ಹೇಳಲೇಬೇಕು. 'ರಾಜಾ ಲಖಮನ ಗೌಡರು' ಎನ್ನುವ ಪುಸ್ತಕವನ್ನು ಎಸ್. ಜಿ. ಘಿವಾರಿ ಬರೆದಿದ್ದಾರೆ. ರಾಜಾ ಲಖಮಗೌಡರು ಹುಟ್ಟಿದ ವಂಟಮೂರಿ ಘಟಪ್ರಭಾ ಅಣೆಕಟ್ಟಿನ ನೀರಿನಲ್ಲಿ ಮುಳುಗಿ ಹೋಗುತ್ತದೆ ಎಂದು ಕೇಳಿ, ಅದೇ ಊರಿನಲ್ಲಿ ಹುಟ್ಟಿದ ಘಿವಾರಿಯವರು ವಂಟಮೂರಿಯನ್ನು ಕೊನೆಯ ಬಾರಿ ನೋಡಿ ಬರುವು ದಕ್ಕೆ ಹೋದಲ್ಲಿಂದ ಈ ವ್ಯಕ್ತಿಚಿತ್ರ ಪ್ರಾರಂಭವಾಗಿದೆ. ಈ ವೈಯಕ್ತಿಕ ನಂಟಿನಿಂದ, ತನ್ನ ಊರು ಕಣ್ಮರೆಯಾಗುತ್ತದೆ ಎನ್ನುವ ನೋವಿನಿಂದ ಪ್ರಾರಂಭದ ಅಧ್ಯಾಯ ಸೊಗಸಾಗಿದೆ. ಅಲ್ಲಿಂದ ಮುಂದಿನ ವಿವರಗಳೆಲ್ಲ ನೀರಸ ಚರಿತ್ರೆಯನ್ನು ಓದಿದ ಹಾಗಾ ಗುತ್ತದೆ. ಆದರೂ ಇಲ್ಲಿರುವ ಅನೇಕ ಛಾಯಾಚಿತ್ರಗಳಿಂದ ಈ ಪುಸ್ತಕದ ಸ್ವಾರಸ್ಯ ಹೆಚ್ಚಾಗಿದೆ. 'ಎಂ. ಬಸವಯ್ಯನವರು' ಎನ್ನುವ ಪುಸ್ತಕವನ್ನು ಎಚ್. ದೇವೀರಪ್ಪ ನವರು ಬರೆದಿದ್ದಾರೆ. ಮೈಸೂರು ದೊರೆಗಳ ಆಸ್ಥಾನದಲ್ಲಿದ್ದ ತಂದೆಯ ಪ್ರಭಾವ ವಾಗಲಿ ಮಹಾರಾಜರ ಆಶ್ರಯವಾಗಲಿ ತನಗೆ ಬೇಡವೆಂದು ಬಳ್ಳಾರಿಗೆ ಹೋಗಿ ನ್ಯಾಯವಾದಿಯಾಗಿ ಕೆಲಸ ಮಾಡಿದ ಬಸವಯ್ಯನವರು ಅನೇಕ ವಿದ್ಯಾರ್ಥಿನಿಲಯಗಳ ಸ್ಥಾಪನೆಗೆ ಕಾರಣರಾದವರು, ಬ್ರಾಹ್ಮಣೇತರರನ್ನು ಒಟ್ಟುಗೂಡಿಸಲಿಕ್ಕೆ, ಅವರಲ್ಲಿ ಸ್ವಾಭಿಮಾನವನ್ನು ಮೂಡಿಸುವುದಕ್ಕೆ ಹೊಡೆದಾಡಿದವರು, ಶಿಕ್ಷಣದಲ್ಲಿ ತೀವ್ರವಾದ ಆಸಕ್ತಿಯಿದ್ದವರು. ಅವರ ಜೀವನದ ಬಾಹ್ಯ ವಿವರಗಳಲ್ಲೇ ಈ ಪುಸ್ತಕ ಮುಗಿದು ಹೋಗುತ್ತದೆ. ಮಾಹಿತಿಗಳೇನೋ ಸಾಕಷ್ಟಿವೆ, ಆದರೆ ವ್ಯಕ್ತಿಚಿತ್ರ ಮೂಡಿ ಬರುವು ದಿಲ್ಲ.

'ಶರಣರ ಜೀವನ ದರ್ಶನ' ಎನ್ನುವ ಪುಸ್ತಕವನ್ನು ಮಲ್ಲಿಕಾರ್ಜುನ ಲಠ್ಠೆಯವರು ಬರೆದಿದ್ದಾರೆ. ಇದರಲ್ಲಿ 'ಬಸವಣ್ಣನವರು', 'ಮಹಾದೇವಿಯಕ್ಕ', 'ಅಕ್ಕ ಕಂಡ ಅಣ್ಣ' 'ಅನುಭವ ಮಂಟಪ', 'ಪ್ರಭುದೇವರ', ಶೂನ್ಯ ಸಂಪಾದನೆ,' 'ಅಂಬಿಗರ ಚವುಡಯ್ಯನ ಕಾಯಕ ವಿಚಾರಗಳು', 'ಶ್ರೀ ಶರಣಬಸವೇಶ್ವರ' ಮತ್ತು 'ಮನುಷ್ಯಧರ್ಮ' ಎನ್ನುವ ಲೇಖನಗಳಿವೆ. ರೂಢಿಗತವಾಗಿ ಬಂದ ಶರಣರ ಕತೆಗಳು, ಮಧ್ಯದಲ್ಲಿ ಕೆಲವು ವಚನಗಳ ಉದಾಹರಣೆಗಳು ಇಲ್ಲಿವೆ. ಲೇಖಕರಿಗೇ ವಿಶಿಷ್ಟವಾದದ್ದೆಂದರೆ ಈ ರೀತಿಯ ಮಾತುಗಳು : (1) 'ಅನು' ಎಂದರೆ 'ಲಿಂಗ', 'ಭವ' ಎಂದರೆ 'ಹುಟ್ಟು'

'ಆಗು' ಎಂದಿರುವುದರಿಂದ ಅನುಭಾವವೆಂದರೆ ಲಿಂಗವಾಗುವುದು ಎಂಬರ್ಥವನ್ನರಿತು ಕೊಳ್ಳಬೇಕು." (2) ಧರ್ಮಕ್ಕೆ ಇಂಗ್ಲೀಷ್ ಭಾಷೆಯಲ್ಲಿ 'ರಿಲಿಜನ್' (Religion) ಎಂದು ಹೆಸರಿದೆ. ಭೂಸನೂರಮಠರ ಶೂನ್ಯಸಂಪಾದನೆಯನ್ನು ಕುರಿತು, ಎಂ. ಆರ್. ಶ್ರೀಯವರು ಮತ್ತು ಚಿದಾನಂದ ಮೂರ್ತಿಯವರು ಬಸವಣ್ಣನವರನ್ನು ಕುರಿತು ಬರೆದ ಪುಸ್ತಕಗಳು ಇಂತಹ ಪುಸ್ತಕಗಳನ್ನು ಓದಿದವರಿಗೆ ಈ ಪುಸ್ತಕ ತುಂಬ ನೀರಸವಾಗಿ ಕಾಣಿಸುತ್ತದೆ. 'ದಾಸೋಹ ಮೂರ್ತಿಗಳು' ಎನ್ನುವ ಪುಸ್ತಕವನ್ನು ಎಂ. ಆರ್. ಕಂಬಿಯವರು ಬರೆದಿದ್ದಾರೆ. ಇದರಲ್ಲಿ 'ನಾಗನೂರು ಶಿವಬಸವ ಸ್ವಾಮಿಗಳು', 'ವಿಜಯಮಹಾಂತ ಸ್ವಾಮಿಗಳು', 'ನಾಲತವಾಡ ಶರಣರು ಮತ್ತು 'ಜ್ಞಾನದೇವರು' ಎನ್ನುವ ನಾಲ್ಕು ಲೇಖನಗಳಿವೆ. ಲೇಖಕರ ಉದ್ದೇಶ "ಸಾಧು ಸತ್ಪುರುಷರ ಜೀವನದ ಅಧ್ಯಯನದ ಪ್ರಭಾವವು ಮಕ್ಕಳಮೇಲೆ ಬಿಂಬಿಸುವಂಥ ಯೋಜನೆಯನ್ನು ಹಮ್ಮಿಕೊಳ್ಳಬೇಕಾಗಿದೆ." ಈ ಪುಸ್ತಕ ಮಕ್ಕಳಿಗೆ ಬರೆಯಬೇಕಾದ ಶೈಲಿಯಲ್ಲಿ ಇಲ್ಲ. ಇದು ದೊಡ್ಡವರು ಓದುವ ಪುಸ್ತಕವೆನ್ನುವುದಾದರೆ, ದೊಡ್ಡವರಿಗೆ ಬೇಕಾದ ವಿಚಾರಗಳಾಗಲೀ, ಆಕರ್ಷಕ ಶೈಲಿಯಾಗಲೀ ಇದರಲ್ಲಿಲ್ಲ. ಲೇಖಕರೇನೋ "ಪ್ರಾಥಮಿಕ, ಮಾಧ್ಯಮಿಕ ಹಾಗೂ ಉಚ್ಚ ಶಿಕ್ಷಣ ಮಾಧ್ಯಮಗಳ ಮೂಲಕ ಸತ್ಪುರುಷರ ಜೀವನ ಚರಿತ್ರೆಗಳ ಅಧ್ಯಯನವನ್ನು ಕಡ್ಡಾಯಗೊಳಿಸುವುದಾಗಬೇಕು" ಎಂದು ಹೇಳುತ್ತಾರೆ. ಒಂದು ವೇಳೆ ಇಂತಹ ನೀರಸ ಜೀವನ ಚರಿತ್ರೆಗಳನ್ನು ಕಡ್ಡಾಯಗೊಳಿಸುವುದೇ ಆದರೆ ವಿದ್ಯಾರ್ಥಿಗಳ ಮತ್ತು ಉಪಾಧ್ಯಾಯರ ಗತಿ ಏನು? ಇದೇ ಲೇಖಕರು 'ಮಧುರಾಭಕ್ತಿಯ ಮೀರಾಬಾಯಿ' ಎನ್ನುವ ಪುಸ್ತಕದ ರಕ್ಷಾಪುಟಗಳ ಮೇಲೆ ಡಾ. ವಿ. ಎಸ್. ಕಂಬಿಯವರ ಹೆಸರು ಮಾತ್ರ ಕಾಣಿಸುತ್ತದೆ. ಆದರೆ ಶೀರ್ಷಿಕೆ ಪುಟದಲ್ಲಿ ಶ್ರೀಮತಿ ಮೀರಾಬಾಯಿ ಹಿರೇಮಠರ ಹೆಸರೂ ಇದೆ, ಮತ್ತು ಲೇಖಕರ ಮಾತಿನಲ್ಲಿ ಮೀರಾಬಾಯಿಯವರೂ ಈ ಪುಸ್ತಕವನ್ನು ಬರೆಯುವುದರಲ್ಲಿ ಪಾಲುದಾರರಾಗಿದ್ದಾರೆ ಎಂದಿದೆ. ಇದಕ್ಕೆ ಮುನ್ನುಡಿ ಬರೆದಿರುವ ಹಂಪನಾ ಅವರು ವಿ. ಎಸ್. ಕಂಬಿಯವರನ್ನು ಮಾತ್ರ ಲೇಖಕರೆಂದು ಗಣಿಸಿದ್ದಾರೆ. ಈ ಎಲ್ಲ ಅಂಶ ಗಳನ್ನೂ ಗಮನದಲ್ಲಿಟ್ಟುಕೊಂಡು ಈ ಪುಸ್ತಕವನ್ನು ಪರಿಚಯಮಾಡಿಕೊಳ್ಳಬಹುದು. ಬಾಲ್ಯದಿಂದಲೇ ಮೀರಾಬಾಯಿಗೆ ಕೃಷ್ಣಭಕ್ತಿ ಹೇಗೆ ಹುಟ್ಟಿತೆನ್ನುವುದರಿಂದ ಪ್ರಾರಂಭಿಸಿ ಅನೇಕ ಅಡ್ಡಿ ಆತಂಕಗಳನ್ನು ಮೀರಿ ಆಕೆಯ ಭಕ್ತಿ ಹೇಗೆ ದೃಢವಾಯಿತೆನ್ನುವುದನ್ನು ಈ ಪುಸ್ತಕ ಆಕರ್ಷಕವಾಗಿ ಚಿತ್ರಿಸುತ್ತದೆ. ಮೀರಾಬಾಯಿಯ ಅರವತ್ತೆರಡು ಹಾಡು ಗಳನ್ನು ಕನ್ನಡ ಅಕ್ಷರಗಳಲ್ಲಿ ಅನುಬಂಧವಾಗಿ ಕೊಟ್ಟಿರುವುದು ಈ ಪುಸ್ತಕದ ಉಪಯೋಗವನ್ನು ಹೆಚ್ಚಿಸಿದೆ.

ದಿವಂಗತ ಜಿ. ಪಿ. ರಾಜರತ್ನಂ ಅವರನ್ನು ಕುರಿತಂತೆ ಎರಡು ಪುಸ್ತಕಗಳು ಬಂದಿವೆ. 'ಜಿ. ಪಿ. ರಾಜರತ್ನಂ' ಎನ್ನುವ ಪುಟ್ಟಪುಸ್ತಕವನ್ನು ರಾ.ಶಿ.ಯುವರು ಬರೆದಿದ್ದಾರೆ. ಬಹಳ ವರ್ಷಗಳಿಂದ ನೆರೆಹೊರೆಯವರಾಗಿದ್ದ, ಆತ್ಮೀಯರಾಗಿದ್ದ ರಾಜ

ರತ್ನಂ ಬಗ್ಗೆ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲದೆ ತಮ್ಮ ನೆನಪುಗಳನ್ನು ಬಿಚ್ಚಿಡುವ ರಾ.ಶಿ. ಯವರ ಪುಸ್ತಕದಲ್ಲಿ 'ನೆನಪಿನಲ್ಲಿ ಹಸಿರಾಗಿ ಉಳಿದಿರುವುದನ್ನೇ ಬರವಣಿಗೆಗೆ ಇಳಿಸಿ' ದ್ದಾರೆ. ಇಲ್ಲಿ ಮೂಡುವ ರಾಜರತ್ನಂ ಅವರ ಚಿತ್ರ ಇದು "ರಾಜರತ್ನಂ ಕಟ್ಟುನಿಟ್ಟು ಸಂಪ್ರದಾಯಸ್ಥರು...ಆದರೆ ವಿಶಾಲ ಹೃದಯಿಗಳು." "ಈತನದು ಮಗು ಸ್ವಭಾವ. ಅತ್ತೂ ಕರೆದು ಸುಸ್ತಾಗಿ ಬಿದ್ದುಕೊಳ್ಳಬೇಕು." "ವ್ಯಾವಹಾರಿಕವಾಗಿ ಯಾರ ಋಣ ವನ್ನೂ ಉಳಿಸಿಕೊಳ್ಳಲು ಸಿದ್ಧರಿರಲಿಲ್ಲ. ಅಷ್ಟು ಆತ್ಮಾಭಿಮಾನ. ಹಣ ಕೂಡಿಟ್ಟು ಶ್ರೀಮಂತನಾಗಬೇಕು ಅನ್ನುವ ಹಂಬಲವೇ ಇರಲಿಲ್ಲ." "ಯಾರಾದರೂ ನಿಂದಿಸಿದರೆ ಕೆರಳುತ್ತಿದ್ದ. ದಿಟ. ಬರವಣಿಗೆಯ ಮೂಲಕ ತನ್ನ ರೇಗನ್ನ ಸ್ವಾಂತನಗೊಳಿಸುತ್ತಿದ್ದ. ಯಾರಾದರೂ ಹೊಗಳಿದರೆ ಸಂತಸಪಡುತ್ತಿದ್ದ. ಬಹಿರಂಗವಾಗಿ ಪ್ರದರ್ಶಿಸದೇ ಇದ್ದ ರೂನೂ ಅಲ್ಲಿಗೆ ಮುಗಿಯಿತು. ತಾನು ಶ್ರದ್ಧೆಯಿಂದ ಮಾಡುತ್ತಿದ್ದ ಕಾರ್ಯಕ್ಕೆ ಹೊಗಳಿಕೆಯಾಗಲೀ ತೆಗಳಿಕೆಯಾಗಲೀ, ಯಾವ ಪ್ರಭಾವವನ್ನೂ ಬೀರುತ್ತಿರಲಿಲ್ಲ.' 'ರಾಜರತ್ನಂ ಇವನದು ಮುಗ್ಧ ಮಗುವಿನ ಮನಸ್ಸು. ಕೆರಳುತ್ತಿದ್ದುದು ಸತ್ಯ. ಆದರೆ ಬಲುಬೇಗ ಶಾಂತನಾಗುತ್ತಿದ್ದ.' ಇಂತಹ ಮಾತುಗಳಷ್ಟೇ ಅಲ್ಲ, ರಾಜರತ್ನಂ ಅನೇಕ ಸನ್ನಿವೇಶಗಳಲ್ಲಿ ಆಡಿದ ಮಾತುಗಳನ್ನು ನೆನಪಿನಲ್ಲಿ ಹಸಿರಾಗಿಟ್ಟುಕೊಂಡು ರಾ.ಶಿ. ಯವರು ಅವುಗಳನ್ನು ಹಸಿರಾಗಿರುವ ಹಾಗೆಯೇ ನಮ್ಮ ಮುಂದಿಟ್ಟಿದ್ದಾರೆ. ವ್ಯಕ್ತಿ-ಚಿತ್ರಗಳ ಪ್ರಕಾರದಲ್ಲಿ ರಾ.ಶಿ.ಯವರ ಈ ಲೇಖನ ಚಿರಸ್ಮರಣೀಯವಾಗಿರುತ್ತದೆ. 'ಆರದ ಬೆಳಕು' ಎನ್ನುವ ರಾಜರತ್ನಂ ಕುರಿತ ಇನ್ನೊಂದು ಪುಸ್ತಕವನ್ನು ನೀಲತ್ತಹಳ್ಳಿ ಕಸ್ತೂರಿಯವರು ಬರೆದಿದ್ದಾರೆ. ರಾಜರತ್ನಂ ಮರಣದಿಂದ ಆರಂಭವಾದ ಈ ಪುಸ್ತಕ ರಾಜರತ್ನಂರವರ ಮನೆತನದ ಹಿನ್ನಲೆ. ಅವರ ವಿದ್ಯಾಭ್ಯಾಸದ ಹಿನ್ನೆಲೆ ಅವರ ನಾಟಕದ ಖಯಾಲಿ. ಊರೂರು ಅಲೆದಾಟ. ಕನ್ನಡದ ಅಭ್ಯಾಸ. ಬರವಣಿಗೆಯ ಪ್ರಾರಂಭ ಮತ್ತು ಬೆಳವಣಿಗೆ. ಅವರ ಮದುವೆ, ಸಂಸಾರ ತಾಪತ್ರಯ. ಧಾರ್ಮಿಕ ಗ್ರಂಥಗಳ ರಚನೆ, ಸಾಹಿತ್ಯಕ್ಕಾಗಿ ಅವರ ದುಡಿತ, ಅವರು ಪಾಠ ಹೇಳುವ ಕ್ರಮ. ಅವರ ವ್ಯಕ್ತಿತ್ವದ ಪ್ರಭಾವ. ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘವನ್ನು ಬೆಳೆಸಿದ ರೀತಿ. ಪುಸ್ತಕಗಳ ಪ್ರಕಟಣೆ ಮತ್ತು ಮಾರಾಟಕ್ಕಾಗಿ ಅವರು ವಹಿಸಿದ ಆಸ್ಥೆ. ಪಟ್ಟಶ್ರಮ. ಹೀಗೆ ನಾನಾ ವಿಷಯಗಳ ಮೂಲಕ ರಾಜರತ್ನಂ ಅವರ ಬದುಕನ್ನು ಚಿತ್ರಿಸುವ ಈ ಜೀವನ ಚರಿತ್ರೆ ಅನೇಕ ಖಚಿತ ವಿವರಗಳೊಂದಿಗೆ, ರಾಜರತ್ನಂ ಅವರ ಬದುಕಿನ ಕಾಲಾನುಕ್ರಮಣಿಕೆ ಮತ್ತು ಪ್ರಕಟಣೆಗಳ ವಿವರಗಳೊಂದಿಗೆ ಪ್ರಕಟವಾಗಿರುವುದರಿಂದ ಇದೊಂದು ಅಧಿ ಕೃತ ದಾಖಲೆಯಾಗಿದೆ. ಪ್ರಕಟಿತ ಗ್ರಂಥಗಳ ಪ್ರಕಾಶಕರು ಮತ್ತು ಪ್ರಕಟವಾದ ವಾದ ವರ್ಷಗಳ ಬಗ್ಗೆ ಮಾಹಿತಿಯೂ ಸೇರಿದ್ದರೆ ಈ ಪುಸ್ತಕ ಇನ್ನೂ ಉಪಯುಕ್ತ ವಾಗುತ್ತಿತ್ತು. ನೀ. ಕಸ್ತೂರಿಯವರ ಈ ಪುಸ್ತಕಕ್ಕೆ ನಾ. ಕಸ್ತೂರಿಯವರ ಮುನ್ನುಡಿ ಯಿದೆ. ನಾ. ಕಸ್ತೂರಿಯವರು ಹೇಳುವ ಹಾಗೆ ಇಲ್ಲಿಯದು 'ಆಕರ್ಷಕವಾದ ಆದರಣೀಯ ಅನಾಡಂಬರ ಶೈಲಿ'.

ರಂಗ ಕಲಾವಿದರ ಬಗ್ಗೆ ಬಂದಿರುವ ಪುಸ್ತಕಗಳಲ್ಲಿ 'ರಂಗಕಲಾವಿದೆ ಸೋನು ಬಾಯಿ ದೊಡ್ಡಮನಿ' ಎನ್ನುವ ಎಸ್. ಎಸ್. ಕೋತಿನ ಬರೆದ ಪುಸ್ತಕ ಮಹತ್ವ ದ್ದಾಗಿದೆ. 'ಬಾಲನಟಿ' ಎನ್ನುವ ಅಧ್ಯಾಯದಲ್ಲಿ ಸೋನುಬಾಯಿಯವರ ಕೌಟುಂಬಿಕ ಹಿನ್ನೆಲೆ ಮತ್ತು ಅವರ ಪ್ರಥಮ ರಂಗಪ್ರವೇಶದ ವಿವರಗಳಿವೆ. 'ನಾಟಕ ಮಂಡಳಿಯ ಒಡತಿ' ಎನ್ನುವ ಎರಡನೆ ಅಧ್ಯಾಯದಲ್ಲಿ ರಂಗನಟಿಯಾಗಿ ಸೋನು ಬಾಯಿಯವರು ಪ್ರಸಿದ್ಧಿಗೆ ಬಂದ ವಿವರಗಳಿವೆ. ನಾಟಕ ಕಂಪೆನಿಗಳು ಪ್ರಾರಂಭ ವಾಗುವಾಗ ಏನೇನು ಪ್ರೇರಣೆಗಳಿದ್ದವು, ಈ ಕಂಪೆನಿಗಳಿಗೆ ಎಂಥ ಕಷ್ಟದ ದಿನಗಳು ಬರುತ್ತಿದ್ದವೆನ್ನುವುದನ್ನು ಕೋತಿನ ಅವರು ಮನದಟ್ಟುಮಾಡಿಸುತ್ತಾರೆ : 'ಒಂದೊಂದು ಸಲ ಬಟ್ಟೆಯನ್ನು ಒಗೆಯಬೇಕೆಂದರೆ ಒಂದು ಗೀರು ಸೋಪಿಗೂ ಕೊರತೆ ! ಸೇದ ಬೇಕೆಂದರೆ ನಟರಿಗೆ ಒಂದು ಬೀಡಿಗೂ ಗತಿಯಿರಲಿಲ್ಲ. ಅದಿರಲಿ ದಾಡಿಕೊಳ್ಳದಿರಲು ಆಗದೆ ಹಳೆಯಬ್ಲೇಡುಗಳನ್ನೇ ಉಪಯೋಗಿಸಿ ಚುರುಗುಡುವ ಗಲ್ಲಕ್ಕೆ ತಂಪಾದ ಬಣ್ಣ ಬಡೆದುಕೊಳ್ಳಬೇಕಾಗುತ್ತಿತ್ತು' ಎಂದು ಈ ಲೇಖಕರು ಕಷ್ಟದ ದಿನಗಳನ್ನು ವರ್ಣಿಸು ತ್ತಾರೆ. ರಂಗಭೂಮಿಯ ಬೆಳಕಿನ ವ್ಯವಸ್ಥೆಯ ಈ ಚಿತ್ರವನ್ನು ನೋಡಿ,: "ರಂಗಭೂಮಿ ಯಲ್ಲಿ ಪೆಟ್ರೊಮ್ಯಾಕ್ಸ್ ಉಪಯೋಗಿಸುತ್ತಿದ್ದರು. ರಂಗಭೂಮಿಯ ಮುಂಗಡೆ ಯಲ್ಲಿ ಒಂದು ಬಿದಿರಿನ ಕೋಲಿಗೆ ಅವುಗಳನ್ನು ತೂಗು ಹಾಕುತ್ತಿದ್ದರು. ಕೇವಲ ರಂಗಭೂಮಿಗೆ ಮಾತ್ರ ಹೆಚ್ಚಿನ ಬೆಳಕು ಬರಲು ಅವುಗಳಿಗೆ ತಗಡಿನ ಪ್ಲೇಟುಗಳ ಪರದೆಯನ್ನು ಬಳಸಲಾಗುತ್ತಿತ್ತು. ಸ್ಟೇಜಿನಲ್ಲಿ ಕತ್ತಲೆಯನ್ನು ತೋರಿಸ ಬೇಕಾದಾಗ ಅವುಗಳನ್ನೇ ದಾರದಿಂದ ಎಳೆದು ಕವರನ್ನಾಗಿ ಹೊಂದಿಸುವ ವ್ಯವಸ್ಥೆ ಇತ್ತು. ದೃಶ್ಯಗಳಿಗೆ ತಕ್ಕಂತೆ ರಂಗಭೂಮಿಯ ಬಣ್ಣ ಬದಲಿಸಲು ಕೆಲವು ಪ್ಲೇಟುಗಳ ಒಳಗೇ ಬಣ್ಣದ ಹಾಳೆಗಳನ್ನು ಉಪಯೋಗಿಸಿ ಬಳಸುತ್ತಿದ್ದರು. ಅಂಥ ಪ್ಲೇಟುಗಳನ್ನು ಕೂಡಲೇ ಬದಲಾಯಿಸುವ ವ್ಯವಸ್ಥೆಯೂ ಇರುತ್ತಿತ್ತು. ಅದೂ ಅಲ್ಲದೆ, ವಿಂಗ್ಸಗಳಲ್ಲಿ ಹಾಗೂ ಸ್ಟೇಜಿನ ಮುಂದಿರುವ ಗ್ರೌಂಡ್ ಕರ್ಟನ್‌ದ ಹತ್ತಿರ ಕೈಗ್ಯಾಸುಗಳನ್ನು ಇಡುತ್ತಿದ್ದರು." ಹೀಗೆ ಕೋತಿನ ಅವರು ವಿವರಗಳಿಗೆ ಗಮನ ಕೊಡುವುದರಿಂದ ಬರವಣಿಗೆ ಕಳೆಗಟ್ಟಿರುವುದಲ್ಲದೆ, ಗತಕಾಲದ ವಿಶಿಷ್ಟಗಳಿಗೆಗಳು ಅವಿಸ್ಮರಣೀಯವಾಗುತ್ತವೆ. ಬಾಹ್ಯವಿವರಗಳಿಗೆ ಕೊಡುವಷ್ಟೇ ಗಮನವನ್ನು ತಮ್ಮ ಕಥಾನಾಯಕಿಯ ಅಂತರಂಗದ ಚಿತ್ರಣಕ್ಕೂ ಕೊಡುವುದರಿಂದ ಸೋನುಬಾಯಿ ಯವರ ಜೀವನ ಕಣ್ಣೆದುರಿಗೇ ನಡೆದಂತಾಗುತ್ತದೆ. 'ಸೋನುಬಾಯಿಯವರು ಗೆಲುವಾಗಿಯೇ ಇದ್ದರೂ ಅವರ ಮಾನಸಿಕ ಸ್ಥಿತಿ ಒಂದೇ ಬಗೆಯಾಗಿ ಸ್ಥಿಮಿತದಲ್ಲಿ ಇರುತ್ತಿರಲಿಲ್ಲ. ಅವರ ಸಂಗೀತದ ದಾಹ, ತನ್ನ ಜೀವಮಾನವನ್ನೇ ಅದರ ಸಾಧನೆ ಗಾಗಿ ಮುಡುಪಾಗಿಡಬೇಕೆಂದಿದ್ದ ಹಂಬಲ ಮತ್ತೆ ಮತ್ತೆ ಫೆಡೆಚಾಚಿ ನಿಲ್ಲುತ್ತಿದ್ದವು. ಹಂಬಲವನ್ನು ಬಲಿಕೊಡುತ್ತಿರುವೆನಲ್ಲಾ ಎನಿಸದೇ ಇರುತ್ತಿರಲಿಲ್ಲ ! ಮಂಡಳಿಯ ಒಡೆತನ, ಆದಾಯ-ವೆಚ್ಚ, ಗಳಿಕೆ-ಬಳಕೆ, ಅದೇ ಅಭಿನಯ, ಅದೇ ಹಾಡಿಪ್ಪನ್ನೇ

ಹಾಡಿ ಮುಗ್ಧ ಜನರಿಂದ ಸಿಫಾರಸು ಪಡೆಯುವುದು ಇಷ್ಟೇ ತನ್ನ ಬದುಕೇ! ಇದೇ ತನ್ನ ಜೀವನದ ಗುರಿಯೇ! ಎನಿಸುತ್ತಿತ್ತು...'ಭಾರತವೀರ' ರಂಗಭೂಮಿಯನ್ನು ಕಾಣುವ ದಿನವೂ ಮನಸ್ಸು ಅಂಥದೇ ನಿರಾಸೆಯ ನೋವಿನಿಂದ ನುಗ್ಗಾಗಿತ್ತು! ಸೈರಂಧ್ರಿಯಂತೆ ತಾನೂ ಅಜ್ಞಾತವಾಸ ಅನುಭವಿಸುತ್ತಿರುವಂತೆ ಕಾಣಿಸಿತು!... ಅಂದು ದಿನವಿಡೀ ದುಃಖವನ್ನು ಅವ್ಯಕ್ತವಾಗಿ ಅನುಭವಿಸಿದ ಜೀವ ರಂಗಭೂಮಿಯ ಬೇರೊಂದು ರೂಪದಲ್ಲಿ ವ್ಯಕ್ತಗೊಳಿಸುತ್ತಿದೆಯೇನೋ ಎನ್ನುವಂತೆ ಸೈರಂಧ್ರಿಯ ಅಸಹಾಯಕ ಸ್ಥಿತಿಯನ್ನು, ಕರುಣ-ಶೋಕವನ್ನು ಅಭಿನಯಿಸಿದರೆ ಜನರೆದೆ ಜರೆ ಜರೆದು ಹೋಯಿತು! ನಾಟಕ ಇನ್ನೂ ಮುಗಿಯಿತೋ ಇಲ್ಲವೋ ಉಳಿದವರೆಲ್ಲ ಬಂದು ಸಿಫಾರಸು ಮಾಡುವವರೇ. ಕಲಕೋಟಿಯವರಂತೂ ಎದೆತುಂಬಿ ಬಂದು "ಸೋನುಬಾಯಿಯವರೆ. ಸುಧೇಷ್ಣೆಯ ಒತ್ತಾಯಕ್ಕೆ ಮಣಿದು ಸೈರಂಧ್ರಿ ಕೀಚಕನಿಗೆ ಮಧುಕೊಡಲು ಹೊರಟಾಗಿನ, 'ದೇವಾ ಎಲ್ಲಿ ಹೋದರೂ ನನಗೆ ಈ ಸಂಕಟ ತಪ್ಪಲಿಲ್ಲ' ಎನ್ನುವ ನಿಮ್ಮ ಸ್ವಗತ ಮಾತು ವಿಂಗಿನಲ್ಲಿ ಕುಳಿತ ನನ್ನ ಕಣ್ಣಲ್ಲಿಯೂ ನೀರೂರಿಸದೇ ಬಿಡಲಿಲ್ಲ" ಎಂದು ಹೇಳಿದರಂತೆ!' ಪರಿಸರಕ್ಕೂ ವ್ಯಕ್ತಿಯ ಬದುಕಿಗೂ ಇರುವ ನಿಕಟ ಸಂಬಂಧವನ್ನು ಅವುಗಳ ಪರಸ್ಪರ ಪ್ರಭಾವವನ್ನು ಗುರುತಿಸುವುದರಿಂದ ಕೋತಿನ ಅವರ ಬರವಣಿಗೆಗೆ ಗಟ್ಟಿತನ ಬಂದಿದೆ. ಮೂರನೆಯ ಅಧ್ಯಾಯ ಸೋನುಬಾಯಿಯವರ 'ಸಂಗೀತ ಸಾಧನೆ'ಗೆ ಮತ್ತು ಕೊನೆಯ ಅಧ್ಯಾಯ ಅವರು 'ಅತಿಥಿ ಕಲಾವಿದೆ'ಯಾಗಿದ್ದ ದಿನಗಳ ಬಗ್ಗೆ ಮೀಸಲಾಗಿದೆ. ಮೂರನೆಯ ಅಧ್ಯಾಯ ದಲ್ಲಿ ಕಾಣಿಸುವ ಬದುಕು ಎರಡನೆ ಅಧ್ಯಾಯದ ಸಂದರ್ಭಗಳಲ್ಲೇ ಹಾಸುಹೊಕ್ಕಾ ಗಿರುವುದರಿಂದ, ಈ ಎರಡು ಅಧ್ಯಾಯಗಳನ್ನು ಪ್ರತ್ಯೇಕಿಸಿರುವುದರಿಂದ ಇಡೀ ಪುಸ್ತಕದ ಬಂಧಕ್ಕೆ ಧಕ್ಕೆಯಾಗಿದೆ ಎನಿಸುತ್ತದೆ. ಮೂರನೆ ಅಧ್ಯಾಯದಲ್ಲಿ ಎರಡ ನೆಯ ಅಧ್ಯಾಯದ ಸನ್ನಿವೇಶಗಳ ಪುನರಾವೃತ್ತಿಯಾಗಿ ಬೇಸರಕ್ಕೆ ಕಾರಣವಾಗುತ್ತದೆ. ಆದರೂ ಕೋತಿನ ಅವರ ಪ್ರಯತ್ನ, ಶ್ರಮ ಮತ್ತು ಬರವಣಿಗೆ ಬೆಲೆಯುಳ್ಳದಾಗಿದೆ.

'ವಿಶ್ವಮಾನವ ಮ್ಯಾಕ್ಸ್ ಮುಲ್ಲರ್'ಎನ್ನುವ ಪುಸ್ತಕವನ್ನು ಜಯವಂತ ಕಾಡದೇವರ ಬರೆದಿದ್ದಾರೆ. ಮ್ಯಾಕ್ಸ್‌ಮುಲ್ಲರ್ ಚಿಕ್ಕಹುಡುಗನಾಗಿದ್ದಾಗ ಅವನನ್ನು ಹಿಮದ ಕೋಣೆಯ ಹಾಗೆ ತಣ್ಣಗೆ ಕೊರೆಯುತ್ತಿದ್ದ ಚರ್ಚಿಗೆ ಕರೆದುಕೊಂಡು ಹೋದದ್ದರಿಂದ ಅವನು ಮುಂದೆ ಚರ್ಚನ್ನು ವಿರೋಧಿಸಿದ. ಅವನ ತಾಯಿ ಸುಂದರಿಯಾಗಿದ್ದುದೇ ಅಲ್ಲದೆ ಸಂಗೀತ ವಿಶಾರದಳಾಗಿದ್ದರಿಂದ ಅವನಿಗೆ ಸಂಗೀತದಲ್ಲಿ ಪ್ರೀತಿಹುಟ್ಟಿತು. ಅವನಿಗೆ 16 ವರ್ಷವಾಗುವುದರಲ್ಲಿ ಗ್ರೀಕ್‌ಲ್ಯಾಟೀನ್ ಭಾಷೆಗಳನ್ನು ಕಲಿತಿದ್ದ. ತಾನು ಯಾರೂ ತುಳಿಯದ ದಾರಿಯನ್ನು ಆರಿಸಿಕೊಳ್ಳಬೇಕೆಂದು ಸಂಸ್ಕೃತವನ್ನು ಆರಿಸಿಕೊಂಡ. ತನ್ನ ಅಭ್ಯಾಸಕ್ಕೆ ಅಡಚಣೆಯಾಗುವಂಥ ಕೆಲಸಗಳು ಸಿಕ್ಕರೂ, ಅವು ಗಳನ್ನು ಬಿಟ್ಟು ಬಡತನದಲ್ಲಿ ಬಾಳಿದ. ಇಂಥ ಅನೇಕ ವಿವರಗಳನ್ನು ಈ ಪುಸ್ತಕದಲ್ಲಿ ಕಾಣುತ್ತೇವೆ. ಈ ಪುಸ್ತಕವನ್ನು ಬರೆಯಲಿಕ್ಕೆ ಅನೇಕ ಗ್ರಂಥಗಳನ್ನು ಓದಿ 'ರಕ್ತ ಮಾಂಸ ತುಂಬಿ ನನ್ನದೇ ಆದ ಶಕ್ತಿಯಲ್ಲಿ, ರೀತಿಯಲ್ಲಿ ಮುಲ್ಲರ್‌ನ ವ್ಯಕ್ತಿತ್ವ ಚಿತ್ರಿಸಿ ದ್ದೇನೆ. ಬಹುಶಃ ನನಗೆ ತಿಳಿದ ಹಾಗೆ ಭಾರತೀಯ ದೇಶ ಭಾಷೆಗಳಲ್ಲಿ ಮುಲ್ಲರ್‌ನ

ಜೀವನ ಚರಿತ್ರೆಯ ಪ್ರಥಮ ಪ್ರಯತ್ನ ಇದು' ಎಂದು ಲೇಖಕರು ಹೇಳಿದ್ದಾರೆ. ಈ ಪುಸ್ತಕವನ್ನೋದಿದಾಗ ರಕ್ತಮಾಂಸ ಕಡಿಮೆಯೇ ಅನ್ನಿಸುತ್ತದೆ. ಆದರೆ ಮ್ಯಾಕ್ಸ್ ಮುಲ್ಲರ್ ಬಗ್ಗೆ ಕನ್ನಡದಲ್ಲಿ ಇಡಿಯಾದ ಪುಸ್ತಕ ಒಂದೂ ಇಲ್ಲದಿದ್ದ ಸಮಯದಲ್ಲಿ ಆ ಕೊರತೆಯನ್ನು ಈ ಪುಸ್ತಕ ಕಡಿಮೆಮಾಡುವುದರಿಂದ ಕಾಡದೇವರ ಪ್ರಯತ್ನ ಸ್ವಾಗತಾರ್ಹವಾಗಿದೆ.

'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' (ಸಂಪುಟ ಮೂರು) ಎನ್ನುವ ಪುಸ್ತಕ ವನ್ನು ಸೂರ್ಯನಾಥ ಕಾಮತರು ಸಂಪಾದಿಸಿದ್ದಾರೆ. ಸ್ವಾತಂತ್ರ್ಯದ ಹೋರಾಟ ದಲ್ಲಿ ಭಾಗವಹಿಸಿದವರು ಅಸಂಖ್ಯಾತ ಜನ. ಕನ್ನಡ ನಾಡಿನಲ್ಲಿ ಈ ಚಳುವಳಿಯ ಸ್ವರೂಪ ಏನಿತ್ತು, ಇದರಿಂದ ಆದ ರಾಜಕೀಯ, ಧಾರ್ಮಿಕ ಆರ್ಥಿಕ ಸಾಮಾಜಿಕ ಪರಿಣಾಮಗಳೇನು ಎನ್ನುವುದನ್ನು ಅಭ್ಯಾಸ ಮಾಡುವುದಕ್ಕೆ ಆಕರ ಗ್ರಂಥವನ್ನು ಸಿದ್ಧಪಡಿಸುವಲ್ಲಿ ಸೂರ್ಯನಾಥಕಾಮತರು ಯಶಸ್ವಿಯಾಗಿದ್ದಾರೆ. ಈ ಪುಸ್ತಕದಲ್ಲಿ ಸುಮಾರು 200ಕ್ಕೆ ಮೇಲ್ಪಟ್ಟು ಸ್ವಾತಂತ್ರ್ಯವೀರರ ನೆನಪುಗಳಿವೆ. ಮಾಜಿ ಬ್ರಿಟಿಷ್ ಜಿಲ್ಲೆಗಳು, ಮಾಜೀ ಸಂಸ್ಥಾನೀ ಪ್ರದೇಶಗಳು ಮತ್ತು ಕಿರು ಸಂಸ್ಥಾನಗಳಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯ ಸ್ವರೂಪ ಇದರಲ್ಲಿದೆ. ಮನೆಮಠಗಳನ್ನು ಕಳಕೊಂಡವರು, ಮೈಮೂಳೆಮುರಿಸಿಕೊಂಡವರು, ಪೋಲೀಸರ ದೌರ್ಜನ್ಯಕ್ಕೆ ತುತ್ತಾದ ಮಹಿಳೆಯರು, ಶೌರ್ಯವೇ ಮೈವೆತ್ತು ಬಂದಂಥ ಬಾಲಕರು—ಹೀಗೆ ಇಲ್ಲಿನ ಚಿತ್ರಗಳಿವೆ. ಕೆಲವುಚಿತ್ರ ಗಳಂತೂ ಸಾಹಸಮಯ ಕತೆಗಳಹಾಗೆ ರೋಮಾಂಚನ ಗೊಳಿಸುತ್ತವೆ. ಒಬ್ಬರ ನೆನಪಿಗೂ ಇನ್ನೊಬ್ಬರ ನೆನಪಿಗೂ ಇರುವ ಸಂಬಂಧವನ್ನು, ಬಿಟ್ಟುಹೋದ ವಿಷಯಗಳನ್ನು, ಸಂಪಾದಕರ ಟಿಪ್ಪಣಿಗಳನ್ನು ಸೂಚಿಸುತ್ತವೆ. ಇಷ್ಟೊಂದು ಜನರನ್ನು ಕಲೆ ಹಾಕಿ, ಅವರ ಬರವಣಿಗೆಗಳನ್ನು ಸಂಸ್ಕರಿಸಿ, ಅವುಗಳನ್ನು ಕ್ರಮವಾಗಿ ಜೋಡಿಸುವಲ್ಲಿನ ಸೂರ್ಯನಾಥಕಾಮತರ ಪರಿಶ್ರಮ ಮೆಚ್ಚುವಂಥದ್ದು. ಆ ಕಾಲದಲ್ಲಿ ಸುಂವಹನ ಹೇಗೆ ನಡೆಯಿತು, ಸಮೂಹ ಮಾಧ್ಯಮಗಳ ಪಾತ್ರವೇನಿತ್ತು, ಸಂಘಟನೆ ಯಾವ ರೀತಿ ನಡೆಯಿತು, ರೈತರ ಪಾತ್ರವೇನಿತ್ತು, ಕಾರ್ಮಿಕರ ಪಾತ್ರವೇನಿತ್ತು, ಕಾರ್ಯಕರ್ತರಿಗೆ ಸಿಕ್ಕ ತರಬೇತಿ ಎಂಥದು, ಶಿಕ್ಷಣದಲ್ಲಿ ಆದ ಬದಲಾವಣೆಗಳೇನು, ವ್ಯಾಯಾಮ ಶಾಲೆಗಳು ವಹಿಸಿದ ಪಾತ್ರವೇನು, ಜನರ ಸಾಹಿತ್ಯಾಭಿರುಚಿಯಲ್ಲಿ ಎಂಥ ಬದಲಾವಣೆ ಗಳಾದವು, ರಾಷ್ಟ್ರೀಯತೆ ಹರಡಿದ ಬಗೆ ಯಾವುದು, ಹಿಂದೂಗಳು, ಮುಸ್ಲಿಮರು, ಹರಿಜನರು ಸಾಮಾಜಿಕ ಪರಿವರ್ತನೆಯಲ್ಲಿ ಹೇಗೆ ಪಾಲುಗೊಂಡರು, ವಿವಿಧ ಪಕ್ಷಗಳಲ್ಲಿ ಸಹಕಾರವಿತ್ತೆ, ಕರ್ನಾಟಕ ಏಕೀಕರಣ, ಸ್ವಾತಂತ್ರ್ಯ ಚಳುವಳಿಯ ಅಂಗವಾಗಿ ಮೂಡಿದ್ದು ಹೇಗೆ ಇಂಥ ಹಲವಾರು ಪ್ರಶ್ನೆಗಳಿಗೆ ಸ್ಪಷ್ಟ ಉತ್ತರಗಳನ್ನು ಕೊಡುವ ಈ ಸಾಹಸ ಮಯ ಪ್ರಯತ್ನವನ್ನು ಎಷ್ಟು ಶ್ಲಾಘಿಸಿದರೂ ಕಡಿಮೆ ಎನಿಸುತ್ತದೆ. ಸ್ವಾತಂತ್ರ್ಯ ಯೋಧರ ಈ ನೆನಪುಗಳು ನಮ್ಮ ಸಾಹಿತಿಗಳಿಗೆ, ಚರಿತ್ರಕಾರರಿಗೆ, ಸಮಾಜಶಾಸ್ತ್ರಜ್ಞ ರಿಗೆ, ರಾಜಕೀಯಶಾಸ್ತ್ರಜ್ಞರಿಗೆ ಬಹಳ ಮುಖ್ಯವಾಗುವುದರಲ್ಲಿ ಸಂಶಯವಿಲ್ಲ. ಇವು ಗಳಲ್ಲಿರುವ ರೋಮಾಂಚಕಾರಿ ಕತೆಗಳನ್ನು ನಮ್ಮ ಬಾಲಕರು ಓದಿ ಈ ನಾಡಿನ

ಹಿರಿಯರ ಬಗ್ಗೆ ಹೆಮ್ಮೆಪಡುತ್ತಾರೆ. ಇಂಥ ಪ್ರಯತ್ನ ಬಹುಶಃ ಭಾರತದಲ್ಲಿಯೇ ಪ್ರಥಮಬಾರಿಗೆ ಆಗಿರಬಹುದು. ಭಾರತದ ಇತಿಹಾಸದಲ್ಲಿ ಬಹಳ ಮುಖ್ಯವಾದ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳನ್ನು ಕ್ರಮಬದ್ಧವಾಗಿ ಸಂಪಾದಿಸಿದ್ದಕ್ಕಾಗಿ ಸೂರ್ಯನಾಥಕಾಮತರನ್ನು ಅಭಿನಂದಿಸುತ್ತೇವೆ.

'ಹಿರಿಯರು-ಗೆಳೆಯರು', ವಿ. ಸೀತಾರಾಮಯ್ಯನವರ ಐನೂರಾಮೂವತ್ತಾರು ಪುಟಗಳ ಒಂದು ದೊಡ್ಡ ಪುಸ್ತಕ. ಇದರಲ್ಲಿ ವಿ.ಸೀಯವರು ತಮಗೆ ಹಿರಿಯರಾದ ಹಾಗೂ ಗೆಳೆಯರಾದ ಮೂವತ್ತನಾಲ್ಕು ವ್ಯಕ್ತಿಗಳ ಚಿತ್ರವನ್ನು ಕೊಟ್ಟಿದ್ದಾರೆ. ಈ ಮೂವತ್ತನಾಲ್ಕು ಮಂದಿಯೂ ಒಂದು ವಯಸ್ಸಿನವರಲ್ಲ, ಒಂದು ಕ್ಷೇತ್ರದವರಲ್ಲ. ಸುಪ್ರಸಿದ್ಧರಿಂದ ಹಿಡಿದು ಅಪ್ರಸಿದ್ಧರನ್ನಬಹುದಾದವರೆಗೂ ಈ ವ್ಯಕ್ತಿಗಳ ಪರಿಚಯ ಓದುಗರ ಗಮನವನ್ನು ಸೆಳೆದುಕೊಳ್ಳುತ್ತದೆ. ಬರವಣಿಗೆ, ವಿ.ಸೀಯವರಿಗೆ ಆಯಾ ವ್ಯಕ್ತಿಗಳೊಂದಿಗೆ ಇದ್ದ ಪ್ರೀತಿ-ಗೌರವಗಳ, ಹಾಗೂ ಆತ್ಮೀಯತೆಯ ಬಣ್ಣದಿಂದ ಕೂಡಿದೆ. ಪರಿಚಿತರಾಗುವ ವ್ಯಕ್ತಿಗಳ ಚಹರೆ, ನಡೆ-ನುಡಿ, ವೇಷ-ಭೂಷಣ, ಹವ್ಯಾಸ-ಅಭಿರುಚಿ ಇತ್ಯಾದಿಗಳಿಂದ ಹಿಡಿದು ಅವರು ಅಂದಂದಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ನಡೆದುಕೊಂಡ ವ್ಯಕ್ತಿತ್ವದವರೆಗೂ, ವಿಸೀಯವರ ಕಣ್ಣು ವಿವರಗಳನ್ನು ಚಿತ್ರಿಸುವ ರೀತಿ ವಿಶೇಷವಾದದ್ದು. ಆಯಾ ವ್ಯಕ್ತಿಗಳ ಜತೆ ವಿ.ಸೀಯವರು ವಿವಿಧ ಸಂದರ್ಭದಲ್ಲಿ ಪಡೆದ ವಿವಿಧಾನುಭವಗಳು, ಅವರನ್ನು ಕುರಿತು ಸಮಯೋಚಿತವಾಗಿ ವಿ.ಸೀ,ಯವರು ಮಾಡುವ ಟೀಕೆ, ಟಿಪ್ಪಣಿ. ಪ್ರಶಂಸೆ ಇತ್ಯಾದಿಗಳು, ಈಗ ಕಾಣಬಾರದ ಒಂದು ಒಳ್ಳೆಯ ಕಾಲದ ನೆನಪುಗಳಾಗಿ, ಅಂದಿಗೂ ಇಂದಿಗೂ ಇರುವ ಅಂತರವನ್ನು ಎತ್ತಿತೋರಿಸುತ್ತವೆ. ಈ ಎಲ್ಲ ವ್ಯಕ್ತಿ ಚಿತ್ರಗಳ ಉದ್ದಕ್ಕೂ, ವಿ.ಸೀಯವರ ಬಹುಮುಖ ವ್ಯಕ್ತಿತ್ವ ತಾನೇ ತಾನಾಗಿ ಬಿಚ್ಚಿಕೊಳ್ಳುತ್ತದೆ. ಇಲ್ಲಿರುವುದು ಕೇವಲ ವ್ಯಕ್ತಿ ಚಿತ್ರಣದ ಕೌಶಲವಲ್ಲ: ಕಳೆದ ಆರೇಳು ದಶಕಗಳ ಸಾಂಸ್ಕೃತಿಕ ಚರಿತ್ರೆಯ ಸಮರ್ಥ ನಿರೂಪಣೆ. ಬಹುಶಃ ಕನ್ನಡದಲ್ಲಿ ಇಷ್ಟು ಸಂಖ್ಯೆಯ ವ್ಯಕ್ತಿ ಚಿತ್ರಗಳ ಮೂಲಕ ಸಮೃದ್ಧವಾದ ಅನುಭವವನ್ನು ಹಿಡಿದಿರಿಸಿದ ಪುಸ್ತಕ ಇದೊಂದೇ ಎಂದು ತೋರುತ್ತದೆ.

'ನಾನು ಕಂಡಗೆಳೆಯರ ಗುಂಪು' (ಭಾಗ 3) ಎನ್ನುವ ಶೇ. ಗೋ. ಕುಲಕರ್ಣಿ ಯವರು ಬರೆದ ಪುಸ್ತಕದ ಮೂರನೆಯ ಮತ್ತು ಕೊನೆಯಭಾಗ ಇದು. ಸಾಧನ ಮುದ್ರಣಾಲಯ ಮತ್ತು ಜೀವನ ಮಾಸಪತ್ರಿಕೆಗಳ ಹುಟ್ಟಿಗೆ ಶೇ.ಗೋ. ಕುಲಕರ್ಣಿ ಯವರ ಆದರ್ಶಗಳು ಎಷ್ಟರಮಟ್ಟಿಗೆ ಕಾರಣವಾದುವು, ಅವುಗಳ ಜಯಾಪಜಯ ಗಳು ಎಂಥವು, ಗೆಳೆಯರ ಕನಸು ಹೇಗೆ ಮುರಿದು ಬಿತ್ತು ಎನ್ನುವುದನ್ನು ಕುಲಕರ್ಣಿ ಯವರು ಸುದೀರ್ಘವಾಗಿ ಬರೆದಿದ್ದಾರೆ. ಹಿಂದಿನ ಎರಡು ಭಾಗಗಳಲ್ಲಿ ಕಂಡು ಬಂದಂತೆ ಈ ಕೊನೆಯಭಾಗದಲ್ಲೂ ಶೇ.ಗೋ. ಕುಲಕರ್ಣಿಯವರೇ ಇಲ್ಲಿಯ ಕೇಂದ್ರ. ಅವರ ನೋವು, ಸಮಾಧಾನಗಳು, ನೆನಪುಗಳು ಅವರು ಬಿಟ್ಟುಕೊಟ್ಟಿರುವ ಆಸ್ತಿ. ಹಿಂದಿನ ಭಾಗಗಳಲ್ಲಿ ಕಂಡುಬಂದಂತೆ ಇಲ್ಲಿಯೂ ಕೆಲವೊಮ್ಮೆ ಪುನರಾವೃತ್ತಿಯ ದೋಷ

ಕಾಣಿಸುತ್ತದೆ. ತಾರೀಖುಗಳು ತಿಂಗಳುಗಳನ್ನು ನಮೂದಿಸಲಾಗದಿದ್ದರೂ ವರ್ಷಗಳನ್ನಾದರೂ ನಮೂದಿಸದಿದ್ದರೆ ಹೆಚ್ಚು ಉಪಯೋಗವಿರುತ್ತಿತ್ತು.

'ದೀಪರೇಖೆ' ಪು.ತಿ. ನರಸಿಂಹಾಚಾರ್ಯರ ಪ್ರಬಂಧ ಸಂಕಲನ. 'ಅಧ್ಯಾತ್ಮಿಕ ಕ್ಷೇತ್ರದಲ್ಲಿ ನನ್ನ ಮನಸ್ಸು ಅಲೆದಾಡಿದ ಪರಿಗಳನ್ನು ಇಲ್ಲಿನ ಬರಹಗಳು ರೇಖಿಸುತ್ತವೆ' ಎಂದು ಲೇಖಕರು ಹೇಳಿದ್ದಾರೆ. 'ಮನಸ್ಸಿನ ಅಲೆದಾಟ' ಪ್ರಬಂಧದ ಒಂದು ಲಕ್ಷಣ. ಈ ಪ್ರಬಂಧಗಳಲ್ಲಿ ಕಾಣುವ ಮನಸ್ಸು ಕವಿಯೊಬ್ಬರ ಮನಸ್ಸಾದ್ದರಿಂದ ಇಲ್ಲಿ ಭವನಿಮಜ್ಜನ ಚಾತುರ್ಯವೂ, ಲಘಿಮಾ ಕೌಶಲವೂ ಸೇರಿಕೊಂಡು ಈ ಪ್ರಬಂಧಗಳಿಗೆ ಒಂದು ವಿಶೇಷವಾದ ಕಾಂತಿ ಮತ್ತು ಮಾಧುರ್ಯ ಸಮ್ಮಿಳಿತವಾಗುತ್ತವೆ. ಈ ಉದಾಹರಣೆಯನ್ನು ನೋಡಿ: 'ಭೂಮಿಯನ್ನು ಕುರಿತು ಅದರ ಸ್ಥಿರತೆಯೇ ನಮಗೆ ನಿತ್ಯ ನಿರಂತರ ಅನುಭವಕ್ಕೆ ಬರುವಂಥಾದ್ದು...ಗ್ರಹ ಗಾಮಿಯ ಅನುಭವಗಳಲ್ಲಿ, ಅಂತರಿಕ್ಷ ವೀಕ್ಷಣಪಟುವಿನ ದೃಷ್ಟಿಯಲ್ಲಿ, ಈ ಭೂಸ್ಥಿರತೆ ಒಂದು ಮಾಯೆ, ಕಸದಂತೆ ಕಳೆಯಬೇಕಾದ ಅಜ್ಞಾನ'. ಹೀಗೆ ಸಾಮಾನ್ಯದೃಷ್ಟಿಯಿಂದ ಅಸಾಮಾನ್ಯ ದೃಷ್ಟಿಗೆ ಜಿಗಿಯುವ ಗುಣ ಈ ಪ್ರಬಂಧಗಳ ವೈಶಿಷ್ಟ್ಯ. ಒಂದು ಸಾಮಾಜಿಕ ಪರಿಸ್ಥಿತಿಯನ್ನು ಗುರುತಿಸಿ ಅದಕ್ಕೊಂದು ಸ್ಥಾನಮಾನವನ್ನು ಕಲ್ಪಿಸುವ ಹವಣಿಕೆಗೆ, 'ಶಿಷ್ಟಾಚಾರ' ಎನ್ನುವ ಪ್ರಬಂಧದಲ್ಲಿ ಧರ್ಮಶಾಸ್ತ್ರದಿಂದ ಒಂದು ಉದಾಹರಣೆಯನ್ನು ಕೊಡುತ್ತಾರೆ: "ಜಾರಿಣಿಯಾದ ಒಬ್ಬ ಹೆಂಗಸು ಸತ್ತರೆ ಆಕೆಯ ಗೂಢಪತಿಗೂ ಊಢ ಎಂದರೆ ಮದುವೆಯಾದ ಪತಿಗೂ ಅಶೌಚವನ್ನು ವಿಧಿಸುತ್ತದೆ ಧರ್ಮಶಾಸ್ತ್ರ'. ಈ ರೀತಿಯ ಆಚಾರ ಸಂಹಿತೆಗಳಲ್ಲಿ ಪು.ತಿ.ನ. ಅವರು ಶುದ್ಧಾಂತ:ಕರಣವನ್ನು ಕಾಣುತ್ತಾರೆ. ಇಂಥವುಗಳನ್ನು ಕುರಿತು ಹೀಗೆ ಹೇಳುತ್ತಾರೆ : "ಈ ನಿಯಮಗಳಲ್ಲಿ ಎಷ್ಟೋ ಈಗ ಆಚರಣೆಯಲ್ಲಿಲ್ಲ. ಯಾವುವು ಜೀವಂತವಾಗಿ ಅನುಷ್ಠಾನದಲ್ಲಿವೆ, ಯಾವುವು ಇಲ್ಲ, ಯಾವವನ್ನು ಕಟ್ಟಿಕೊಳ್ಳಬೇಕು, ಯಾವವನ್ನು ಬಿಡಬೇಕು, ಯಾವ ಹೊಸ ಸೂತ್ರಗಳನ್ನು ಸೇರಿಸಿಕೊಳ್ಳಬೇಕು—ಇದನ್ನು ಪ್ರೌಢರೆಲ್ಲರೂ ಆಲೋಚಿಸಬೇಕು". ಹೀಗೆ ಆಲೋಚಿಸುವ ಮುಕ್ತಮನಸ್ಸಿನ ಶುಚಿತ್ವ ನಮಗೆ ಪ್ರಿಯವಾಗುತ್ತದೆ. ದೇವರ ಬಗ್ಗೆ ಈ ಕವಿ ಹೇಳುವುದನ್ನು ಕೇಳಿ. "ಈಗ ಇಡ್ಲಿ ಕಾಫಿ ಇದೆಯೇ ಎಂದರೆ ಮಾಡಿದರುಂಟು ಇಲ್ಲದಿದ್ದರೆ ಇಲ್ಲ. ಅದು ಇಲ್ಲ ಉಂಟು ಎಂಬ ಲಕ್ಷಣದ್ದು. ದೇವರು ಎನ್ನುವ ಭಾವವೂ ಅಷ್ಟೇ ; ಮನಸ್ಸಿಗೆ ತಂದುಕೊಂಡರೆ ಉಂಟು ಇಲ್ಲದಿದ್ದರೆ ಇಲ್ಲ. ಮಾನವನ ಎಲ್ಲ ಮೌಲ್ಯಗಳೂ ಹೀಗೆಯೇ, ಆಚರಣೆಯಲ್ಲಿದ್ದರೆ ಉಂಟು ಇಲ್ಲದಿದ್ದರೆ ಇಲ್ಲ." ಪು.ತಿ.ನ. ಅವರು ಕಂಡ ಕೃಷ್ಣ ಎಂಥವನು ಎನ್ನುವುದಕ್ಕೆ ಈ ಮಾತುಗಳನ್ನು ಕೇಳಿ : "ಸಾಮಾನ್ಯ ಜನರ ಸರಳಜೀವನ, ಅವರ ಕಷ್ಟ ಕಾರ್ಪಣ್ಯಗಳು, ಅವರ ಅತಾರ್ಕಿಕ ಭಯಗಳು, ಅಲೌಕಿಕ ನಂಬುಗೆಗಳು, ಅವರ ನಿಷ್ಕಲ್ಮಷವಾದ ಪ್ರೀತಿ ಮತ್ತು ಔದಾರ್ಯ ಇವುಗಳ ಗಾಢಪರಿಚಯ ಆತನಿಗೆ ಗೋಕುಲ ವೃಂದಾವನಗಳಲ್ಲಿ ದೊರೆತವು...ದೇಶದ ಸಮಸ್ತ ಸಂಪಲ್ಮೂಲರಾದ ಸಾಮಾನ್ಯಶ್ರಮಜೀವಿಗಳ ಮೇಲೆ ಪ್ರೀತಿ ಮತ್ತು ಇವರ ದುಡಿಮೆ

ಯನ್ನೆಲ್ಲ ತಿಂದು ಹಾರಾಡುತ್ತಾ ದುಂಡಾವರ್ತನೆಗಿಳಿದಿದ್ದ ಲಂಪಟರ ತಿರಸ್ಕರಣ— ಈ ಪ್ರೀತಿಯನ್ನು ಶ್ರೀಮದ್ಭಾಗವತ ಅತ್ಯಪೂರ್ವವಾಗಿ ವರ್ಣಿಸುತ್ತದೆ". ಅವರು ಕಂಡ ರಾಮು "ಯಾವ ಪ್ರಾಣಿಗಳನ್ನಾಗಲಿ ತಿರಸ್ಕರಿಸಿ ಅವಮಾನ ಪಡಿಸತಕ್ಕವನಲ್ಲ ಮತ್ತು ಕಾಲಕ್ಕೆ ವಶನಾಗಿ ನಡೆಯತಕ್ಕವನಲ್ಲ ಎಂದರೆ ಆಯಾ ಕಾಲದಲ್ಲಿ ಹುಟ್ಟಿ ಕೊಳ್ಳುವ ತಾತ್ವಿಕ, ಸೈದ್ಧಾಂತಿಕ, ಸಾಮಾಜಿಕ, ಒಲುಮೆಗಳ ಪ್ರಭಾವದಲ್ಲಿ ಕೊಚ್ಚಿ ಹೋಗುವವನಲ್ಲ; ತನ್ನ ಬುದ್ಧಿಯನ್ನು ತನ್ನ ಕೈಯಲ್ಲಿಟ್ಟುಕೊಂಡು ಅದರಂತೆ ನಡೆ ಯುವ ವಿವೇಕಿ". ಹೀಗೆ ಸರಳವಾಗಿ ಸುಂದರವಾಗಿ ಬದುಕು ಮತ್ತು ಸಾಹಿತ್ಯದ ಬಗ್ಗೆ ಒಳನೋಟಗಳನ್ನು ಕೊಡುವ ಪು.ತಿ.ನ. ಅವರ ಗದ್ಯ ಕೆಲವೊಮ್ಮೆ ಸಂಸ್ಕೃತಕ್ಕೆ ತಿರುಗಿಬಿಟ್ಟರೆ ಸಾಮಾನ್ಯ ಓದುಗರಿಗೆ ದಿಗ್ಭ್ರಮೆಯಾಗುತ್ತದೆ. ಉದಾಹರಣೆಗೆ ಈ ವಾಕ್ಯವನ್ನು ನೋಡಿ. "ಈ ಬುದ್ಧಿಯೂ ಧೈರ್ಯವೂ ನಮಗೆ ಸರಾಗವಾಗಿ ಒದಗಿಬರುವಂತಾಗಲು ತೌಲ್ಯನಿಧಿಗಳೂ ಸತತಾಧ್ಯವಸಾಯಶೀಲರೂ ಅಖಂಡ ಕಾಲಾವಗಾಹನ ದಕ್ಷರೂ ಅಜಿತರೂ ಅನಿರ್ಬದ್ಧರೂ ಮತ್ತು ತಮ್ಮ ಕಾಲದ ಪ್ರಗತಿವಿರುದ್ಧವಾದ ಪ್ರವೃತ್ತಿಗಳೆದುರು ದಂಗೆಯೆದ್ದ ಹಿಂದಿನ ಮಹಾ ಪುರುಷರ ಸ್ಮರಣೆ ಸಂತತ ಆವಶ್ಯಕ."

'ನೆನಪಿನ ದೋಣಿಯಲ್ಲಿ' ಎನ್ನುವ ಕುವೆಂಪುರವರ ಆತ್ಮಚರಿತ್ರೆಯ ಮೊದಲ ಭಾಗ ಈ ಕವಿಯ ಜೀವನದ ಮೊದಲ 33 ವರ್ಷಗಳನ್ನು ಚಿತ್ರಿಸುತ್ತದೆ. ಕವಿಯ ಕೌಟುಂಬಿಕ ಹಿನ್ನೆಲೆ, ಬಾಲ್ಯದ ನೆನಪುಗಳು, ಕವಿಯನ್ನು ಬಾಲ್ಯದಿಂದಲೇ ಪ್ರಭಾವಿಸಿದ ಮಲೆನಾಡಿನ ಪ್ರಕೃತಿ, ಮನೆಯಲ್ಲಿನ ಆಚಾರಗಳು, ಊಟ ತಿಂಡಿಗಳು ಸಾವು ನೋವುಗಳು, ಬಂಧು ಬಳಗ, ತಮ್ಮ ಸುತ್ತಮುತ್ತಲಿನ ಜಾತಿ ವರ್ಗಗಳ ಅನುಭವಗಳು, ಕವಿಗೆ ಸಿಕ್ಕ ವಿದ್ಯಾಭ್ಯಾಸ, ಕ್ರಿಸ್ತೀಯರ ಪ್ರಭಾವ, ಆಟಪಾಟಗಳು, ಕವಿಯ ಚೇತನ ರೂಪುಗೊಳ್ಳುತ್ತಿದ್ದ ರೀತಿ, ಈಜುವ ಸಾಹಸ, ದೈನಂದಿನ ಬದುಕಿನ ಕ್ರಮ, ಹೊರಗಿನ ಪ್ರಪಂಚ ಕುಪ್ಪಳ್ಳಿಯ ಮೂಲೆಗೂ ಚಾಚಿಕೊಳ್ಳುತ್ತಿದ್ದ ಸನ್ನಿವೇಶ ಗಳು, ಔಷಧೋಪಚಾರಗಳು, ಮನೆಯಲ್ಲಿನ ಮನಸ್ತಾಪಗಳು, ಕವಿಯ ಪ್ರೇಮ ಪ್ರಸಂಗಗಳು ಹೀಗೆ ನೂರಾರು ವಿಷಯಗಳು ಈ ಪುಸ್ತಕವನ್ನು ಓದುತ್ತಿದ್ದಂತೆಯೇ ನಮ್ಮ ಕಣ್ಣಮುಂದೆ ನಿಲ್ಲುತ್ತವೆ. ಮಲೆನಾಡಿನ ಕಾಡಿನ ಹಾಗೆಯೇ ಸಮೃದ್ಧವಾದ, ಕಿಕ್ಕಿರಿದ ಅನುಭವಗಳ ಈ ಆತ್ಮಚರಿತ್ರೆ ಕುವೆಂಪುರವರ ಕಾವ್ಯ, ನಾಟಕ, ಕಾದಂಬರಿ, ವಿಮರ್ಶೆ, ವೈಚಾರಿಕ ಲೇಖನಗಳಿಗೆ ಅಧಿಕೃತವಾದ ಹಿನ್ನೆಲೆಯನ್ನು ಒದಗಿಸುತ್ತದೆ. ಇದನ್ನು ಓದುವುದೇ ಒಂದು ಅನುಭವ. ಚಿಕ್ಕವರಾಗಿದ್ದಾಗ ತಮಗಿದ್ದ ಭಾವಾತಿ ರೇಕವನ್ನು, ತಮ್ಮ ಬರಹಗಳ ಬಗ್ಗೆ ತಮಗಿದ್ದ ಭ್ರಮೆಯನ್ನು ಹಿಂತಿರುಗಿನೋಡುತ್ತ ತುಂಟನಗೆಯೊಂದಿಗೆ ನಮ್ಮೊಡನೆ ಹೇಳಿಕೊಳ್ಳುವ ಕುವೆಂಪು ನಮಗೆ ಪ್ರಿಯವಾಗು ತ್ತಾರೆ. ಕವಿಯ ದಿನಚರಿಯಿಂದ ತೆಗೆದ ಅನೇಕ ಉದ್ಧೃತಗಳು ಕ್ಷುಲ್ಲಕ ವಿಷಯಗಳಿಂದ ಗಹನ ವಿಷಯಗಳವರೆಗೆ ಕವಿಯ ಮನಸ್ಸು ಹರಿಯುತ್ತಿದ್ದ ರೀತಿಯನ್ನು ಚಿತ್ರಿಸುತ್ತವೆ. ಈ ಉದಾಹರಣೆಯನ್ನು ನೋಡಿ : 1924ನೆಯ ಫೆಬ್ರುವರಿ 1ನೆಯ ಶುಕ್ರವಾರದ

ದಿನಚರಿ : "ತಿಗಣೆ ಕೊಲ್ಲುವುದಕ್ಕಾಗಿಯೇ ಬೆಳಿಗ್ಗೆ 4 ಗಂಟೆಗೇ ಎದ್ದೆ. ಸಂಜೆ ನಾಲ್ಕು ಗಂಟೆಗೇ ಪಬ್ಲಿಕ್ ಲೈಬ್ರರಿಗೆ ಹೋಗಿ, ಸ್ವಾಮಿ ಅವಧಾನಂದರ vedanta The divine Inheritence of man" ಎಂಬ ಪುಸ್ತಕಕ್ಕಾಗಿ ಹುಡುಕಾಡಿದೆ'. (ಪುಟ 255).

ತಮ್ಮ 22–23 ಮಯಸ್ಸಿಗಾಗಲೇ ನಾಡಿನಾದ್ಯಂತ ಪ್ರಮುಖ ಕವಿಯಾಗಿದ್ದ ಕುವೆಂಪು ತಾವು ಎಲ್ಲೆಲ್ಲಿ ಕಾವ್ಯ ವಾಚನ ಮಾಡಿದರೆನ್ನುವುದರ ಹಿನ್ನೆಲೆಯನ್ನು ಕೊಡುವುದರಿಂದ, ಆಗಿನ ಸಾಹಿತ್ಯಾಭಿರುಚಿಯನ್ನು ತಿಳಿದುಕೊಳ್ಳುವುದಕ್ಕೆ ತುಂಬಾ ನೆರವಾಗುತ್ತದೆ. ಈ ಕವಿಯಸಾಧನೆ ಅಷ್ಟು ದೊಡ್ಡದಾಗುವುದಕ್ಕೆ ಕಾರಣ ಈ ಕವಿಗಿದ್ದ ಸ್ವಕೇಂದ್ರ ಪ್ರಜ್ಞೆ ಎಂದು ಕಾಣುತ್ತದೆ. ಈ ಸ್ವಕೇಂದ್ರ ಪ್ರಜ್ಞೆ ಎಷ್ಟರಮಟ್ಟಿಗಿತ್ತೆಂದರೆ, ಬಂಧು ಬಳಗ ಸ್ನೇಹಿತರು, ಗುರುಗಳು ಎಲ್ಲರೊಡನೆ ಇವರಿಗಿದ್ದ ಸಂಬಂಧ ಸಾಮಾನ್ಯ ಮನುಷ್ಯ ಸಂಬಂಧಕ್ಕಿಂತ ಬೇರೆಯಾಗಿತ್ತು. ತಾಯಿ ಸತ್ತಾಗ ಇಸ್ಪೀಟು ಆಡುತ್ತಿದ್ದ ಕವಿ (ಪುಟ 407–408) ಯ ಮನಸ್ಸನ್ನು ಕುವೆಂಪು ಚಿತ್ರಿಸಿದ್ದಾರೆ. "ಯಾರ ಸ್ತನ್ಯಪಾನ ಲಾಲನೆ ಪಾಲನೆಗಳಿಂದ ನಾನೂ ಒಬ್ಬ ಮಾನವ ವ್ಯಕ್ತಿಯಾಗಿ ಬೆಳೆದು ಬಂದಿದ್ದೆನೋ ಆ ಬ್ರಹ್ಮಮಯೀ ಮಾತೆ ದೇಹ ತ್ಯಾಗಮಾಡಿದ್ದರು ! ಶೋಕಾಘಾತದಿಂದ ಚೇತನ ತತ್ತರಿಸಿತು, ಒಂದು ಕ್ಷಣ ! ಒಡನೆಯೆ ನನ್ನ ಅದ್ವೈತ ಬುದ್ಧಿಯ ಅನೆಸ್ತೆಶಿಯಾ ಕೆಲಸ ಮಾಡಿತು. ಟೆಲಿಗ್ರಾಂ ಅನ್ನು ಜೇಬಿನಲ್ಲಿಟ್ಟುಕೊಂಡು, ಏನು ಎಂತು ಎಂದು ಪ್ರಶ್ನಿಸಿದ ಮಿತ್ರರಿಗೆ ಏನೂ ವಿಶೇಷದ್ದಲ್ಲ ಎಂಬಂತೆ ಉತ್ತರಿಸಿ, ಮತ್ತೆ ಆಟದಲ್ಲಿ ತೊಡಗಿದೆ. ಏನೂ ನಡೆದಿಲ್ಲ ಎಂಬಂತೆ ಆಟ ಮುಂದುವರಿದು ಬಹಳ ಹೊತ್ತಿನ ಮೇಲೆ ಮುಗಿಯಿತು." ಈ ಕವಿ ಲೋಕದ ಮತ್ತು ತನ್ನ ಸಾಮಾನ್ಯ ಸಂಬಂಧವನ್ನು ಮುರಿದು ಕವಿ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಹೊರಟ ದಾರಿಯಲ್ಲಿ ಇನ್ನೊಂದು ಮಹತ್ವದ ಘಟ್ಟ ಅವರಿಗೆ 'ಮೈಲಿ'ಯಾದ ಸಂದರ್ಭ. ಅವರಿಗೆ ಜ್ವರ ಬಂದು ಬಾಹ್ಯಪ್ರಜ್ಞಾಹೀನ ಸ್ಥಿತಿಯಲ್ಲಿದ್ದಾಗಲೂ ಯಾವಾಗಲೂ ಗುರುಮಹಾರಾಜ್–ಮಹಾಮಾತೆಯರ ಆಲ್ಬಂ ಅನ್ನು ಹತ್ತಿರವೇ ಇಟ್ಟುಕೊಂಡಿರುತ್ತಿದ್ದರು. ಸ್ನಾನ ಮಾಡುವಾಗ ಕಂಕುಳಲ್ಲೇ ಆ ಆಲ್ಬಂ ಇರುತ್ತಿತ್ತು (ಪುಟ 788). ಸಿಡುಬು ಬೊಕ್ಕೆಯೊಡೆದು ಬತ್ತುತ್ತಿದ್ದಾಗ ಮಂಜಪ್ಪಗೌಡರು ಕಾಳಿ ಪ್ರಸಾದವನ್ನು ತಂದು ಕೊಟ್ಟಾಗ ಕವಿಯಲ್ಲಿ ಆಶ್ಚರ್ಯಕರವಾದ ಶಕ್ತಿಸಂಚಾರವಾಗಿ ಅವರನ್ನು ಮೂರು ನಾಲ್ಕು ಜನ ಹಿಡಿಯಲಿಕ್ಕಾಗಲಿಲ್ಲ (ಪುಟ 92) 'ಪುಟ್ಟಪ್ಪ ಸತ್ತುಹೋದ; ನಾನು ವಿವೇಕಾನಂದ !' ಎಂದು ಹೇಳುತ್ತಲೇ ಇದ್ದರು (ಪುಟ 793) ದೇಹದಿಂದ ಪಾರಾಗಲಿಕ್ಕೆ ತಾವಿದ್ದ ಗುಡಿಸಲಿಗೇ ಬೆಂಕಿ ಹಂಚಲಿಕ್ಕೆ ಹೊರಟಿದ್ದರು (ಪುಟ 795) "ಪುಟ್ಟಪ್ಪತನದ ಅಹಂಕಾರದ ವ್ಯಕ್ತಿತ್ವ ಸಂಪೂರ್ಣ ವಿನಾಶ ಹೊಂದಿದ್ದರೂ ತೀರಿಹೋಗಿ ಸದ್ಯಕ್ಕೆ ಅತೀತವಾಗಿರುವ ಪುಟ್ಟಪ್ಪನ ನೆನಪು ಇತರ ಯಾವನೋ ಒಬ್ಬ ಗತಿಸಿದವನ ನೆನಪಿನಂತೆ ಇರುತ್ತಿತ್ತು" ಎಂದು

ಕುವೆಂಪು ಹೇಳಿದ್ದಾರೆ (ಪುಟ 797). ಈ ಸಮಯದಲ್ಲಿ ಅವರಿಗೆ ಸರ್ವಜ್ಞತ್ವದ ಮತ್ತು ಸರ್ವ ಶಕ್ತಿತ್ವದ ಅನುಭವವಾಗುತ್ತಿತ್ತಂತೆ (ಪುಟ 798) ಹೀಗೆ ಲೋಕರಂಗ ದಲ್ಲಿ ಹುಚ್ಚರ ಹಾಗೆ ಕಂಡಿದ್ದರ ಬಗ್ಗೆ ಕವಿ ಹೀಗೆ ಹೇಳುತ್ತಾರೆ: "ನನ್ನ ಕವಿಚೇತನದ ಭಾವಾನುಭವಗಳನ್ನು ಚಿಂತನಗಳನ್ನು ಮುಚ್ಚು ಮರೆಯಿಲ್ಲದೆ ಲೋಕರಂಗದಲ್ಲಿ ಬಿಚ್ಚಿದೆ ನಾದರೆ ನಾನು ಅಂದಿಗಿಂತಲೂ ಹೆಚ್ಚಾಗಿ ಹುಚ್ಚನಾಗಿ ಕಾಣುವುದರಲ್ಲಿ ಸಂಶಯವಿಲ್ಲ! ಅದನ್ನೇ ಕಲೆಯ ಮತ್ತು ಕಾವ್ಯದ ರಂಗದಲ್ಲಿ ಬಿಚ್ಚಿ ಬರೆದು ನಾನು ಮಹಾಕವಿ ಯೆಂದೂ ರಸಋಷಿಯೆಂದೂ ಏನೇನೋ ವಿಶೇಷಣಗಳಿಂದ ಸುಪ್ರಸಿದ್ಧನೂ ಕೆಲವರಿಗೆ ಪೂಜ್ಯನೂ ಆಗಿಬಿಟ್ಟಿದ್ದೇನೆ...ಲೋಕರಂಗದ ಹುಚ್ಚನ್ನು ಕಲಾರಂಗಕ್ಕೆ ವರ್ಗಾಯಿಸುವುದೇ ಕಾವ್ಯರಂಗದ ಯಶಸ್ಸಿದ್ಧಿ" (ಪುಟ 805). (ಕವಿ ಯಾವುದನ್ನು 'ಹುಚ್ಚು' ಎಂದು) ಕರೆಯುತ್ತಾರೆ ಅದನ್ನೇ Rimbaud ಎನ್ನುವ ಫ್ರೆಂಚ್ ಕವಿ a rational disordering of the Sensesಎಂದು ಕರೆಯುತ್ತಾನೆ. ಕುವೆಂಪು. ತಮ್ಮನ್ನು ಯಾವುದೋ ಒಂದು ಅತೀಂದ್ರಿಯಶಕ್ತಿ ಕೈ ಹಿಡಿದು ನಡುತ್ತಿದೆಯೆಂದು ನಂಬಿಕೊಂಡು ಬಂದವ ರಾದ್ದರಿಂದ ಆ ಅತೀಂದ್ರಿಯ ಶಕ್ತಿಯ ವಶಕ್ಕೆ ತಮ್ಮನ್ನು ಒಪ್ಪಿಸಿಕೊಂಡವರಂತೆ ನಡೆಯಲಿಕ್ಕೆ ಪ್ರಯತ್ನಿಸಿದ್ದರಿಂದ, ಅವರಿಗೆ ಮಿಕ್ಕವರೊಡನೆ ಸಾಮಾನ್ಯ ಸಹಜ ಸಂಬಂಧಗಳು ಸಾಧ್ಯವಾಗಲಿಲ್ಲ. ಹಾಗೆ ಇನ್ನೊಂದು ಶಕ್ತಿಯ ವಶಕ್ಕೆ ತಮ್ಮನ್ನು ಒಪ್ಪಿಸಿಕೊಂಡ ವ್ಯಕ್ತಿತ್ವವೇ ತಮ್ಮಲ್ಲಿರುವ ಮಹಾಕವಿ ಎನ್ನುವುದನ್ನು ಅವರಿಗೆ ಮರೆಯುವುದು ಕೂಡಾ ಸಾಧ್ಯವಾಗುವುದಿಲ್ಲ. ಬಹುಶಃ ಅದರಿಂದಲೇ ಓಂಕಾರದ ಘೋಷದಂತಹ ನಾದಮಯವಾದ ಕಾವ್ಯದಲ್ಲಿ ಕವಿ ತನ್ಮಯತೆಯಲ್ಲಿ ನಿಲ್ಲುತ್ತಾರೆ. ಕವಿಯ ಈ 'ಉನ್ಮತ್ತತೆ ಗೆ ರಾಮಕೃಷ್ಣರ 'ಉನ್ಮತ್ತತೆ' ಮಾದರಿಯಾಗಿತ್ತೆಂದು ಕಾಣಿಸುತ್ತದೆ.

ಕುವೆಂಪುರವರ ಆತ್ಮ ಚರಿತ್ರೆಯನ್ನು ಓದುತ್ತಿರುವಾಗ 'ಉನ್ಮತ್ತತೆ'ಯ (rational disordering of Senses) ಸಾಧಕನಿಗೆ ಮಹತ್ವದ ಅಂಶದೊಂದಿಗೆ, ಮಲೆನಾಡಿನ ಮತ್ತು ನೂರಾರು ವ್ಯಕ್ತಿಗಳ ದಟ್ಟವಾದ ವಿವರಗಳನ್ನೊಳಗೊಂಡ ಲೋಕರಂಗ ಮಗ್ನತೆಯ ಅಂಶವೂ ಗಮನಾರ್ಹವೆನಿಸುತ್ತದೆ. ಇದು ಅವರ ಬಾಲ್ಯದ ಅನುಭವಗಳ ಪರಿಣಾಮ ರೂಪದ್ದು. ಈ ಲೋಕರಂಗ ಮಗ್ನತೆತನ್ಮಯತೆಯನ್ನು ನಿಧಾನವಾಗಿ ಮುಟ್ಟುವ ಹಾದಿ. ಈ ಹಾದಿಯಲ್ಲಿ ಕುವೆಂಪು ತನಕ್ಕಿಂತ ಪುಟ್ಟಪ್ಪತ್ವವೇ ಮುಖ್ಯವಾದದ್ದು. ಕುವೆಂಪುರವರ ಭಾವಾನುಭವಗಳು ಮತ್ತು ಚಿಂತನೆಗಳು 'ಉನ್ಮತ್ತತೆ'ಯ ದಾರಿಯಲ್ಲಿ ಸಿಗುವಂಥವು. ಪುಟ್ಟಪ್ಪನವರ ಭಾವಾನುಭವಗಳು ಟಾಲ್‌ಸ್ಟಾಯ್‌ಯಂತಹ ಕಾದಂಬರಿಕಾರ ಸಾಧಕನಲ್ಲಿ ಸಿಗುವಂಥವು. ಒಂದುಕಡೆ ಮಿಲ್ಟನ್ ವರ್ಡ್ಸ್‌ವರ್ತ್ ಹೆಗಲ ಮೇಲೆಕೂರುವುದಕ್ಕೆ ಅದ್ವೈತದ ಚಿಂತನೆ, ಇನ್ನೊಂದು ಕಡೆ ಟಾಲ್‌ಸ್ಟಾಯ್ ಹಾಗೆಯೇ ಬೃಹತ್ ಕಾದಂಬರಿಗಳನ್ನು ಬರೆಯು

ವುದಕ್ಕೆ ಇಂದ್ರಿಯಾನುಭವಗಳಿಗೆ ಕಾರಣವಾದ ವಿಶಿಷ್ಟ ವಿವರಗಳನ್ನು ಮೆಲುಕು ಹಾಕುವ ಮನೋಜಠರ. ಎರಡು ದಿಕ್ಕಿನಲ್ಲೂ ಮಹತ್ತಿನಕಡೆಗೆ ಬೃಹತ್ತಿನ ಕಡೆಗೆ ಕಣ್ಣು. 1925 ನೆ ಆಗಸ್ಟ್ 22ನೆಯ ದಿನಚರಿಯಲ್ಲಿ ಕುವೆಂಪು ತಮ್ಮ ಒಳಗಣ್ಣಿನ ಮುಂದೆ ಸುಳಿಯುತ್ತಿದ್ದ ಎರಡು ಜೀವನ ಚಿತ್ರಗಳನ್ನು ಹೀಗೆ ಗುರುತಿಸಿದ್ದಾರೆ. ಒಂದು, ಲೌಕಿಕ ಜೀವನದ ಅತ್ಯಂತ ವಿಜಯೀ ವ್ಯಕ್ತಿ ; ಇನ್ನೊಂದು ಕೌಪೀನವುಟ್ಟ, ಕಾಷಾಯ ವಸ್ತ್ರಧಾರಿಯಾದ, ಪರಿವ್ರಾಜಕ ಸಂನ್ಯಾಸಿ. ಹೀಗೆ ಮಹತ್ತು ಮತ್ತು ಬೃಹತ್ತಿಗೆ ಕೈಚಾಚಿ ಅಸಾಮಾನ್ಯರಾದ ಈ ಕವಿ ಸಾಮಾನ್ಯರ ಹಾಗೆ ನಡೆದುಕೊಳ್ಳ ದಿದ್ದರೆ ಆಶ್ಚರ್ಯವೇನಲ್ಲ. ಕವಿ ಕುವೆಂಪು ಅಸಾಮಾನ್ಯರಾಗುತ್ತಿದ್ದ ಪ್ರತಿಯೊಂದು ಘಟ್ಟವನ್ನೂ ಈ ಆತ್ಮಚರಿತ್ರೆಯಲ್ಲಿ ಕಾಣುತ್ತೇವೆ.

ಪುಟ್ಟಪ್ಪನವರು ತಮ್ಮನ್ನು ತಾವೇ ಮಹಾಕವಿ ಎಂದು ಕರೆದುಕೊಳ್ಳುವು ದನ್ನು ಅವಿನಯ ಎನ್ನಬಹುದೇನೋ. ದೇವಸ್ಥಾನಗಳಿಗೆ ಹೋಗದೆ, ಪುರೋಹಿತ ರನ್ನು ಟೀಕಿಸುತ್ತ, ರಾಮಕೃಷ್ಣಾಶ್ರಮದ ರೀತಿಯ ಪೂಜೆಗಳನ್ನು ಮಾಡುವುದನ್ನು ವಿರೋಧಾಭಾಸ ಎನ್ನಬಹುದೇನೋ. ಡೈರಿಯ ಅನವಶ್ಯಕ ಟಿಪ್ಪಣಿಗಳನ್ನು ಕಡಮೆ ಮಾಡಬಹುದಿತ್ತು ಎನ್ನಬಹುದು. ತಾವು ಬರೆದ ರಾಶಿ ರಾಶಿ ಇಂಗ್ಲಿಷ್ ಪದ್ಯಗಳಲ್ಲಿ ಕೆಲವನ್ನು ಮಾತ್ರ ಕೊಟ್ಟಿದ್ದರೆ ಸಾಕು ಎನ್ನಬಹುದು. ಕಕ್ಕಸ್ಸಿನ ವಾಸನಾಮಯ ವರ್ಣನೆಯನ್ನು ಮೊಟಕು ಗೊಳಿಸಬಹುದಿತ್ತು ಎನ್ನಬಹುದು. ಆದರೆ ಮಲೆನಾಡಿನ ಮೂಲೆಯ ಬಾಲಕನೊಬ್ಬ ಕನ್ನಡ ಸಾಹಿತ್ಯದಲ್ಲಿ ಅಗ್ರಗಣ್ಯರಲ್ಲೊಬ್ಬನಾದದ್ದನ್ನು ಹೇಳುವ ಈ ಕತೆಯಲ್ಲಿ ಅಲ್ಲೊಂದು ಮಾತು ಇಲ್ಲೊಂದು ಮಾತು ಹೆಚ್ಚು ಅಥವಾ ಕಡಿಮೆಯೆನ್ನುವುದು ಅತ್ಯಂತ ಗೌಣವಾದದ್ದು. ಆದರೆ ಸಾಹಿತ್ಯದ ವಿದ್ಯಾರ್ಥಿ ಗೌಣ ವಾದದ್ದನ್ನು ಸಂಪೂರ್ಣವಾಗಿ ಕಡೆಗಣಿಸುವ ಹಾಗೂ ಇಲ್ಲ.

ಈ ಬೃಹತ್ ಗ್ರಂಥದ ಗದ್ಯಶೈಲಿ ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳ' ಗದ್ಯ ಶೈಲಿಯನ್ನು ನೆನಪಿಗೆ ತರುತ್ತದೆ. ಒಂದು ಉದಾಹರಣೆ : ಈ ಕವಿ ಹುಟ್ಟುವ ಮುಂಚೆ ಅವರ ತಂದೆಯ ಬೇಟೆಯ ನೆನಪೊಂದನ್ನು ಕುವೆಂಪು ಹೀಗೆ ಹೇಳುತ್ತಾರೆ : "ಅವರು ಒಂದು ಹಬ್ಬದ ದೊಡ್ಡ ಬೇಟೆಯಲ್ಲಿ ಬಿಲ್ಲಿಗೆ -ನಿಂತಿದ್ದಾಗ, ಅವರ ಮುದ್ದಿನ ನಾಯಿ ಅಟ್ಟಿಸಿಕೊಂಡು ಬಂದ ಒಂದು ಹೆಬ್ಬಂದಿಗೆ ಗುಂಡಿಕ್ಕಿದರಂತೆ. ಆ ಗುಂಡು ಹಂದಿಗೆ ತಗುಲಿ, ಅದನ್ನು ಹಾಯ್ದು, ಅದರ ಆಚೆಗೆ ಬೆನ್ನಟ್ಟಿ ಬರುತ್ತಿದ್ದ ನಾಯಿಗೂ ತಗುಲಿ ಅದು ಸತ್ತಿತ್ತಂತೆ. ಆ ದಿನ ಅವರು ಕಣ್ಣೀರಿಕ್ಕಿ ಬಹಳ ಸಂಕಟ ಪಟ್ಟರಂತೆ. ಊಟವನ್ನು ಮಾಡಿದೆ ಆ ಹಂದಿಯ ಮಾಂಸವನ್ನು ಮುಟ್ಟಲಿಲ್ಲವಂತೆ. ತಮ್ಮ ಮಕ್ಕಳಲ್ಲಿ ಒಂದು ಸತ್ತರೆ ಅದನ್ನು ಒಪ್ಪ ಮಾಡಿ ಹೂಳುವ ರೀತಿಯಲ್ಲಿ ಸಂಪ್ರದಾಯದ ಪ್ರಕಾರ ಆ ನಾಯಿಯನ್ನು ಮಣ್ಣು ಮಾಡಿದರಂತೆ ! ಅದರ ಹೆಸರು 'ಡೂಲಿ' ಎನ್ನುತ್ತಿದ್ದರು.

ಇನ್ನೊಂದು ಅಪೂರ್ವವಾದ ಮತ್ತು ಅರ್ಥಪೂರ್ಣವಾದ ಚಿತ್ರ ನೆನಪಿಗೆ ಹೊಳೆಯುತ್ತದೆ : ಮುಂದೆ, ಎಷ್ಟೋ ವರ್ಷಗಳ ತರುವಾಯ, ನಾನುಕನ್ನಡದ ಮಹಾ ಕವಿಯಾಗಿ 'ಶ್ರೀ ರಾಮಾಯಣದರ್ಶನಂ' ಮಹಾಛಂದಸ್ಸಿನ ಮಹಾಕಾವ್ಯವನ್ನು ರಚಿಸಿದುದಕ್ಕೂ ಅದಕ್ಕೂ ಏನಾದರೂ ಅತೀಂದ್ರಿಯ ಸಂಬಂಧವಿರಬಹುದೇ ಎಂದು ಅಚ್ಚರಿಪಡುತ್ತೇನೆ." ಈ ಎರಡು ಪ್ಯಾರಾಗಳನ್ನು ನೋಡಿದಾಗ ಮೊದಲನೆ ಪ್ಯಾರಾದ ಮೂರ್ತತೆ ಅಪೂರ್ವವಾದ ಕನ್ನಡತನದಲ್ಲಿ ಕಾಣಿಸಿಕೊಂಡರೆ, ಎರಡನೆ ಪ್ಯಾರಾದ ಅಮೂರ್ತತೆ ಸಂಸ್ಕೃತಮಯವಾಗುತ್ತ, ಉದ್ಘೋಷದ ಹಾಗೆ ಕೇಳಿಸುತ್ತದೆ. ಕುವೆಂಪುರವರ ಗದ್ಯ ಅಧ್ಯಾತ್ಮಿಕ ಅನುಭವಗಳತ್ತ ಹೊರಳಿದ ಕೂಡಲೆ ಸಂಸ್ಕೃತ ಮಯವಾಗುವುದು, ಈ ಲೋಕದ ವಿವರಗಳಿಗೆ ಬಂದೊಡನೆ ಕನ್ನಡಮಯವಾಗು ತ್ತದೆ. ಕನ್ನಡಮಯವಾದಾಗ ಕಾಣಿಸುವ ಸಂವಹನಶಕ್ತಿ, ಮೊನಚು ಮತ್ತು ಆತ್ಮೀಯತೆ, ಸಂಸ್ಕೃತಮಯವಾದಾಗ ಉಳಿಯುವುದಿಲ್ಲ.

'ಹಳೆಯಪಳೆಯ ಮುಖಗಳು' ಗೊರೂರು ರಾಮಸ್ವಾಮಿ ಅಯ್ಯಂಗಾರರ ಹದಿನೇಳು ಪ್ರಬಂಧಗಳ ಸಂಕಲನ. ಇವುಗಳಲ್ಲಿ 'ಶ್ಯಾನುಭೋಗ' 'ಒಂದು ಆದಿ ವಾಸಿಗಳ ಜಾನಪದದ ಸಂಸ್ಕೃತಿ' 'ಒಂದು ಸಂಜೆ' 'ಐವತ್ತು ವರ್ಷಗಳ ಹಿಂದೆ ನೋಡಿದ ನಾಟಕಗಳು' ವಿಶೇಷವಾಗಿ ನಮ್ಮ ಗಮನವನ್ನು ಸೆಳೆಯುತ್ತವೆ. 'ಶ್ಯಾನು ಭೋಗ' ಕಣ್ಮರೆಯಾದ ಒಂದು ಅಧಿಕಾರಿವರ್ಗದ, ಆಡಳಿತ ವ್ಯವಸ್ಥೆಯ ರೂಪ ರೇಷೆಗಳನ್ನು ಕೊಡುತ್ತದೆ. ಆದಿವಾಸಿಗಳನ್ನು ಕುರಿತ ಪ್ರಬಂಧ ಮುಂಡ ಬುಡ ಕಟ್ಟಿನವರ ಬದುಕಿನ ರೀತಿಯನ್ನು ಅವರ ಜಾನಪದವನ್ನು, ಅವರ ನಂಬಿಕೆಗಳನ್ನು ಆತ್ಮೀಯವಾಗಿ ಪರಿಚಯಮಾಡಿಕೊಡುತ್ತದೆ. 'ಒಂದು ಸಂಜೆ' ಪ್ರಕೃತಿಯ ಸಾನ್ನಿಧ್ಯ ದಲ್ಲಿ ಸಿಗುವ ಸಂತೋಷಗಳನ್ನು ಚಿತ್ರಿಸುತ್ತದೆ. ಈ ಪ್ರಬಂಧವನ್ನು ಓದುವಾಗ ಥೊರೋ ಬರೆದ ವಾಲ್ಡನ್ ನೆನಪಾಗಿ, ಆ ನೆನಪಿನ ಖುಷಿಯೂ, ಈ ಪ್ರಬಂಧದ ಸುಂದರ ಅನುಭವದಲ್ಲಿ ಸೇರಿಹೋಗುತ್ತದೆ. ಐವತ್ತು ವರ್ಷಗಳ ಹಿಂದಿನ ನಾಟಕ ಗಳನ್ನು ಕುರಿತು ಹೇಳುವಾಗ ಗೊರೂರು ಕಳೆದುಹೋದ ಮಾಯಾಲೋಕವೊಂದನ್ನು ಪುನಃ ಸೃಷ್ಟಿಸಿದ್ದಾರೆ. ಇಲ್ಲಿರುವ ಪ್ರಬಂಧಗಳಲ್ಲೆಲ್ಲ ಗೊರೂರರ ಮನಸ್ಸು ಹಿಂದಿನಿಂದ ಇಂದಿಗೆ, ಇಂದಿನಿಂದ ಹಿಂದಕ್ಕೆ, ಮತ್ತೆ ನಾಳೆಗೆ ಹರಿಯುತ್ತ, ಬದುಕಿನ ಬಗ್ಗೆ ಗೊರೂರರ ತೀವ್ರವಾದ ಪ್ರೀತಿಯನ್ನು ವ್ಯಕ್ತಪಡಿಸುತ್ತದೆ.

ಇನ್ನುಳಿದ ಪ್ರಬಂಧಗಳಲ್ಲಿ 'ಬಾಬ ಪ್ರಭಾವ', 'ಸಂಚಾರಿ ಚಲನಚಿತ್ರಗಳು' 'ಬಿಂದಿಗಮ್ಮನ ಜಾತ್ರೆ', 'ಹಳೆ ಮೈಸೂರಿನ ಸಂಗೀತವೈಭವ', 'ದಿ ವಿಲೇಜ್ ಪೋಸ್ಟ್ ಮನ್', ಗೊರೂರರ ಆಸಕ್ತಿಗಳ ವೈವಿಧ್ಯವನ್ನು ತೋರಿಸುತ್ತವೆ. ಖೊಟ್ಟಿಬಾಬಾ ಗಳನ್ನು ಗೊರೂರರು ಸಮಾಜೋದ್ಧಾರಕನ ಸಿಟ್ಟಿನಿಂದ ಬರೆಯುವುದಿಲ್ಲ. ಅವರ ಹಾಸ್ಯ ನಮ್ಮನ್ನು ಖೊಟ್ಟಿಬಾಬಾಗಳ ಬಗ್ಗೆ ಎಚ್ಚರಿಸುತ್ತದೆ. ಸಂಚಾರಿ ಚಲನ ಚಿತ್ರಗಳ ಅವಶ್ಯಕತೆಯನ್ನು ಗೊರೂರರು ಹಾಗೆ ಕಂಡವರು ನಮ್ಮಲ್ಲಿ ಯಾರೂ ಇಲ್ಲ. ಬಿಂದಿಗಮ್ಮನ ಜಾತ್ರೆಯಲ್ಲಿ, ಕೆಲವರು, ಗೊರೂರರು ಮೂಢ ಆಚರಣೆಗಳನ್ನು

ಪ್ರತಿಪಾದಿಸುತ್ತಾರೆ ಎಂದು ಟೀಕಿಸಿದರೆ ಆಶ್ಚರ್ಯವೇನಿಲ್ಲ. ಆದರೆ ಗೊರೂರರ ಉದ್ದೇಶ ಆಚರಣೆಗಳಲ್ಲಿ ಅಂತರ್ಗತವಾಗಿರುವ ಭಾವನೆಗಳನ್ನು ಅರ್ಥಮಾಡಿಸುವ ಪ್ರಯತ್ನವಾಗಿದೆ ಎನ್ನುವುದನ್ನು ಮರೆಯಬಾರದು. ನಮ್ಮಲ್ಲಿ ಬದುಕನ್ನು ಸೂಕ್ಷ್ಮವಾಗಿ, ವಿವರವಾಗಿ, ನಿಧಾನವಾಗಿ ನೋಡುವ ತಾಳ್ಮೆಯೇ ಹೊರಟುಹೋಗಿದೆ. ಆದರೆ ಗೊರೂರರಿಗೆ ಆ ತಾಳ್ಮೆಯಿರುವುದು ಖಂಡಿಸಬೇಕಾದ ಪ್ರವೃತ್ತಿಯಲ್ಲ. ಹಳೆಯ ಮೈಸೂರಿನ ಸಂಗೀತ ವೈಭವವನ್ನು ಕುರಿತು ಹೇಳುವಾಗ ಗೊರೂರರ ಉತ್ಸಾಹ ವಿವರಗಳಲ್ಲಿ ಹಾಸುಹೊಕ್ಕಾಗುತ್ತದೆ. ಹೀಗೆ ಬದುಕಿನ ನಾನಾ ಮುಖಗಳನ್ನು ಆತ್ಮೀಯವಾಗಿಸುವ ಗೊರೂರರಿಗೆ ನಾವು ಋಣಿಯಾಗಿರಬೇಕು.

'ಜೀವನದ ಗಾಲಿ' ಎನ್ನುವ ಉ. ಲಕ್ಷ್ಮೀನಾರಾಯಣ ಕಿಣಿಯವರ ಪುಸ್ತಕ ಅವರೇ ಹೇಳುವಂತೆ 'ಅಧ್ಯಾಪಕ ಮತ್ತು ದಸ್ತಾವೇಜು ಬರಹಗಾರರೊಬ್ಬರ ಹಾಗೂ ಅವರ ಮಕ್ಕಳ ಜೀವನದ ಏರುಪೇರುಗಳ ನೈಜಚಿತ್ರಣ." ಅತ್ತೆಯಕಾಟ, ಮಕ್ಕಳಲ್ಲಿ ಸ್ಪರ್ಧೆ, ಇತರರಿಗೆ ಸಹಾಯ ಮಾಡುವ ಜನಗಳು, ಇತರರಿಗೆ ಕಿರುಕುಳಕೊಡುವವರು, ಮಕ್ಕಳಲ್ಲಿ ಓದುವ ಆಸೆ, ಬಡತನದ ಬವಣೆಗಳು, ಚಿಕ್ಕಪುಟ್ಟವ್ಯಾಪಾರಕ್ಕೆ ಸಂಬಂಧಿಸಿದ ಸಂಗತಿಗಳು, ಅತ್ತಿಗೆ ಮೈದುನರ ನಡುವಿನ ವಿರಸ, ವ್ಯಾಪಾರದಲ್ಲಿ ಲಾಭನಷ್ಟಗಳು, ಅಕಸ್ಮಾತ್ತಾಗಿ ಒದಗುವ ದೈವಸಹಾಯ, ಬಡವರ ಸ್ವಾಭಿಮಾನ, ಹಣವಿದ್ದವರ ಸ್ವಪ್ರತಿಷ್ಠೆ, ಚಾಡಿಮಾತು, ಗಾಳಿಮಾತು, ಯುವಕರ ಮೇಲೆ ಹಿರಿಯರ ಒತ್ತಾಯ, ಕ್ಷುಲ್ಲಕ ಕಾರಣಕ್ಕಾಗಿ ಜೈಲಿನವಾಸ, ಮಾನಸಿಕ ಆಘಾತಗಳು, ಹೀಗೆ ಒಂದು ಕುಟುಂಬಕ್ಕೆ ಸಂಬಂಧಿಸಿದ ಅನೇಕ ವಿವರಗಳನ್ನು ಕೊಡುವ ಈ ಪುಸ್ತಕದ ಕೇಂದ್ರ ವ್ಯಕ್ತಿ ಲಕ್ಷ್ಮೀನಾರಾಯಣಕಿಣಿಯವರು. ಅವರು ತಮ್ಮ ಜೀವನದಲ್ಲಿ ಹೇಗೆ ಸಮಾಧಾನವನ್ನು ಸಫಲತೆಯನ್ನು ಕಂಡುಕೊಂಡಿದ್ದಾರೆನ್ನುವುದನ್ನು ಈ ಪುಸ್ತಕ ತಿಳಿಸುತ್ತದೆ.

ಭಾರತೀಯ ಸಾಹಿತ್ಯದ ನಿರ್ಮಾಣಕಾರರು ಎನ್ನುವ ಪುಸ್ತಕಮಾಲೆಯಲ್ಲಿ ಕೇಂದ್ರ ಸಾಹಿತ್ಯ ಅಕ್ಯಾಡಮಿಯವರು ನಾಲ್ಕು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. 'ಮಾಣಿಕ ವಾಚಕರು' ಎನ್ನುವ, ಜಿ. ವನ್ಮೀಕನಾಥನ್ ಬರೆದ ಪುಸ್ತಕವನ್ನು ಎ. ಎಸ್. ಕೆದಿಲಾಯ ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. 'ತಿರುವಾಚಕ' ಮತ್ತು 'ತಿರುಕ್ಕೋವೈಯಾರ್' ಎನ್ನುವ ಕೃತಿಗಳ ಕರ್ತೃವಾದ, ತಮಿಳುನಾಡಿನ ಪ್ರಸಿದ್ಧ ಶೈವಭಕ್ತರಾದ ಮಾಣಿಕ ವಾಚಕರ ಜೀವನ ಮತ್ತು ಕೃತಿಗಳಬಗ್ಗೆ ಸಾಕಷ್ಟು ದೀರ್ಘವಾದ ಪರಿಚಯ ಈ ಪುಸ್ತಕದಲ್ಲಿದೆ. ಕೆಲವು ತಮಿಳು ಪದ್ಯಗಳನ್ನು ಕನ್ನಡ ಲಿಪಿಯಲ್ಲಿ ಕೊಟ್ಟಿರುವುದು ಮೂಲದ ಲಯವನ್ನು ಮತ್ತು ಬಂಧವನ್ನು ಗ್ರಹಿಸುವುದಕ್ಕೆ ಸಹಾಯಕವಾಗಿದೆ. ಅನುವಾದ ಸರಿಯಾಗಿದೆ. ಆದರೆ ಅನುವಾದದ ಒಟ್ಟು ಶೈಲಿ ಓದುವುದಕ್ಕೆ ನಾರು ನಾರಾಗಿದೆ. 'ನಮ್ಮಾಳ್ವಾರ್' ಎನ್ನುವ ಅ. ಶ್ರೀನಿವಾಸರಾಘವನ್ ಬರೆದಿರುವ ಪುಸ್ತಕವನ್ನು ಪು.ತಿ. ನರಸಿಂಹಾಚಾರ್ಯರು ಕನ್ನಡಕ್ಕೆ ಅನುವಾದಿಸಿದ್ದಾರೆ. ತಮಿಳುನಾಡಿನ

ವೈಷ್ಣವ ಸಂತಕವಿ ನಮ್ಮಾಳ್ವಾರ್ 'ತಿರುವಿರುತ್ತಮ್' 'ತಿರುವಾಶಿರಿಯಮ್' 'ಪೆರಿಯ ತಿರುವಂದಾದಿ' ಮತ್ತು 'ತಿರುವಾಯ್‌ಮೊಳಿ' ಎನ್ನುವಕೃತಿಗಳನ್ನು ರಚಿಸಿದವರು. ನಮ್ಮಾಳ್ವಾರರ ಕಾವ್ಯ, ಅವರ ಭಕ್ತಿ, ಅವರ ದರ್ಶನದ ಪರಿಚಯು ಇಲ್ಲಿದೆ. ಅನುವಾದ ಚನ್ನಾಗಿದೆ. ಬಾಣಭಟ್ಟ ಎನ್ನುವ ಕೆ. ಕೃಷ್ಣಮೂರ್ತಿಯವರ ಪುಸ್ತಕವನ್ನು ಲೇಖಕರೇ ಅನುವಾದಿಸಿದ್ದಾರೆ. ಆದ್ದರಿಂದ ಈ ಪುಸ್ತಕ ಮಿಕ್ಕ ಅನುವಾದಗಳಿಗಿಂತ ಹೆಚ್ಚು ಸರಳವಾಗಿದೆ. ಓದುವುದಕ್ಕೆ ಅಡ್ಡಿಯಾಗುವಂತಹ ವಾಕ್ಯಬಂಧಗಳು ಇಲ್ಲದಿರುವುದು ಈ ಪುಸ್ತಕದ ಹೆಚ್ಚುಗಾರಿಕೆ. ಬಾಣನ 'ಹರ್ಷ ಚರಿತ' ಮತ್ತು 'ಕಾದಂಬರಿ' ಎನ್ನುವ ಗ್ರಂಥಗಳನ್ನೂ ಬಾಣನಜೀವನವನ್ನೂ ಪರಿಚಯ ಮಾಡಿಕೊಡುವ ಈ ಪುಸ್ತಕದಲ್ಲಿ, ಬಾಣನ ಬಗ್ಗೆ ಆಧುನಿಕರಿಗೆ ಅನ್ನಿಸಬಹುದಾದ ಕಿರಿಕಿರಿಯನ್ನು ಲೇಖಕರು ಗ್ರಹಿಸಿದ್ದಾರೆ. ಆದರೆ ಒಟ್ಟಿನಲ್ಲಿ ಬಾಣನಬಗ್ಗೆ ಅವರು ತಳೆದಿರುವ ನಿಲುವನ್ನು ರವೀಂದ್ರರ ಈ ಮಾತುಗಳಲ್ಲಿ ಸಂಗ್ರಹಿಸ ಬಹುದು : "ನವಿಲುಗರಿಯಿಂದ ಮಾಡಿದ ಸುಂದರವಾದ ಬೀಸಣಿಗೆಯಿಂದ ಗಾಳಿಯು ಚನ್ನಾಗಿ ಬರುವುದಿಲ್ಲ. ರಾಜಸಭೆಗಳಲ್ಲಿ ಅವುಗಳನ್ನು ಉಪಯೋಗಿಸುವುದು ಠೀವಿಗಾಗಿ, ಗಾಳಿಯನ್ನು ಬೀಸುವುದು ನೆಪಕ್ಕೆಮಾತ್ರ ಸಂಸ್ಕೃತ ಭಾಷೆಯನ್ನು ಅನುಚರರಿಂದೊಡಗೂಡಿದ ಚಕ್ರವರ್ತಿಯಂತೆ ಮುಂದುಮಾಡಿಕೊಂಡು, ಕಥೆಯು ಕಣ್ಣಿಗೆ ಬೀಳದಂತೆ ಅದರ ಛತ್ರಿಯನ್ನು ಹೊತ್ತುಕೊಂಡು ಹೋಗುತ್ತದೆ." ವಿಷಯನಿರೂಪಣೆಯಲ್ಲಿ ತೊಡಕಿಲ್ಲದ, ಅನುವಾದದ ಗೋಜಲಿಲ್ಲದ ಈ ಪುಸ್ತಕ ಈ ಮಾಲೆಯಲ್ಲಿ ಬಂದಿರುವ ಉತ್ತಮವಾದ ಪುಸ್ತಕಗಳಲ್ಲಿ ಒಂದು. 'ನಾನಾಲಾಲ'ಎನ್ನುವ ಯು. ಎಂ. ಮಣಿಯಾರ್ ಬರೆದ ಪುಸ್ತಕವನ್ನು ಗೌರೀಶ ಕೈಕಿಣಿ ಕನ್ನಡಕ್ಕೆ ಅನುವಾದಿಸಿದ್ದಾರೆ. ನಾನಾಲಾಲರು ಗುಜರಾಥಿ ಕಾವ್ಯದಲ್ಲಿ ದೊಡ್ಡ ಹೆಸರು. ಅವರ ತಂದೆ ದಲಪತರಾಮರೂ ಹೆಸರಾಂತ ಕವಿ. ಐವತ್ತುವರ್ಷಕ್ಕೂ ಹೆಚ್ಚುಕಾಲ ಕಾವ್ಯರಚನೆಯಲ್ಲಿ ತೊಡಗಿದ್ದ ನಾನಾಲಾಲರು "ನನ್ನ ಗುರಿಗಳು ಎರಡೇ ಆಗಿದ್ದವು. ಪುನರುಜ್ಜೀವನದ ಸಂದೇಶವನ್ನು ಮನಗಾಣಿಸುವುದು ಮತ್ತು ನನ್ನ ಕಾವ್ಯದಲ್ಲಿ ಜಾಗತಿಕ ಮಟ್ಟದ ಮಾನದಂಡದ ಗುರಿಯನ್ನು ಸಾಧಿಸುವುದು" ಎಂದು ತಮ್ಮ ಉದ್ದೇಶವನ್ನು ಸ್ಪಷ್ಟಗೊಳಿಸಿದ್ದಾರೆ. ಗುಜರಾಥದ ಪ್ರಕೃತಿ ಸೌಂದರ್ಯವನ್ನು ಚಿತ್ರಿಸಿರುವ ಈ ಕವಿ, ಗುಜರಾಥರ ಜಾನಪದ ಗೀತೆಗಳ ಮಾಯೆಯನ್ನು ತಮ್ಮ ಕವಿತೆಗಳಲ್ಲಿ ಸೆರೆಹಿಡಿದಿದ್ದರು. "ಕಾವ್ಯವು ಯಾತನೆಯ ಅನುಭವದಿಂದ ಇಲ್ಲವೇ ತಲ್ಲಣಗೊಂಡ ಎದೆಯಿಂದ ಹೊಮ್ಮುವುದಿಲ್ಲವೆಂದು ನಾನಾಲಾಲರು ನಂಬಿದ್ದರು. ಆದರೆ ಅದು ಶಾಂತ ಅತ್ಮದ ಆನಂದದಿಂದ ಬರುವಂತಹುದು—ಸ್ಥಿರವಾದ ಸ್ಫುಟವಾದ ಪ್ರತಿಬಿಂಬವನ್ನು ಶಾಂತವಿದ್ದ ನೀರೇ ಹೊರತು ಕದಡಿದ ನೀರು ಮೂಡಿಸುವುದಿಲ್ಲ ಹೇಗೋ ಹಾಗೆ...ಇದು ಅವರ ಕಾವ್ಯದ ಕುರಿತು ದೃಢವಾದ ಮನವರಿಕೆಯ ಛಲವಿದ್ದಷ್ಟೇ ಅವರಿಗೂ ಮುಂಚಿನ (ಹಿಂದಿನ) ಗುಜರಾಥಿ ರೊಮ್ಯಾಂಟಿಕ್ ಕಾವ್ಯದ ಒಲವಿಗೆ ಅವರ ಪ್ರತಿಕ್ರಿಯೆಯೂ ಆಗಿತ್ತು. ಈ ಒಲ

ವೆಂದರೆ, ರೊಮ್ಯಾಂಟಿಕ್ ಕಾವ್ಯದ ಅವಿಭಾಜ್ಯ ಅಂಗವೋ ಎಂಬಂತೆ ಒಂದು ರಸ ರಮ್ಯ ವಿಷಣ್ಣತೆ ಖಿನ್ನತೆಯನ್ನು ಆ ರೊಮ್ಯಾಂಟಿಕ್ ಕಾವ್ಯವು ತನ್ನೊಡನೆ ತಂದಿತ್ತು" ಭಾವಗೀತೆ, ಮಹಾಕಾವ್ಯ, ನಾಟಕ ಹೀಗೆ ಸುಮಾರು ಒಂದು ನೂರು ಕೃತಿಗಳನ್ನು ರಚಿಸಿ 1946ರಲ್ಲಿ ತಮ್ಮ 69ನೆ ವಯಸ್ಸಿನಲ್ಲಿ ಮರಣ ಹೊಂದಿದ ನಾನಾಲಾಲರ ಬಗ್ಗೆ ಮಾಹಿತಿಗಳನ್ನು ಒದಗಿಸುವ ಈ ಪುಸ್ತಕದ ಅನುವಾದ ಸಮರ್ಥವಾಗಿದ್ದರೂ, ಸಾಹಿತ್ಯ ಅಕಾಡಮಿಯ ಮುಕ್ಕಾಲುಪಾಲು ಅನುವಾದಗಳ ಹಾಗೆಯೇ ಸುಗಮವಾಗಿ ಓದಿಸಿಕೊಳ್ಳುವುದಿಲ್ಲ.

'ಅರವತ್ತು ವರ್ಷಗಳು' ಎನ್ನುವ ಆತ್ಮಕಥೆಯನ್ನು ಡಿ. ಕೆಂಪರಾಜ ಅರಸರು ಬರೆದಿದ್ದಾರೆ. (ಇದರ ಪ್ರಕಟಣೆ 1979ರ ಕೊನೆಯಲ್ಲಿ) ಘಟಿಂಗ, ಪುಂಡ, ತಂಟೆ ಕೋರ ಎಂದು ಬಾಲ್ಯದ ದಿನಗಳಲ್ಲಿ ಕರೆಸಿಕೊಳ್ಳುತ್ತಿದ್ದ ಪ್ರತಿಭಾವಂತ ನಟ ಕೆಂಪರಾಜ ಅರಸರು ತಮ್ಮ ಬಾಲ್ಯ, ಯೌವ್ವನ, ಪ್ರೌಢಾವಸ್ಥೆಯ ದಿನಗಳನ್ನು ಚಿತ್ರಿಸಿದ್ದಾರೆ. ಈ ಆತ್ಮಚರಿತ್ರೆಯಲ್ಲಿ ತಮ್ಮ ವ್ಯಕ್ತಿತ್ವವನ್ನು ವಿನಾಕಾರಣ ಎಲ್ಲಿಯೂ ವೈಭವಿಸಿ ಕೊಳ್ಳುವುದಿಲ್ಲ. ತಮ್ಮ ಧ್ಯೇಯ ಧೋರಣೆ, ಸೋಲು ಗೆಲುವು, ಆದರ್ಶ, ಆಕಾಂಕ್ಷೆ ಗಳನ್ನು, ನೋವು, ನಲಿವುಗಳನ್ನು ಹಂಚಿಕೊಳ್ಳುವ ಈ ಕಥನದಲ್ಲಿ ಕನ್ನಡನಾಟಕ, ಕನ್ನಡ ಸಿನಿಮಾ, ಕರ್ನಾಟಕದ ರಾಜಕೀಯದ ಎಳೆಗಳೂ ಪ್ರಮುಖವಾಗಿರುವುದರಿಂದ ಈ ಪುಸ್ತಕಕ್ಕೆ ಚಾರಿತ್ರಿಕ ಮಹತ್ವವೂ ಇದೆ. ಮೊದಲ ಎರಡು ಅಧ್ಯಾಯಗಳಲ್ಲಿ ತಾವು ಕೇಳಿತಿಳಿದ ವಿಷಯಗಳನ್ನು ವರದಿಮಾಡುವಾಗ "ಊರಿನಲ್ಲಿದ್ದ ಇಲಿ ಹೆಗ್ಗಣ ಗಳು ಸತ್ತ್ವಂತೆ. ಸಾಂಕ್ರಾಮಿಕ ರೋಗ ಹರಡಿತಂತೆ ಅನೇಕ ಕುಟುಂಬಗಳು ನಾಶ ವಾದುವಂತೆ" ಎಂದು ವಾಕ್ಯ ವಾಕ್ಯಕ್ಕೂ 'ಅಂತೆ' 'ಅಂತೆ' ಎನ್ನುವುದು ಬೇಸರ ತರುವಷ್ಟಿದೆ. ಮೂರನೆಯ ಅಧ್ಯಾಯದಿಂದ ಆಚೆಗೆ ಈ ರೀತಿಯ ಶೈಲಿಯ ಏಕ ತಾನತೆ ಇಲ್ಲ. ಸನ್ನಿವೇಶಗಳನ್ನು ಮತ್ತು ಪಾತ್ರಗಳನ್ನು ಒಬ್ಬ ಕಾದಂಬರಿಕಾರ ನೋಡುವಷ್ಟು ವಸ್ತುನಿಷ್ಠವಾಗಿ ನೋಡುವ ಈ ಬರವಣಿಗೆ ಹೃದ್ಯವಾಗಿದೆ. 'ನಳ ದಮಯಂತಿ'ಯನ್ನು ಚಿತ್ರೀಕರಿಸುವಾಗ ಸುಪ್ರಸಿದ್ಧತಾರೆ ಭಾನುಮತಿ ನಡೆದುಕೊಂಡ ರೀತಿ, ದೇವರಾಜ ಅರಸರ ನಿಕಟಾನುವರ್ತಿಯ ಹಾಗೆ ಕೆ. ಕೆ. ಮೂರ್ತಿಗಳು ನಡೆದು ಕೊಳ್ಳುತ್ತಿದ್ದ ಪ್ರಸಂಗಗಳು, ದೇವರಾಜ ಅರಸರ ವಿರೋಧಿಗಳು ಕೆಂಪರಾಜಅರಸರ ಮೇಲೆ ನಡೆಸಿದ ಅಪಪ್ರಚಾರಗಳು ಮುಂತಾದ ಘಟನೆಗಳು ನಮ್ಮ ಕಾದಂಬರಿ ಕ್ಷೇತ್ರದಲ್ಲೂ ಕಾಣದಿದ್ದಂಥವುಗಳನ್ನು ಕೊಟ್ಟು ಸಾಹಿತ್ಯಕ್ಷೇತ್ರದ ವಸ್ತುವಿನ ವಿಸ್ತಾರ ವನ್ನು ಕೆಂಪರಾಜ ಅರಸರು ಹೆಚ್ಚಿಸಿದ್ದಾರೆ. ಕೆಂಪರಾಜ ಅರಸರು ಹಯನುಗಾರಿಕೆ, ಕೈಗಾರಿಕಾಕ್ಷೇತ್ರ, ಸೌಧರಚನೋದ್ಯಮಗಳಲ್ಲೂ ತೊಡಗಿದ್ದು ಅನೇಕರಿಗೆ ಗೊತ್ತಿಲ್ಲದ ವಿಷಯಗಳಾಗಿದ್ದವು. ಹೀಗೆ ಬಹುಮುಖ ವ್ಯಕ್ತಿತ್ವವುಳ್ಳ ತಮ್ಮ ಜೀವನ ಚರಿತ್ರೆ ಯನ್ನು ಕೊಟ್ಟಿರುವುದರಿಂದ ಕೆಂಪರಾಜ ಅರಸರು ಅಭಿನಂದನಾರ್ಹರಾಗಿದ್ದಾರೆ.

# ಪ್ರವಾಸ ಸಾಹಿತ್ಯ

**ಎಸ್. ವಿದ್ಯಾಶಂಕರ**

'ಸ್ವಪ್ನಲೋಕ'ವು ಬಿ. ಶ್ರೀಧರ ಅವರು ತಮ್ಮ ಪತ್ನಿಯೊಡನೆ ಕೈಗೊಂಡ ಅಮೆರಿಕದ ಪ್ರವಾಸಾನುಭವಗಳ ಮೊದಲ ಭಾಗ. ಕೃತಿಯ ಮೊದಲ ಐವತ್ತು ಪುಟಗಳು ಲೇಖಕರು ತಾವು ಪ್ರವಾಸ ಹೊರಟಾಗ ಎದುರಿಸಿದ ಅಡ್ಡಿ ಆತಂಕಗಳ ವಿವರಣೆಗೇ ಮೀಸಲಾಗಿದೆ. ಲೇಖಕರು ತಾವು ನೋಡಿದ ಪ್ರದೇಶಗಳ ಪ್ರಾಚೀನ ಇತಿಹಾಸ ಭೌಗೋಳಿಕ ವಿವರ ಇತ್ಯಾದಿಗಳನ್ನು ಸಂಕ್ಷಿಪ್ತವಾಗಿ ಕೊಟ್ಟಿರುವರು. ತಾವು ನೋಡಿದ ಎಲ್ಲ ಸ್ಥಳಗಳ ಸೊಗಸನ್ನು ಭಾವುಕವಾಗಿ ಹರ್ಷೋದ್ಗಾರಗಳ ಮೂಲಕ ವ್ಯಕ್ತಪಡಿಸಿರುವರು. ಇಲ್ಲೆಲ್ಲಾ ಧನ್ಯತಾಭಾವ ಎದ್ದುಕಾಣುತ್ತದೆ. ಅಮೆರಿಕನ್ನರ ಸಾಮಾಜಿಕ ಜೀವನವನ್ನು ಆಳವಾಗಿ ಅಭ್ಯಾಸಮಾಡಲು ಕಾಲಾವಕಾಶ ವಿಲ್ಲದ ಲೇಖಕರು ತಾವು ಕಂಡ ಕೆಲವು ಅತಿರೇಕಗಳನ್ನು ಸ್ವಾರಸ್ಯಕರವಾಗಿ ನಿರೂಪಿ ಸಿರುವರು. ಲಾಸ್‌ವೇಗಾಸ್‌ನ ಕಸಿನೋದ ಜೂಜುಕಟ್ಟೆಗಳಲ್ಲಿ ಇರುಳು ಹಗಲೆನ್ನದೆ ಸದಾ ಜೂಜಿನಲ್ಲಿ ಮೈಮರೆತಿರುವ ಅಬಾಲವೃದ್ಧರು; ಹಣಕೊಟ್ಟರೆ ಧಿಡೀರ್ ಮದುವೆ ಮಾಡಿಸುವ ವಿವಾಹ ವಿಚ್ಛೇದನ ಕೊಡಿಸುವ ಕಾರ್ಯಾಲಯಗಳು—ಇವುಗಳ ವರ್ಣನೆ ಆ ಸಾಮಾಜಿಕ ಜೀವನಕ್ಕೆ ಹಿಡಿದ ಕನ್ನಡಿಯಾಗಿದೆ. ಪ್ರವಾಸಿಯ ಆಸಕ್ತಿಗಳು, ಹವ್ಯಾಸಗಳು, ಒಲವುಗಳು ಅವನ ಪ್ರವಾಸ ಸಾಹಿತ್ಯದಲ್ಲಿ ಬಿಂಬಿತವಾಗುವುದುಂಟು. ಇವುಗಳೇ ಒಮ್ಮೊಮ್ಮೆ ಪ್ರವಾಸ ಸಾಹಿತ್ಯದ ಶ್ರೇಷ್ಠತೆಯನ್ನು ನಿರ್ಣಯಿಸುವ ಸಾಧನಗಳಾಗುತ್ತವೆ. ಈ ಮಾತು 'ಸ್ವಪ್ನಲೋಕ'ಕ್ಕೂ ಅನ್ವಯಿಸುತ್ತದೆ. ಇಲ್ಲಿ ಲೇಖಕರು ಲಾಸ್‌ವೇಗಾಸ್‌ನಲ್ಲಿ ತಾವು ನೋಡಿದ ಹಲವಾರು ಹೋಟಲುಗಳ ವೈಭವವನ್ನು, ವಿಶೇಷವನ್ನು, ಗುಣಮಟ್ಟವನ್ನು ಉತ್ಸಾಹದಿಂದ ಬಣ್ಣಿಸಿರುವರು (ಪು. 159–161). 'ದೇವರ ಅನುಗ್ರಹವಿದ್ದರೆ ಮತ್ತೊಮ್ಮೆ ಲಾಸ್‌ವೇಗಾಸ್‌ಗೆ ಬರಲೇಬೇಕು' ಎಂಬ ಅವರ ಹುರುಪು ನೋಡಿ ನಗುಬರುತ್ತದೆ. ನೋಡಿದ್ದನ್ನೆಲ್ಲಾ ವಿಸ್ತಾರವಾಗಿ ಬಣ್ಣಿಸುವ ಅವರ ಒಲವು ಯೂನಿವರ್ಸಲ್ ಸ್ಟುಡಿಯೋ ಹಾಗೂ ಡಿಸ್ನಿಲ್ಯಾಂಡ್‌ಗಳ ವರ್ಣನೆಯಲ್ಲಿ ವ್ಯಕ್ತವಾಗಿದೆ (ಪು. 164–171 ; ಪು. 175–188). ಲೇಖಕರು ಗ್ರಾಂಡ್ ಕೆನ್ಯಾನ್, ಓಕ್ಲಹಾಮಾ, ಆರ್ಲಿಂಗ್‌ಟನ್‌ನ ಲಿಂಕನ್ ಸ್ಮಾರಕ, ಶ್ವೇತಭವನ, ಪ್ಯಾರಿಸ್, ಲಂಡನ್–ಇವುಗಳ ಬಗೆಗೆ ಸಾಕಷ್ಟು ವಿವರಗಳನ್ನು ಕಲೆಹಾಕಿ ಹೇಳಿರುವರು.

ನೋಡಿದ ಮಾತ್ರಕ್ಕೇ ಕೈಗೆತ್ತಿಕೊಂಡು ಓದಬೇಕೆಂಬ ಆಕರ್ಷಣೆ 'ಸ್ವಪ್ನಲೋಕ'ದ ಮುದ್ರಣ ವಿನ್ಯಾಸದಲ್ಲಿದೆ. ಅಸಂಖ್ಯ ಕಪ್ಪು-ಬಿಳುಪು ಹಾಗೂ ಬಣ್ಣದ ಚಿತ್ರಗಳಿಂದ ಕೂಡಿ ಇಷ್ಟು ಅಂದವಾಗಿ ಬಂದಿರುವ ಪ್ರವಾಸ ಕಥನ ಹೆಸರಿಸಲಿಕ್ಕೆ ಕನ್ನಡದಲ್ಲಿ ಮತ್ತೊಂದಿಲ್ಲ. ಪ್ರೇಕ್ಷಣೀಯ ಸ್ಥಳದ ಬಣ್ಣದ ಚಿತ್ರಗಳು ಶಿವಕಾಶಿಯಲ್ಲಿ ಮುದ್ರಣ ಗೊಂಡು ಪುಸ್ತಕಕ್ಕೆ ಸೇರ್ಪಡೆಯಾಗಿರುವುದು ಕೃತಿಗೆ ಒಂದು ಹೊಸ ಶೋಭೆಯನ್ನು ತಂದಿದೆ. (ವರ್ಣಚಿತ್ರಗಳ ಆಯ್ಕೆಯಲ್ಲಿ ಇನ್ನಷ್ಟು ಪರಿಷ್ಕರಣ ಮಾಡಬಹುದಿತ್ತು; ಕಲಾತ್ಮಕ ಚಿತ್ರಗಳಿಗೇ ಹೆಚ್ಚಿನ ಪ್ರಾಧಾನ್ಯ ಕೊಡಬಹುದಿತ್ತು.) ಲೇಖಕರಲ್ಲಿ ಟೂರಿಸ್ಟ್ ಮನೋಭಾವ ಎದ್ದು ಕಾಣುತ್ತದೆ. ನೋಡಿದ್ದನ್ನೆಲ್ಲಾ ವರ್ಣಿಸುವ ಉತ್ಸಾಹಕ್ಕೆ ಸ್ವಲ್ಪ ಕಡಿವಾಣ ಹಾಕಬಹುದಾಗಿತ್ತು. ಉತ್ಸಾಹದಲ್ಲಿ ತಾವು ತಂಗಿದ್ದ ಹೋಟೆಲು, ಸವಿದ ತಿಂಡಿ-ತೀರ್ಥ, ನೋಡಿದ ನೋಟ-ಇವೆಲ್ಲವನ್ನೂ ನಿರೂಪಿಸುವರು. ಅಷ್ಟಕ್ಕೇ ಅವರ ಆಸಕ್ತಿ ಮೀಸಲಾಗುತ್ತದೆ. ಬಹುಶಃ ಈ ಒಲವು-ನಿಲುವು ಪ್ರವಾಸ ಕಥನ ವನ್ನು ವರದಿ ರೂಪಕ್ಕೆ ತಂದು ನಿಲ್ಲಿಸಿಬಿಡುತ್ತದೆ. ಒಳ್ಳೆಯ ಕಾಗದ, ಸೊಗಸಾದ ಮುದ್ರಣ, ಅಂದವಾದ ವರ್ಣಚಿತ್ರಗಳು–ಇವುಗಳು ಈ ಪ್ರವಾಸ ಕಥನದ ಪುಟ ತಿರುವಿಹಾಕಿಸುವ ಪ್ರೇರಕ ಶಕ್ತಿಗಳಾಗಿವೆ.

'ವೈದ್ಯನ ವಿದೇಶ ಪ್ರವಾಸ'ವು ಸುಪ್ರಸಿದ್ಧ ಮಕ್ಕಳ ತಜ್ಞರಾದ ಡಾ॥ ಜಿ. ಗೋಪಾಲ್‌ರವರು ಎರಡು ಬಾರಿ ಕೈಗೊಂಡ ವಿದೇಶಯಾತ್ರೆಯ ಅನುಭವ ಕಥನ ವಾಗಿದೆ. 1968ರಲ್ಲಿ ಎಡಿನ್‌ಬರೋ ಮತ್ತು ಲಂಡನ್ನಿನಲ್ಲಿ ಮಕ್ಕಳ ಶಸ್ತ್ರಚಿಕಿತ್ಸೆ ಕಲಿಯಲು ಹೋಗಿದ್ದಾಗ ಹಾಗೂ 1977ರಲ್ಲಿ ಯೂರೋಪಿಗೆ ಹೋಗಿದ್ದಾಗ ವೈದ್ಯನೊಬ್ಬನಿಗೆ ಆದ ವಿಶಿಷ್ಟ ಅನುಭವಗಳು ಇಲ್ಲಿ ನಿರೂಪಿತವಾಗಿವೆ. ದೀರ್ಘ ಕಾಲದ ನಂತರ ಈ ಕೃತಿ ಬೆಳಕು ಕಾಣುತ್ತಿದೆ. 'ಹಳೆಯ ಡೈರಿ ಹಾಗೂ ಲಂಡನ್ನಿನಲ್ಲಿ ಗುರುತು ಹಾಕಿಕೊಂಡಿದ್ದ ಕೆಲವು ಅಂಕಿ ಅಂಶಗಳ ಆಧಾರದ ಮೇಲೆ ಈ ಪುಸ್ತಕ ಬರೆದಿದ್ದೇನೆ, ಎಂದು ಲೇಖಕರೇ ಹೇಳಿಕೊಂಡಿರುವರು.

ತಮ್ಮ ವೃತ್ತಿಗೆ ಹೊಂದಿಕೊಂಡಂತೆ ಅನುಭವಗಳನ್ನು ಇಲ್ಲಿ ಲೇಖಕರು ದಾಖಲಿಸಿರುವರು. ತಾವು ಕಂಡ ಭಾರತೀಯ ಹಾಗೂ ವಿದೇಶೀ ಮಿತ್ರರ ಗುಣಾವಲೋಕನವನ್ನೂ ಲೇಖಕರು ಇಲ್ಲಿ ಮಾಡಿರುವರು. ಲೇಖಕರ ಲವಲವಿಕೆಯ ಶೈಲಿ ಪುಟ್ಟ ಪುಟ್ಟ ವಾಕ್ಯಗಳನ್ನು ಮೈದೋರಿದೆ. ನವಿರಾದ ಹಾಸ್ಯ ಬರವಣಿಗೆ ಯಲ್ಲಿ ತೇಲಿಬರುವುದರಿಂದ ಪ್ರವಾಸಾನುಭವ ಸುಲಲಿತವಾಗಿ ಓದಿಸಿಕೊಂಡು ಹೋಗು ತ್ತದೆ. ವಿದೇಶಗಳಲ್ಲಿಯೂ ಕಾಣಬರುವ ವೃತ್ತಿಮಾತ್ಸರ್ಯ, ಡಾಕ್ಟರುಗಳ ಅಹಮ್ಮಿಕೆ, ಸಣ್ಣತನಗಳು ಘಟನೆಗಳ ಮೂಲಕ ಬಣ್ಣನೆಗೊಂಡಿವೆ. ಜ್ಞಾನದಿಂದ ಸರಸ ಸಜ್ಜನಿಕೆ ಗಳಿಂದ ಮನ್ನಣೆಪಡೆದ ವಿದೇಶೀ ವೈದ್ಯರ ಬಗೆಗೆ ತಮಗಿರುವ ಆಳವಾದ ಗೌರವವನ್ನು ಲೇಖಕರು ಹೇಳಿರುವರು (ಪು. 53–54) ಆರನೇ ಬಾರಿ ಎಂ. ಆರ್.ಸಿ.ಪಿ. ಮೊದಲ

ಭಾಗದ ಪರೀಕ್ಷೆಗೆ ಕುಳಿತ ಡಾ॥ ಪಾಶ; ವಿದೇಶೀ ಡಿಗ್ರಿಗಳಿಲ್ಲದೆ ಭಾರತದಲ್ಲಿ ವೈದ್ಯನಿಗೆ ಮಾನ್ಯತೆಯಿಲ್ಲ, ಹಣಗಳಿಕೆ ಸಾಧ್ಯವಿಲ್ಲವೆಂದು ಭಾವಿಸಿ ಡಿಗ್ರಿ ಪಡೆಯಲೆಂದು ಬಂದು ಮೂರು ವರ್ಷಗಳಿಂದ ಸತತವಾಗಿ ಎಫ್.ಆರ್.ಸಿ.ಎಸ್. ಪರೀಕ್ಷೆಗೆ ಕುಳಿತ ಡಾ॥ ಎಸ್. ಎಸ್. ದೇಶಪಾಂಡೆ, ಗುಂಡಬಾವಿ; ಹಿಂದಿ ಪಿಎಚ್.ಡಿ. ಮಾಡಲು ಪಂಜಾಬಿನಿಂದ ಬಂದ, ಬಾಟಾ ಶೂ ಕಂಪನಿಯಲ್ಲಿ ಕಲಿಯಲು ವಿದ್ಯಾರ್ಥಿವೇತನ ಪಡೆದು ಉತ್ತರ ಇಂಡಿಯಾದಿಂದ ಬಂದ ಮಿತ್ರರು; ಅಪ್ಲೈಡ್ ಸೈನ್ಸ್ ಲ್ಯಾಬೊರೇಟರಿಯೊಂದರಲ್ಲಿ ಕೆಲಸ ಮಾಡಲು ಮದ್ರಾಸಿನಿಂದ ಲಂಡನ್ನಿಗೆ ಬಂದು ತೃಪ್ತಿಕರವಾದ ಕೆಲಸ ಸಿಗದೆ ಕಣ್ಣೀರು ಕರೆಯುವ ರಾಘವನ್—ಹೀಗೆ ಭಾರತದಿಂದ ವಲಸೆ ಬಂದವರ ನೋವಿನ ಜೀವನ ಚಿತ್ರಗಳು ಇಲ್ಲಿ ಜೀವಂತವಾಗಿ ರೂಪುಗೊಂಡಿವೆ. ಪಾಶ್ಚಾತ್ಯ ದೇಶಗಳಲ್ಲಿನ ವೈದ್ಯಕೀಯ ಸೇವೆ ಹಾಗೂ ಭಾರತದಲ್ಲಿನ ಸೇವಾವ್ಯವಸ್ಥೆಯ ಬಗೆಗೆ ಸಮತೂಕದ ವಿಮರ್ಶೆಯನ್ನು ಲೇಖಕರು ಮಾಡಿರುವರು. ನಮ್ಮಲ್ಲಿರುವ ಪ್ರಖ್ಯಾತ ವೈದ್ಯ ಸಂಸ್ಥೆಗಳನ್ನು ಲಂಡನ್, ಎಡಿನ್‌ಬರೋ ಆಸ್ಪತ್ರೆಗಳೊಂದಿಗೆ ಹೋಲಿಸಿದರೆ ತೀರ ವ್ಯತ್ಯಾಸ ಕಾಣದು ಎನ್ನುವ ಲೇಖಕರು ಪ್ರತ್ಯಕ್ಷ ನಿದರ್ಶನವೊಂದರ ಮೂಲಕ ತಮ್ಮ ಅಭಿಪ್ರಾಯವನ್ನು ಪುಷ್ಟೀಕರಿಸಿರುವರು. ಬಾಂಬೆಯಿಂದ ಒಂದು ಮಗುವನ್ನು ಲಂಡನ್ ಆಸ್ಪತ್ರೆಗೆ ಕರೆತಂದಿದ್ದರು. ಅದಕ್ಕೆ 6 ವರ್ಷ. ಅದು ಕರುಳಿನ ಕ್ಯಾನ್ಸರ್‌ನಿಂದ ನರಳುತ್ತಿತ್ತು. 'ನೀವೇನು ಮಾಡುತ್ತಿದ್ದೀರಿ ಈ ಮಗು ನಿಮ್ಮಲ್ಲಿ ಬಂದಿದ್ದರೆ?' ಪ್ರೊಫೆಸರ್ ಕೇಳಿದರು. 'ಕ್ಯಾನ್ಸರ್ ಆದ ಭಾಗವನ್ನು ತೆಗೆದು ಹಾಕುವುದು. ಕರೆಂಟ್ ಮತ್ತು ಆಂಟಿಕ್ಯಾನ್ಸರ್ ಔಷಧ ಕೊಡುವುದು' ಎಂದು ಅದಕ್ಕೆ ಲೇಖಕರು ಉತ್ತರಿಸಿದರು. 'ನಾನು ಮಾಡುವುದೂ ಅದೇ ಅದಕ್ಕೇಕೆ ಬಾಂಬೆಯಿಂದ ಇಲ್ಲಿಗೆ ಬರಬೇಕು? ಬೇಕಿಲ್ಲ' ಎಂದು ಪ್ರೊಫೆಸರರು ಉತ್ತರಿಸಿದರಂತೆ!

ನಮ್ಮ ದೇಶದ ಬಡತನ, ಅಜ್ಞಾನ, ಜಾತೀಯತೆ, ರಾಜಕೀಯ ಇವೆಲ್ಲವುಗಳ ಬಗೆಗೂ ಅಲ್ಲಲ್ಲಿ ಲೇಖಕರು ತಮ್ಮದೇ ಆದ ಅನಿಸಿಕೆ ವ್ಯಕ್ತಪಡಿಸಿರುವರು. ದಲಿತರಾದ ಲೇಖಕರಿಗೆ ಇಂದಿರಾಗಾಂಧಿ, 20 ಅಂಶ ಕಾರ್ಯಕ್ರಮಗಳ ಬಗೆಗೆ ಮೆಚ್ಚುಗೆ. ಒಂದೆರಡು ಕಡೆ ಅದನ್ನು ಪ್ರಕಟಪಡಿಸಿಯೂ ಇರುವರು. ಒಟ್ಟಿನಲ್ಲಿ ವೈದ್ಯರೊಬ್ಬರು ತಮ್ಮದೇ ವೃತ್ತಿಯ ಜನರ ನಡುವೆ ವಿದೇಶದಲ್ಲಿ ಕಳೆದ ಹಲವಾರು ದಿವಸಗಳ ನೆನಪು ಇಲ್ಲಿ ಪ್ರಧಾನವಾಗಿ ಬಂದಿದೆ. ಇಲ್ಲಿ ನೋಟಕ್ಕಿಂತ ಜನರ ನಡುವೆ ಬೆರೆತು, ಅವರ ಹಾಗೂ ತಮ್ಮ ಸುಖದುಃಖಗಳ ವಿನಿಮಯ ಮಾಡಿಕೊಂಡು, ಬದುಕನ್ನು ಜನಮನವನ್ನು ತಿಳಿಯಹೊರಟ ವೈದ್ಯರೊಬ್ಬರ ಪ್ರಾಮಾಣಿಕಪ್ರಯತ್ನದ ಫಲವನ್ನು ವಿಶೇಷವಾಗಿ ಕಾಣಬಹುದು.

ಹೊ. ಶ್ರೀನಿವಾಸಯ್ಯನವರ 'ಶ್ರೀಲಂಕಾ' ಒಂದು ಪುಟ್ಟ ಪ್ರವಾಸ ಕಥನ. ಎರಡು ಬಾರಿ ಕಾರ್ಯಾರ್ಥ ಶ್ರೀಲಂಕಾಕ್ಕೆ ಪ್ರವಾಸಕೈಗೊಂಡಿದ್ದ ಲೇಖಕರು ಅಲ್ಲಿನ

ಜನಜೀವನ, ಕಲೆ, ಆಹಾರ, ಭಾಷೆ, ಮತ ಮತ್ತು ಧರ್ಮ, ವ್ಯಾಪಾರ ಮತ್ತು ಕೈಗಾರಿಕೆ ಇತ್ಯಾದಿ ಎಲ್ಲ ಮಾಹಿತಿಗಳನ್ನು ಈ ಕಿರುಕೃತಿಯಲ್ಲಿ ಒದಗಿಸುವರು. ಶ್ರೀಲಂಕಾದ ಪ್ರಾಚೀನ ಇತಿಹಾಸವನ್ನು ಸಂಕ್ಷಿಪ್ತವಾಗಿ ತಿಳಿಯಪಡಿಸಿರುವರು. ಮೊದಲಿಗೆ ಪ್ರವಾಸ ಪ್ರಾರಂಭಗೊಂಡ ವಿವರಗಳು ಬರುತ್ತವೆ. ಶ್ರೀಲಂಕಾದ ಸಮುದ್ರದ ತೀರದಲ್ಲೂ ತಲೆಹಿಡುಕನೊಬ್ಬ ಗಂಟುಬಿದ್ದು ಲೇಖಕರನ್ನು ಕಾಡಿದ ಅನುಭವ ಅನಗತ್ಯವಾಗಿ ಪ್ರಸ್ತಾಪಿತವಾಗಿದೆ (ಪು. 13–19). ಕೊನೆಯಲ್ಲಿ ಶ್ರೀಲಂಕಾದಿಂದ ಹಿಂತಿರುಗುವಾಗ ತಮಗಾದ ಕಹಿ ಅನುಭವವನ್ನು ಲೇಖಕರು ಹೇಳಿ ಕೊಂಡಿರುವರು. ಇದೂ ಸಹಾ ಅನಗತ್ಯ. ಲೇಖಕರು ತಮ್ಮ 'ಕೊನೆಯ ಮಾತು' ಭಾಗದಲ್ಲಿ ಶ್ರೀಲಂಕೆಯ ಬಗೆಗೆ ಕನ್ನಡದಲ್ಲಿ ಪುಸ್ತಕಗಳಿಲ್ಲ ಎಂದಿರುವರು. ಕೆ. ವಿಶ್ವನಾಥ ರೈ ರವರು 'ಲಂಕಾದರ್ಶನ' ಎಂಬ ಪ್ರವಾಸ ಕಥನವನ್ನು 1972ರಲ್ಲಿ ಬರೆದಿರುವರು. ದೇ. ಜ. ಗೌರವರು 'ಏಸು ವಿಭೀಷಣರ ನಾಡಿನಲ್ಲಿ' ಎಂಬ ಪ್ರವಾಸ ಸಾಹಿತ್ಯವನ್ನು 1978ರಲ್ಲಿ ರಚಿಸಿರುವರು. ಈ ಎರಡೂ ಪುಸ್ತಕಗಳು ಶ್ರೀಲಂಕೆಯ ಬಗೆಗೆ ಸಾಕಷ್ಟು ವಿವರಗಳನ್ನು ನೀಡಿವೆ. ಶ್ರೀಲಂಕಾವನ್ನು ಕುರಿತ ಮೂರನೆಯ ಕೃತಿಯಾದ ಇದರಲ್ಲಿ ಹೊಸದೇನೂ ಕಾಣಬರುವುದಿಲ್ಲ.

# ಗ್ರಂಥ ಸಂಪಾದನೆ

ಎಸ್. ವಿದ್ಯಾಶಂಕರ

ಈ ವರ್ಷದ ಸಮೀಕ್ಷೆಗೆ ಬಂದ ಕೃತಿಗಳಲ್ಲಿ ಜೈನ 1, ಬ್ರಾಹ್ಮಣ 4 ವೀರಶೈವ. 9 ಹೀಗೆ ಒಟ್ಟು 14 ಕೃತಿಗಳು ಬಂದಿವೆ. ಇವುಗಳಲ್ಲಿ 5 ಕೃತಿಗಳನ್ನು ಮೈಸೂರು ವಿಶ್ವವಿದ್ಯಾಲಯವೂ, ತಲಾ ಒಂದೊಂದು ಕೃತಿಯನ್ನು ಬೆಂಗಳೂರು ವಿಶ್ವವಿದ್ಯಾಲಯ ಹಾಗೂ ಕನ್ನಡ ಸಾಹಿತ್ಯ ಪರಿಷತ್ತೂ ಉಳಿದವನ್ನು ಖಾಸಗಿಯವರೂ ಪ್ರಕಟಪಡಿಸಿರುವರು. ಪರಮಾರ್ಥ, ಆರಾಧ್ಯ ಚಾರಿತ್ರ, ಚಂದ್ರಪ್ರಭ ಚರಿತೆ, ವಿಷ್ಣುಪುರಾಣ, ಶ್ರೀವಾದಿರಾಜರ ಕೃತಿಗಳು—ಇವು ಗಾತ್ರದಲ್ಲಿ ದೊಡ್ಡವು. ಮೇಲಾಗಿ ವಿಶ್ವವಿದ್ಯಾಲಯದ ಪ್ರಕಟಣೆಗಳು. ಇಂತಹ ಕೃತಿಗಳನ್ನು ಖಾಸಗಿಯವರು ಹೊರತರುವುದು ಇಂದಿನ ದಿನಗಳಲ್ಲಿ ಲಾಭದಾಯಕವಲ್ಲ. ವಿಶ್ವವಿದ್ಯಾಲಯ ಇವನ್ನು ಹೊರತಂದದ್ದರಿಂದ ಇವಕ್ಕೆ ಬೆಲೆ ಬಂದಿದೆ. ವಿಶ್ವವಿದ್ಯಾಲಯಕ್ಕೂ ಇವುಗಳ ಪ್ರಕಟಣೆಯಿಂದ ಗೌರವ ಸಂದಾಯವಾಗಿದೆ. ಖಾಸಗಿಯವರ ಪ್ರಕಟಣೆಗಳಲ್ಲಿ ಕೆಳದಿ ವೆಂಕಣ್ಣನ ಕೃತಿಗಳು, ಆದಯ್ಯನ ಲಘು ಕೃತಿಗಳು ಹಾಗೂ ಅಂಬಿಗರ ಚೌಡಯ್ಯನ ವಚನಗಳು, ಆಕರ್ಷಕವಾಗಿ ಹೊರಬಂದಿವೆ. ಖಾಸಗಿ ಪ್ರಕಟಣೆಯಲ್ಲಿ ಅಖಂಡೇಶ್ವರ ವಚನಗಳು ಗಾತ್ರದಲ್ಲಿ ದೊಡ್ಡದು. ಆದರೆ, ಸಂಪಾದನೆಯಲ್ಲಿ ಹೊಸದು ಏನೂ ಕಾಣಬರುವುದಿಲ್ಲ. ಟಿ. ಎಸ್. ಸತ್ಯನಾಥ್‌ರವರು ತಮ್ಮ ಮೊದಲ ಸಂಪಾದಿತ ಕೃತಿಯಲ್ಲೇ ಭರವಸೆ ವ್ಯಕ್ತಪಡಿಸಿರುವರು.

ದೊಡ್ಡಯ್ಯನ ಚಂದ್ರಪ್ರಭ ಚರಿತೆಯನ್ನು ಜಿ. ಜಿ. ಮಂಜುನಾಥನ್‌ರವರು ಸಂಪಾದಿಸಿರುವರು. ಚಂದ್ರಪ್ರಭನು ತೀರ್ಥಂಕರರಲ್ಲಿ ಎಂಟನೆಯವನು. ಇವನ ಕಥೆ ಗುಣಭದ್ರಾಚಾರ್ಯರ ಉತ್ತರಪುರಾಣದಲ್ಲಿ ಬಂದಿದೆ. ವಿಜಯಕವೀಂದ್ರನ ಚಂದ್ರಪ್ರಭ ಪುರಾಣವನ್ನು ದೊಡ್ಡಯ್ಯನು ಉಲ್ಲೇಖಿಸಿರುವನು (1.32) ಈ ವಿಜಯನು ಶ್ರೀವಿಜಯನಾಗಿರಬಹುದೆ? ಎಂಬ ಸಂದೇಹ ಬರುತ್ತದೆ. ಶ್ರೀವಿಜಯನ ಚಂದ್ರಪ್ರಭ ಚರಿತೆ ಇಂದು ಅನುಪಲಬ್ಧ. ಕನ್ನಡದಲ್ಲಿ ಉಪಲಬ್ಧ ಚಂದ್ರಪ್ರಭ ಚರಿತೆಗಳಲ್ಲಿ ಚಾವುಂಡರಾಯನ 'ತ್ರಿಷಷ್ಟಿ ಶಲಾಕಾಪುರುಷ ಚರಿತ'ದ ಚಂದ್ರಪ್ರಭ ಚರಿತೆಯೇ ಮೊದಲನೆಯದು. ಇದು ಉತ್ತರ ಪುರಾಣದ ಸಂಗ್ರಹಾನುವಾದ. ಎರಡನೆಯದು ಅಗ್ಗಳನ ಚಂದ್ರಪ್ರಭ ಚಂಪು. ಪುಟ್ಟ ಕಥಾವಸ್ತುವುಳ್ಳ ಚಂದ್ರಪ್ರಭ ಚರಿತೆಯನ್ನು ವರ್ಣನೆಗಳಿಂದ ಕವಿ ವಿಸ್ತರಿಸಿರುವನು. ರತ್ನಾಕರವರ್ಣಿಯ ನಂತರ ದೊಡ್ಡ ಪ್ರಮಾಣದಲ್ಲಿ ಸೌಂಗತ್ಯಕೃತಿಯನ್ನು ವಿರಚಿಸಿದವನು ದೊಡ್ಡಯ್ಯ.

ಚಂದ್ರಪ್ರಭ ಚರಿತೆಯನ್ನು ಐದು ಹಸ್ತಪ್ರತಿಗಳ ಸಹಾಯದಿಂದ ಪರಿಷ್ಕರಿಸಲಾಗಿದೆ. ಸಂಪಾದಕರು ಆಂತರಿಕ ಆಧಾರಗಳ ಮೇಲೆ ಕವಿಚರಿತೆಕಾರರು ಕೊಡುವ ಕವಿಯ ಕಾಲವನ್ನು (ಸು. 1550) ಅಲ್ಲಗಳೆದು ಕ್ರಿ.ಶ. ಸು. 1620 ಎಂದಿರುವರು. ಇದನ್ನು ಒಪ್ಪಬಹುದಾಗಿದೆ. ದೊಡ್ಡಯ್ಯನು ಅಗ್ಗಳನಿಂದ ಪ್ರಭಾವಿತನಾಗಿದ್ದರೂ ಅದನ್ನು ನೇರವಾಗಿ ಹೇಳಿಕೊಂಡಿಲ್ಲ. ಸಂಪಾದಕರು "ವಸ್ತು ಮತ್ತು ಭಾಷೆಯ ದೃಷ್ಟಿಯಿಂದ ಅಗ್ಗಳ ಮತ್ತು ದೊಡ್ಡಯ್ಯನ ಕೃತಿಗಳ ತೌಲನಿಕ ಅಭ್ಯಾಸ ನಡೆಸಿದ ಓದುಗನಿಗೆ ದೊಡ್ಡಯ್ಯ ಅನಾಮತ್ತು ಅಗ್ಗಳನನ್ನು ಅನುಸರಿಸಿರುವುದು ಅರಿವಾಗುತ್ತದೆ" ಎಂದಿರುವರು (ಪೀಠಿಕೆ, ಪು. 34) ಕೃತಿಯ ಕಥಾಸಾರ, ವಿಮರ್ಶೆ, ಕಾವ್ಯ ಸಮೀಕ್ಷೆಗಳು ಸಹೃದಯಪರವಾಗಿದೆ. ಅನುಬಂಧದಲ್ಲಿ ಚಂದ್ರಪ್ರಭನನ್ನು ಕುರಿತು ಬೇರೆ ಬೇರೆ ಕವಿಗಳು ರಚಿಸಿರುವ ಸ್ತುತಿಮಾಲಿಕೆಗಳನ್ನು ಕೊಡಲಾಗಿದೆ. ಪಾರಿಭಾಷಿಕ ಅರ್ಥಕೋಶ ಹಾಗೂ ಅರ್ಥಕೋಶಗಳು ಕೃತಿಯನ್ನು ಓದುವವರಿಗೆ ಸಾಕಷ್ಟು ನೆರವು ನೀಡುತ್ತವೆ. ಕೊನೆಯಲ್ಲಿ ಅಗ್ಗಳ ಹಾಗೂ ದೊಡ್ಡಯ್ಯರಲ್ಲಿ ಬರುವ ಸಂವಾದಿ ಪದ್ಯಗಳ ವಿವರಗಳನ್ನು ಕೊಡಲಾಗಿದೆ. ಒಳ್ಳೆಯ ಪಾಠಗಳಿಂದ ಕೂಡಿದ 'ಚಂದ್ರಪ್ರಭ ಚರಿತೆ' ಈ ವರ್ಷದ ಒಳ್ಳೆಯ ಸಂಪಾದಿತ ಕೃತಿಗಳಲ್ಲಿ ಒಂದಾಗಿದೆ.

ಚಿಕುಪಾಧ್ಯಾಯನ ವಿಷ್ಣುಪುರಾಣಂನ ಉತ್ತಾರಾರ್ಧ ಭಾಗವನ್ನು ವಿದ್ವಾನ್ ಬಿ. ವಿ. ನರಸಿಂಹಾಚಾರ್ಯ ಅವರು ಸಂಪಾದಿಸಿರುವರು. ಸಂಸ್ಕೃತ ವಿಷ್ಣುಪುರಾಣವನ್ನು ಚಿಕುಪಾಧ್ಯಾಯನು ಅನುವದಿಸಿರುವನಾದರೂ ಎಷ್ಟೋ ವೇಳೆ ಮೂಲವನ್ನು ವಿಸ್ತರಿಸಿರುವನು. ವಿಶೇಷವಾಗಿ ಕೃತಿಯ ಐದನೆಯ ಅಂಶದಲ್ಲಿ ಇದನ್ನು ನಾವು ನೋಡಬಹುದು. ಚಿಕುಪಾಧ್ಯಾಯ ಸಂಸ್ಕೃತ-ಕನ್ನಡಗಳೆರಡರಲ್ಲೂ ಪ್ರತಿಭಾನ್ವಿತ ಕವಿ. ಈತ ಅನೇಕ ಕೃತಿಗಳನ್ನು ರಚಿಸಿದ್ದು, ವಿಷ್ಣುಪುರಾಣವನ್ನು 1691ರಲ್ಲಿ ಬರೆದಂತೆ ತಿಳಿದುಬರುತ್ತದೆ. ಇವನ ಕೃತಿಗಳಲ್ಲಿ ಶ್ರೀವೈಷ್ಣವ ಮತತತ್ತ್ವಗಳು ಪ್ರಧಾನವಾಗಿ ಪ್ರಸ್ತಾಪಿತವಾಗಿವೆ. 1971ರಲ್ಲಿ 'ವಿಷ್ಣುಪುರಾಣಂ'ನ ಮೊದಲ ಭಾಗ ಪ್ರಕಟವಾಗಿದ್ದು, ಇದೀಗ ಉತ್ತರಾರ್ಧ ಪ್ರಕಟವಾಗುತ್ತಿದೆ. ಚಿಕುಪಾಧ್ಯಾಯನ ವಿಷ್ಣುಪುರಾಣವನ್ನು ಸಮಗ್ರರೂಪದಲ್ಲಿ ಅಭ್ಯಾಸಮಾಡುವವರಿಗೆ ಅದು ಹೆಚ್ಚಿನ ನೆರವು ನೀಡುತ್ತದೆ. ಕೊನೆಯಲ್ಲಿ ಪದ್ಯಗಳ ಅಕಾರಾದಿ, ಕಠಿಣ ಪದಕೋಶ ಅಗತ್ಯವಾಗಿ ಸೇರ್ಪಡೆಯಾಗಬೇಕಿತ್ತು.

ಹರಿದಾಸ ಸಾಹಿತ್ಯದ ಶಾಸ್ತ್ರೀಯ ಆವೃತ್ತಿಯ ಯೋಜನೆಯ ಆಶ್ರಯದಲ್ಲಿ ಟಿ. ಎನ್. ನಾಗರತ್ನ ಅವರು ಸಂಪಾದಿಸಿರುವ ಶ್ರೀವಾದಿರಾಜರ ಕೃತಿಗಳು ಪ್ರಕಟವಾಗಿದೆ. ಹರಿದಾಸ ಸಾಹಿತ್ಯವನ್ನು ಬೆಳೆಸಿದ ಯತಿಶ್ರೇಷ್ಠರಲ್ಲಿ ಶ್ರೀವಾದಿರಾಜರೂ ಒಬ್ಬರು. ಅವರು ತಮ್ಮ ಎಂಟನೆಯ ವಯಸ್ಸಿನಲ್ಲೇ ವಿರಕ್ತರಾಗಿ ಪಾರಮಾರ್ಥಿಕ ಲೋಕದಲ್ಲಿ ಬೆಳೆದರು. ಎಲ್ಲರಂತೆ ಅವರೂ ಹರಿಭಕ್ತರಾಗಿ ಪರಮಾತ್ಮನ ಪಾದಾರ

ವಿಂದಗಳನ್ನು ಧ್ಯಾನಿಸುತ್ತಾ ಸಾಧಕ ಜೀವನದಲ್ಲಿ ಅವರು ನಡೆಸಿದ ಅಂತರಂಗದ ಜಿಜ್ಞಾಸೆ ಅವರ ಕೀರ್ತನೆಗಳಲ್ಲಿ ಕಾಣಬಹುದು. ಅವರ ಕೀರ್ತನೆಗಳಲ್ಲಿ ಬಹು ಪಾಲು ಸ್ತುತಿರೂಪವಾಗಿದೆ. ಬಾಲಗೋಪಾಲನ ಲೀಲೆಗಳು, ಗೋಪಿಯರ ಹಂಬಲ, ದಶಾವತಾರದ ನಿರೂಪಣೆ-ಹೀಗೆ ಕೀರ್ತನೆಗಳು ವಸ್ತು ವೈವಿಧ್ಯತೆಯಿಂದ ಕೂಡಿದೆ.

ಶ್ರೀವಾದಿರಾಜರ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸುವಾಗ ಮೊದಲಿಗೆ ಅವರದೆಂದು ಖಚಿತವೆನಿಸುವ ಕೀರ್ತನೆಗಳನ್ನೂ, ಅನುಬಂಧ 1 ರಲ್ಲಿ ಅಂಕಿತ ಸಂದಿಗ್ಧ ವಿರುವ ಕೃತಿಗಳನ್ನೂ; ಅನುಬಂಧ 2 ರಲ್ಲಿ ಏಕೈಕ ಆಕರದಲ್ಲಿನ ಕೃತಿಗಳನ್ನೂ; ಅನುಬಂಧ 3 ರಲ್ಲಿ ಅಧಿಕ ಕೃತಿಗಳನ್ನೂ; ಅನುಬಂಧ 4ರಲ್ಲಿ ಅಂಕಿತ ಪಲ್ಲಟಗೊಂಡಿರಬಹುದಾದ ಕೃತಿಗಳ ಪಟ್ಟಿಯನ್ನೂ ಕೊಡಲಾಗಿದೆ. ಅನುಬಂಧ 5ರಲ್ಲಿ ಲಘು ಟಿಪ್ಪಣಿಗಳು ಮತ್ತು ಕಠಿಣಶಬ್ದಗಳ ಅರ್ಥ ಬಂದಿದ್ದು ಓದುಗರಿಗೆ ಇದು ಕೃತಿಗಳನ್ನು ಚೆನ್ನಾಗಿ ಅರ್ಥೈಸಲು ನೆರವು ನೀಡುತ್ತದೆ. ಅನುಬಂಧ 6 ರಲ್ಲಿ ಶ್ರೀ ಬಿ. ಎಸ್. ವಿಜಯರಾಘವನ್‌ರವರು ಶ್ರೀವಾದಿರಾಜರ ಕೆಲವು ಕೃತಿಗಳಿಗೆ ಸ್ವರಪ್ರಸ್ತಾರ ಹಾಕಿಕೊಟ್ಟಿರುವರು. ಪೀಠಿಕೆಯಲ್ಲಿ ವಾದಿರಾಜಸ್ವಾಮಿಗಳ ಜೀವನ ಪರಿಚಯ ಹಾಗೂ ಸಹೃದಯಪರವಾದ ಕೃತಿವಿಮರ್ಶೆ ವಿಸ್ತಾರವಾಗಿ ಬಂದಿದೆ.

ತಿಮ್ಮಕವಿಯ 'ವೆಂಕಟಗಿರಿ ಮಾಹಾತ್ಮ್ಯಂ' 'ಪಶ್ಚಿಮರಂಗಕ್ಷೇತ್ರ ಮಹಾತ್ಮ್ಯ' ಮತ್ತು 'ಚಿಕ್ಕದೇವರಾಜ ವಂಶಾವಳಿ'—ಈ ಕೃತಿಗಳನ್ನು ಎಂ. ಸಿ. ಮಂಜಪ್ಪಶೆಟ್ಟಿ ಯವರು ಸಂಪಾದಿಸಿರುವರು. ಮೊದಲನೆಯದು ಪ್ರತ್ಯೇಕ ಗ್ರಂಥರೂಪದಲ್ಲೂ, ಉಳಿದೆರಡು ಒಂದು ಗ್ರಂಥರೂಪದಲ್ಲೂ ಸಂಪಾದಿತವಾಗಿವೆ. ವೆಂಕಟಗಿರಿ ಮಾಹಾತ್ಮ್ಯಂ ಒಂದು ಚಂಪೂಗ್ರಂಥ. ಬ್ರಹ್ಮಾಂಡಪುರಾಣದಲ್ಲಿ ಭೃಗು-ನಾರದರ ಸಂವಾದರೂಪವಾಗಿ ಸಂಸ್ಕೃತದಲ್ಲಿ ಬಂದಿರುವ ವೆಂಕಟಗಿರಿ ಅಥವಾ ತಿರುಪತಿ ಕ್ಷೇತ್ರದ ಮಹಿಮೆ ಇದರಲ್ಲಿ ವರ್ಣಿತವಾಗಿದೆ. ಚಿಕದೇವರಾಯನು ಸಂಸ್ಕೃತದಲ್ಲಿನ ವೆಂಕಟಗಿರಿ ಮಹಾತ್ಮ್ಯಂವನ್ನು ಕೇಳಿ ಮೆಚ್ಚಿ ಅದನ್ನು ಕನ್ನಡಿಸುವಂತೆ ತನ್ನ ಮಂತ್ರಿ ಚಿಕುಪಾ ಧ್ಯಾಯನಿಗೆ ಹೇಳಿದನು. ಚಿಕುಪಾಧ್ಯಾಯನು ಆ ಕೆಲಸವನ್ನು ತಿಮ್ಮಕವಿಗೆ ಒಪ್ಪಿಸಿ ದನು. ಈತನು ಬ್ರಹ್ಮಾಂಡಪುರಾಣದಲ್ಲಿ ಬರುವ ವೆಂಕಟಗಿರಿ ಮಾಹಾತ್ಮ್ಯಂ ಕಥೆ ಸ್ವಲ್ಪವೂ ಪಲ್ಲಟವಾಗದಂತೆ ಅದನ್ನು ಚಂಪೂರೂಪಕ್ಕೆ ಪರಿವರ್ತಿಸಿದನು. ಈ ಕೃತಿ ಯಲ್ಲಿ ವೆಂಕಟಗಿರಿಯ ಮಹಿಮಾವರ್ಣನೆ ಬಂದಿದೆ. ಆದರೆ ಅದಕ್ಕಿಂತ ಮುಖ್ಯವಾಗಿ ಮೈಸೂರೊಡೆಯರ ಮೂಲದ ಬಗೆಗೆ ಹಾಗೂ ವಂಶಾವಳಿಯ ಬಗೆಗೆ ವಿವರಗಳು ನಮಗಿಲ್ಲಿ ದೊರೆಯುತ್ತದೆ. ಸಂಪಾದಕರು ವಿಸ್ತೃತವಾದ ತಮ್ಮ ಪೀಠಿಕೆಯಲ್ಲಿ ಕವಿ-ಕೃತಿ ವಿಚಾರ, ಕೃತಿಯಲ್ಲಿ ವ್ಯಕ್ತವಾಗುವ ಚರಿತ್ರಾಂಶಗಳು, ವೆಂಕಟಗಿರಿಯ ಭೌಗೋಳಿಕ ಹಿನ್ನಲೆ, ಪುಣ್ಯತೀರ್ಥಗಳು, ವೆಂಕಟಗಿರಿ ಹಾಗೂ ಅಲ್ಲಿನ ದೇವಾಲಯಕ್ಕೆ ಇರುವ ಅದರದೇ ಆದ ಪ್ರಾಚೀನ ಇತಿಹಾಸ, ತಿರುಪತಿಯಲ್ಲಿ ನಡೆಯುವ ಉತ್ಸವ ಗಳು, ಕನ್ನಡದಲ್ಲಿ ವೆಂಕಟಗಿರಿಯನ್ನು ಕುರಿತು ಬಂದಿರುವ ಕೃತಿಗಳ ಸಂಕ್ಷಿಪ್ತ ವಿವರ

ಗಳು—ಹೀಗೆ ಇವೆಲ್ಲವನ್ನೂ ಅಭ್ಯಾಸಕ್ಕೆ ಪೂರಕ ಸಾಮಗ್ರಿಯಾಗಿ ಒದಗಿಸಿರುವರು. ಅನುಬಂಧದಲ್ಲಿ ಸಂಸ್ಕೃತ-ಕನ್ನಡದಲ್ಲಿರುವ ವೆಂಕಟೇಶ್ವರ ಸ್ತೋತ್ರ ಸಾಹಿತ್ಯವನ್ನು ಕೊಟ್ಟಿರುವರು.

ತಿಮ್ಮಕವಿಯ ಮತ್ತೆರಡು ಕೃತಿಗಳಾದ 'ಪಶ್ಚಿಮರಂಗಕ್ಷೇತ್ರ ಮಹಾತ್ಮ್ಯಂ' ಹಾಗೂ 'ಚಿಕ್ಕದೇವರಾಜವಂಶಾವಳಿಗಳನ್ನು' ಬಂದು ಹೊತ್ತಗೆಯಲ್ಲಿ ಸಂಪಾದಿಸಿಕೊಡಲಾಗಿದೆ. ಪಶ್ಚಿಮರಂಗಕ್ಷೇತ್ರ ಮಹಾತ್ಮ್ಯವು ಚಂಪೂ ಕೃತಿ. ಇದರಲ್ಲಿ ಬ್ರಹ್ಮಾಂಡ ಪುರಾಣದ ಕ್ಷೇತ್ರಕಾಂಡದಲ್ಲಿ ಉಕ್ತವಾಗಿರುವ ಪಶ್ಚಿಮರಂಗಕ್ಷೇತ್ರದ ಮಹಿಮೆಯನ್ನು ವರ್ಣಿಸಲಾಗಿದೆ. ಚಿಕ್ಕದೇವರಾಜನಿಗೆ ಶ್ರೀರಗಂನಾಥನ ಅರ್ಚಕನು ಪಶ್ಚಿಮರಂಗಕ್ಷೇತ್ರ ಮಹಾತ್ಮ್ಯವನ್ನು ಸಂಸ್ಕೃತದಲ್ಲಿ ಹೇಳಿದನು. ಅದನ್ನು ಕೇಳಿದ ರಾಜನು ತನ್ನ ಮಂತ್ರಿ ಚಿಕುಪಾಧ್ಯಾಯನಿಗೆ ಸಂಸ್ಕೃತದಲ್ಲಿರುವುದನ್ನು ಕನ್ನಡಿಸುವಂತೆ ಹೇಳಿದನು. ಚಿಕುಪಾಧ್ಯಾಯನು ಈ ಕೆಲಸವನ್ನು ತಿಮ್ಮಕವಿಗೆ ಒಪ್ಪಿಸಲು ಅವನು ಅದನ್ನು ಚಂಪೂರೂಪದಲ್ಲಿ ಕನ್ನಡಿಸಿದನು. ತಿಮ್ಮಕವಿ ಪಶ್ಚಿಮರಂಗಕ್ಷೇತ್ರ ಮಹಿಮೆಯನ್ನು ವರ್ಣಿಸುವುದರ ಜೊತೆಗೆ ಇಲ್ಲಿಯೂ ಮೈಸೂರರಸರ ಮೂಲ ಹಾಗೂ ವಂಶಾವಳಿಯನ್ನು ತಿಳಿಯಪಡಿಸಿರುವನು. ಇದರ ಪೀಠಿಕೆಯಲ್ಲೂ ಸಂಪಾದಕರು ಕವಿ ಕೃತಿ ವಿಚಾರ, ಚಾರಿತ್ರಿಕ ವಿಚಾರಗಳು, ಪಶ್ಚಿಮರಂಗ ಕ್ಷೇತ್ರದ ಭೌಗೋಳಿಕ ಹಿನ್ನೆಲೆ, ಕ್ಷೇತ್ರದಲ್ಲಿರುವ ದೇವಸ್ಥಾನಗಳು, ಪಶ್ಚಿಮರಂಗಕ್ಷೇತ್ರದ ಚಾರಿತ್ರಿಕ ಹಿನ್ನಲೆ, ಶ್ರೀರಂಗ ಪಟ್ಟಣದಲ್ಲಿ ನಡೆಯುವ ಸು. 30ಕ್ಕೂ ಮೇಲ್ಪಟ್ಟು ಉತ್ಸವಗಳು, ಕನ್ನಡದಲ್ಲಿ ಪಶ್ಚಿಮ ರಂಗಕ್ಷೇತ್ರ ಮಹಾತ್ಮ್ಯವನ್ನು ತಿಳಿಸುವ ಕೃತಿಗಳು—ಹೀಗೆ ಉಪಯುಕ್ತ ವಿಷಯಗಳ ಪ್ರಸ್ತಾಪ ಮಾಡಿರುವರು.

ಚಿಕದೇವರಾಜ ವಂಶಾವಳಿಯಲ್ಲಿ ಒಟ್ಟು 137 ಪದ್ಯಗಳಿದ್ದು, ಕೃತಿಯು ಚಂಪೂರೂಪದಲ್ಲಿದೆ. ಮೈಸೂರರಸರ ವಂಶಾವಳಿ ಇದರಲ್ಲಿ ವರ್ಣಿತವಾಗಿದೆ. ತಿಮ್ಮ ಕವಿಯು ತನ್ನ ಪ್ರತಿಯೊಂದು ಕೃತಿಯಲ್ಲೂ ಚಿಕದೇವರಾಜ ವಂಶಾವಳಿಯನು ಹೇಳಿರುವನು. ಅವುಗಳಲ್ಲಿ ಹೇಳಿರುವುದನ್ನೇ ಇನ್ನಷ್ಟು ವಿಸ್ತರಿಸಿ ಪ್ರತ್ಯೇಕ ಕೃತಿಯನ್ನಾಗಿ 'ಚಿಕದೇವರಾಜ ವಂಶಾವಳಿ'ಯನ್ನು ರಚಿಸಿದಂತಿದೆ. "ಇದರಲ್ಲಿ ಬಂದಿರುವ ವೃತ್ತಗಳಾಗಲೀ ವಚನಭಾಗಗಳಾಗಲೀ ಇವನ 'ಯಾದವಗಿರಿ ಮಹಾತ್ಮ್ಯಂ'ದಲ್ಲಿ ಬಂದಿರುವವೇ ಆಗಿದ್ದು ಅಲ್ಪಸ್ವಲ್ಪ ವ್ಯತ್ಯಾಸಗಳಾಗಿವೆ. ಹಾಗೆಯೇ ಇಲ್ಲಿ ಹೇಳಿರುವ ಮೈಸೂರೊಡೆಯರ ಮೂಲ ಮತ್ತು ಚಿಕದೇವರಾಜ ವಂಶಾವಳಿಯೂ ಸಹ ಇವನ ಇತರ ಕೃತಿಗಳಲ್ಲಿಯಂತೆಯೇ ಇವೆ. ಇಷ್ಟಲ್ಲದೆ ಹೆಚ್ಚಿನ ವಿವರಗಳೇನೂ ಇದರಲ್ಲಿ ದೊರೆಯುವುದಿಲ್ಲ" ಎಂದು ಇದರ ಸಂಪಾದಕರು ಅಭಿಪ್ರಾಯಪಟ್ಟಿರುವರು (ಪೀಠಿಕೆ, ಪು. xvi). ಅಂತೂ ತಿಮ್ಮಕವಿಯ ಸಮಗ್ರ ಕೃತಿಗಳು ಬೆಳಕು ಕಂಡಂತಾಯಿತು. ಇವನ್ನು ಸಂಪಾದಿಸಿ ಕೊಟ್ಟಿರುವ ಎಂ. ಪಿ. ಮಂಜಪ್ಪಶೆಟ್ಟಿ ಅವರ ಶ್ರಮ ಶ್ಲಾಘನೀಯವಾಗಿದೆ.

ಎಸ್. ಎಸ್. ಭೂಸರೆಡ್ಡಿಯವರಿಂದ ಸಂಪಾದಿತವಾಗಿರುವ ಅಕ್ಕನಾಗಮ್ಮನವರ ವಚನಗಳು ಎಂಬ ಕಿರುಹೊತ್ತಿಗೆಯಲ್ಲಿ ಅಕ್ಕನಾಗಮ್ಮನ 14 ವಚನಗಳು, 1 ಸ್ವರ ವಚನ ಹಾಗೂ 21 ಕಾಲಜ್ಞಾನದ ವಚನಗಳು–ಇವಿಷ್ಟನ್ನು ಒಂದೆಡೆ ದೊರಕಿಸಿ ಕೊಡುವ ಪ್ರಯತ್ನ ಮಾಡಲಾಗಿದೆ. ಚನ್ನಬಸವಣ್ಣನ ಜನನದ ಬಗ್ಗೆ ಎದ್ದಿರುವ ವಾದವಿವಾದಗಳ ಹಿನ್ನೆಲೆಯಲ್ಲಿ ಅದಕ್ಕೆ ಉತ್ತರ ಕೊಡಲು ಅಖಾಡಕ್ಕೆ ಸಂಪಾದಕರು ಇಳಿದಂತಿದೆ. ಪ್ರಸ್ತಾವನೆಯಲ್ಲಿ ಅಕ್ಕನಾಗಾಯಿಯ ಪತಿ ಶಿವಸ್ವಾಮಿ ಎಂದು ಹೇಳುವ ಸಿಂಗಿರಾಜನನ್ನು ಆಧರಿಸಿ ಕಕ್ಕಯ್ಯನ ಪ್ರಸಾದದಿಂದ ಚನ್ನಬಸವಣ್ಣ ಜನಿಸಿದನೆಂಬ ಪುರಾಣಗಳ ಹೇಳಿಕೆಯನ್ನು ಸಂಪಾದಕರು ತಿರಸ್ಕರಿಸಿರುವರು. ಪ್ರಸ್ತಾವನೆ ಆವೇಶರಹಿತ ವಾಗಿರಲು ಸಾಧ್ಯವಿದ್ದಿತು. ಸಿ. ವೀರಣ್ಣನವರ 'ಹನ್ನೆರಡನೆಯ ಶತಮಾನದ ಕಾಯಕ ಜೀವಿಗಳ ಚಳುವಳಿ' ಎಂಬ ಕೃತಿಯಲ್ಲಿ ಚನ್ನಬಸವಣ್ಣನವರ ಜನನದ ಬಗೆಗೆ ಅವರು ಎತ್ತಿರುವ ಸಂದೇಹವನ್ನು ಒಂದು ಊಹೆಯೆಂದು ಸ್ವೀಕರಿಸದೆ ಅದನ್ನು 'ಅವ್ಯವಹಾರಿಕ, ಅವೈಜ್ಞಾನಿಕ, ಅಸಂಬದ್ಧ, ಆಧಾರ ಪ್ರಮಾಣಗಳಿಲ್ಲದ ಊಹಾಪ್ರಪಂಚಕ್ಕೆ ಓದುಗರನ್ನು ಕರೆದೊಯ್ಯುವ ದುಸ್ಸಾಹಸ' ಎಂದೆಲ್ಲಾ ಮನಬಂದಂತೆ ಹೀನೈಸುವುದು ಗೌರವವಲ್ಲ. 'ಮರೆತರೂ ಮರೆಯಲಾಗದ ಜಗತ್ತಿನ ಮಹಾಮಹಿಳೆಯರ ಮಾಲೆಯಲ್ಲಿ ಮಹಾಮಾತೆ ಅಕ್ಕನಾಗಮ್ಮನವರು ಒಬ್ಬರು......ಜ್ಞಾನನಿಧಿ ಚೆನ್ನಬಸವಣ್ಣನವರನ್ನು ಹೆತ್ತ ಒಡಲು ಕರುಣೆಯ ಕಡಲು ' ಈ ಬಗೆಯ ಆಲಂಕಾರಿಕ ಭಾಷೆಯಿಂದ ಸಂಶೋಧನೆ ಮುಕ್ತವಾದಷ್ಟು ಒಳ್ಳೆಯದು.

ಶಾಂತನ 'ಅಭವ ಸ್ತೋತ್ರದಕಂದವನ್ನು' ಎಸ್. ಎಸ್.ಭೂಸರೆಡ್ಡಿಯವರು ಸಂಪಾದಿಸಿರುವರು. ಶಾಂತನ ಬಗೆಗೆ ಆತ ಸಪ್ಪೆಯಾರ್ಯನ ಶಿಷ್ಯನೆಂಬುದರ ಹೊರತಾಗಿ ಮತ್ತೇನೂ ತಿಳಿದುಬರದು. ಇದರಲ್ಲಿ 113 ಕಂದಗಳಿವೆ. ಶಿವನ ಅಗಾಧವಾದ ಕಾರುಣ್ಯವನ್ನು ನೆನೆಯುವುದಕ್ಕೆ ಈ ಕಂದಗಳು ಮೀಸಲಾಗಿವೆ. ಅನೇಕ ಶಿವಭಕ್ತರ ಬದುಕಿನ ಘಟನೆಗಳ ಸೂಕ್ಷ್ಮ ಪ್ರಸ್ತಾಪ ಈ ಕಂದಗಳಲ್ಲಿ ಬರುತ್ತದೆ. ಏಕೈಕ ಹಸ್ತಪ್ರತಿಯಿಂದ ಇದನ್ನು ಸಿದ್ಧಪಡಿಸಲಾಗಿದ್ದು ಛಂದೋದೋಷ ಹಾಗೂ ಪಾಠದೋಷಗಳನ್ನು ಎಚ್ಚರಿಕೆಯಿಂದ ಸರಿಪಡಿಸಬಹುದಾಗಿತ್ತು. ಶುದ್ಧಪ್ರತಿ ಎತ್ತಿ ಅಚ್ಚಿಸುವುದೇ 'ಸಂಪಾದನೆ' ಎಂಬ ನಿಲುವಿಗೆ ಬಂದದ್ದಾದರೆ ಇಂತಹವರಿಂದ ನಾವು ಹೆಚ್ಚಿಗೆ ಏನನ್ನೂ ನಿರೀಕ್ಷಿಸಲಾಗದು. ಮೊದಲನೆ ಪದ್ಯದ ಸಾಲಿನಲ್ಲಿಯೇ ಛಂದೋದೋಷವಿದೆ. ಶ್ರೀಕೈಲಾಸಾದ್ರಿವಾಸ ಎಂದಿರಬೇಕು. 2ನೇ ಪದ್ಯದ ಮೂರನೇ ಸಾಲಿನಲ್ಲೂ ಛಂದೋ ದೋಷವಿದೆ. 15ನೇ ಪದ್ಯದ ಎರಡನೇ ಸಾಲು 'ಹರಗಣಂಗಳವಲ್ಲದೋರ್ವ' ಎಂದು ಬರಬೇಕು. 25ನೇ ಪದ್ಯದ ಎರಡನೇ ಸಾಲಿನಲ್ಲಿ ಛಂದೋದೋಷವಿದೆ. 26ನೇ ಪದ್ಯದ ಮೊದಲ ಸಾಲು 'ನೆರದಿಹವಿದಕ್ಕೆ ಮದಹಂ' ಎಂದಿರಬೇಕು. ಅದೇ ಪದ್ಯದ ಎರಡನೇ ಸಾಲಿನಲ್ಲಿ ಬರುವ 'ವರಯೆವ್ವನ' ಎಂಬಲ್ಲಿನ ಲಿಪಿಕಾರ ಸ್ಖಾಲಿತ್ಯವನ್ನು 'ವರಯೌವನ' ಎಂದು ಸರಿಗೊಳಿಸಬಹುದಿತ್ತು. 61ನೇ ಪದ್ಯದ ಎರಡು ಮತ್ತು ಮೂರನೆಯ ಸಾಲುಗಳು ದೋಷಯುಕ್ತವಾಗಿವೆ. 'ಪರವೆಯ ಸಂಕಿಲೆಯ ಮನೆಗೆ ಕುಂಟಣಿತನಕಂ॥ ತಿರುಗಿಸುತ

ನಿಮ್ಮನೊಲಿಸಿದ' ಎಂದಿರಬೇಕಿತ್ತು. ಪದ್ಯ 78 ರ ನಾಲ್ಕನೆಯ ಸಾಲಿನಲ್ಲಿ 'ಮೂದೇವರದೇವ' ಎಂದಿರಬೇಕಿತ್ತು. 85ನೇ ಪದ್ಯದ ಮೂರನೆಯ ಸಾಲಿನಲ್ಲಿ 'ಕರವೂರಿ' ಎಂದಿರಬೇಕು. ಒಟ್ಟಿನಲ್ಲಿ ಹೇಳುವುದಾದರೆ, ಸಂಪಾದಕರಿಗೆ ಕೃತಿಯನ್ನು ಹೊರತರುವುದರಲ್ಲಿ ಇರುವ ಉತ್ಸಾಹ, ಶುದ್ಧವಾಗಿ ತರಬೇಕೆಂಬಲ್ಲಿ ಇಲ್ಲ.

ಟಿ. ಎಸ್. ಸತ್ಯನಾಥ್ ಅವರಿಂದ ಸಂಪಾದಿತವಾಗಿರುವ ಕಪೋತ ಚರಿತೆ ಗಾತ್ರದಲ್ಲಿ ಪುಟ್ಟದು. ಶಾಸ್ತ್ರೀಯವಾಗಿ ಹೇಗೆ ಒಂದು ಕೃತಿಯನ್ನು ಸಂಪಾದಿಸಬೇಕೆಂಬುದಕ್ಕೆ ಈ ಕೃತಿ ಒಳ್ಳೆಯ ನಿದರ್ಶನವಾಗಿದೆ. ಇವರ ಪೀಠಿಕೆ ಹಲವಾರುದೃಷ್ಟಿಕೋನದಿಂದ ಮಹತ್ವದ್ದಾಗಿದೆ. ಭಾರತೀಯ ಸಾಹಿತ್ಯದಲ್ಲಿ ಕಪೋತಾಖ್ಯಾನ, ಕನ್ನಡದಲ್ಲಿ ಕಪೋತಾಖ್ಯಾನ, ಕಪೋತಾಖ್ಯಾನದ ರಾಚನಿಕ ಅಧ್ಯಯನ, ಕಪೋತಾಖ್ಯಾನದ ಕೆಲವು ಸಾಂಸ್ಕೃತಿಕ ಅಂಶಗಳು – ಈ ಶೀರ್ಷಿಕೆಯ ಕೆಳಗೆ ಚರ್ಚಿತವಾಗಿರುವ ವಿಷಯಗಳು ಸಂಪಾದಕರ ವ್ಯಾಸಂಗ ಪರಿಶ್ರಮವನ್ನೂ ಸಂಶೋಧನಾಶಕ್ತಿಯನ್ನೂ, ಆಧುನಿಕ ರೀತಿಯ ವಿವೇಚನಾಕ್ರಮವನ್ನೂ ಚೆನ್ನಾಗಿ ಪರಿಚಯಿಸುತ್ತವೆ. ಅಷ್ಟಾಗಿ ಜನಪ್ರಿಯವಲ್ಲದ ಸಾಮಾನ್ಯ ಕೃತಿಯೊಂದನ್ನು ಸಂಪಾದನೆಗೆ ತೆಗೆದುಕೊಂಡು ಅದರ ಪೀಠಿಕೆಯಲ್ಲಿ ಕಪೋತಾಖ್ಯಾನದ ಬಗೆಗೆ ವಿಸ್ತೃತವಾದ ತೌಲನಿಕ ಅಧ್ಯಯನವನ್ನು ನಡೆಸಿರುವ ಸಂಪಾದಕರ ಈ ಕಾರ್ಯ ಅಭಿನಂದನಾರ್ಹವಾದುದು.

ವಚನಕಾರ ಆದಯ್ಯ ಸೋಮನಾಥಮೂರ್ತಿ ಸ್ಥಾಪಕ ಆದಯ್ಯ ಇವರ ಬಗೆಗೆ ಎದ್ದಿರುವ ವಾದವಿವಾದಗಳು ಇಂದಿಗೂ ಅಪರಿಹಾರ್ಯವಾಗಿಯೇ ಉಳಿದಿವೆ. ವಚನಕಾರ ಆದಯ್ಯನ ವಚನಗಳು ಈಗಾಗಲೆ, ಬೆಳಕು ಕಂಡಿವೆ. ವಚನಗಳನ್ನಲ್ಲದೆ ಆದಯ್ಯನು ಸ್ವರವಚನ, ಕಂದ, ಉಯ್ಯಲ ಪದ, ಮುಕ್ತಿಕ್ಷೇತ್ರ ಎಂಬ ನಾಲ್ಕು ಲಘುಕೃತಿಗಳನ್ನು ಬರೆದಿರುವುದು ಕಂಡುಬಂದಿದೆ. ಇವು ಮೊದಲಿಗೆ ಆದಯ್ಯನ ಲಘು ಕೃತಿಗಳು ಎಂಬ ಹೆಸರಿನಲ್ಲಿ ಡಾ|| ಎಂ. ಎಂ. ಕಲ್ಬುರ್ಗಿ ಅವರಿಂದ ಸಂಪಾದಿತವಾಗಿ ಬಂದಿವೆ. 'ಆದಯ್ಯಗಳ ಕಂದ' ದಲ್ಲಿ ಹದಿನಾರು ಕಂದ ಪದ್ಯಗಳಿವೆ. ಕವಿಮನದಿಂದ ಅಧಿದೈವ ಸೋಮನ ಬಗೆಗೆ ಹರಿದು ಬಂದ ಭಕ್ತಿಧಾರೆಯನ್ನು ಈ ಕಂದ ಪದ್ಯಗಳಲ್ಲಿ ಕಾಣಬಹುದು. ಸ್ವರವಚನಗಳು ವಚನಕಾರರಿಂದ ಸೃಷ್ಟಿಯಾದ ಗೀತಪ್ರಕಾರ. ವಚನಗಳಷ್ಟು ಪ್ರಸಿದ್ಧಿಯನ್ನು, ಪ್ರಚಾರವನ್ನ ವ್ಯಾಪಕ ಸೃಷ್ಟಿಯನ್ನು ಇವು ಹೊಂದಲಿಲ್ಲ. "ಬಹುಶಃ 12ನೆಯ ಶತಮಾನಕ್ಕೆ ವಚನರಚನೆ ನಿಂತುಕೊಂಡರೂ ಸ್ವರವಚನ ಸೃಷ್ಟಿ ಮುಂದುವರಿದು ನಿಜಗುಣರಂಥವರ ಕೈವಲ್ಯ ಗೀತಕೃತಿಗಳು ಹುಟ್ಟಿದ ಕಾರಣ ಈ ಮೊದಲಿನ ಸ್ವರವಚನಗಳ ಪ್ರಭಾವ ಕಡಿಮೆಯಾಗಿರಬೇಕು. ದಾಸರು ಬಹುಸಂಖ್ಯೆ ಹಾಡುಗಳನ್ನು ಬರೆದುದಲ್ಲದೆ ಮನೆಮನೆಗೂ ಹೋಗಿ ಹಾಡಿದ ಪ್ರಚಾರ ತಂತ್ರದಿಂದಾಗಿ ಅವುಗಳ ಪ್ರಭಾವ ಇನ್ನೂ ಕಡಿಮೆಯಾಗಿರಬೇಕು"ಎಂಬ ಸಂಪಾದಕರ ಊಹೆ ಒಪ್ಪಬಹುದಾಗಿದೆ. ಇಲ್ಲಿ ಆದಯ್ಯನ 19 ಸ್ವರ ವಚನಗಳು ಸಂಕಲಿತವಾಗಿವೆ. ಉಯ್ಯಲ ಪದದಲ್ಲಿ 23 ಪದಗಳಿವೆ. ಸ್ವರವಚನದಲ್ಲಿ ಒಂದು ಸ್ವರವಚನವು ಹಲವು ಪದ್ಯಗಳ ಘಟಕ

ವಾಗಿದ್ದರೆ, ಉಯ್ಯಲ ಪದದಲ್ಲಿ ಪ್ರತಿಯೊಂದು ಪದ್ಯವೂ ಸ್ವಯಂಪೂರ್ಣವಾಗಿದೆ. 'ಮುಕ್ತಿಕ್ಷೇತ್ರ'ದಲ್ಲಿ ಜ್ಞಾನಿಯ ಸ್ವರೂಪವನ್ನು ಹೇಳಲಾಗಿದೆ. ಆದಯ್ಯನ ಸಮಗ್ರ ಅಧ್ಯಯನಕ್ಕೆ ಪೂರಕವಾಗಿ ಆದಯ್ಯನ ಲಘುಕೃತಿಗಳು ಹೊರಬಂದಿವೆ. ಪುಸ್ತಕ ಗಾತ್ರದಲ್ಲಿ ಪುಟ್ಟದಾಗಿದ್ದರೂ ಶುದ್ಧವಾಗಿ, ಆಕರ್ಷಕವಾಗಿ ಹೊರಬಂದಿದೆ. ಸಂಪಾದಕರ ಪ್ರಯತ್ನ ಸ್ವಾಗತಾರ್ಹ.

ಕೆಳದಿ ಪ್ರಾಚ್ಯವಸ್ತು ಸಂಶೋಧನ ಸಂಸ್ಥೆಯ ಗ್ರಂಥಮಾಲೆಯ ಎರಡನೆಯ ಕೃತಿಯಾಗಿ 'ಕೆಳದಿ ವೆಂಕಣ್ಣನ ಕೃತಿಗಳು' ಎಂಬ ಗ್ರಂಥವನ್ನು ಕೆಳದಿ ಗುಂಡಾಜೋಯಿಸ್ ರವರು ಸಂಪಾದಿಸಿ ಕೊಡುತ್ತಿರುವರು. ಈಗಾಗಲೇ ಬೆಂಗಳೂರು ವಿಶ್ವವಿದ್ಯಾಲಯ ವತಿಯಿಂದ (1977) 'ವೆಂಕಣ್ಣಕವಿಯ ಕೀರ್ತನೆಗಳು' ಎಂಬ ಗ್ರಂಥ ಹೊರಬಂದಿದ್ದು, ಈಗ ಕೆಳದಿ ವೆಂಕಣ್ಣನ ಕೃತಿಗಳನ್ನು ಒಂದು ಸಂಪುಟದಲ್ಲಿ ಹೊರತರಲಾಗಿದೆ. ಇದರಲ್ಲಿ ಪಾರ್ವತೀವಲ್ಲಭ ಶತಕ, ಗಣಸಹಸ್ರನಾಮ ಹಾಗೂ ನರಸಿಂಹವಿಜಯ – ಈ ಮೂರು ಕೃತಿಗಳು ಸಮಾವೇಷವಾಗಿವೆ. ವೆಂಕಣ್ಣ ಕವಿ ಸ್ಮಾರ್ತ ಬ್ರಾಹ್ಮಣನಾದರೂ ಅದ್ವೈತವನ್ನು ಒಪ್ಪಿಕೊಂಡವನು. ಪಾರ್ವತೀವಲ್ಲಭ ಶತಕವು ಈ ಮೊದಲಿಗೆ ಪ್ರಬುದ್ಧ ಕರ್ನಾಟಕದಲ್ಲಿ ಅಚ್ಚಾಗಿದ್ದಿತು (ಸಂ. 52.3) ಅಲ್ಲಿ ಕಂಡುಬಂದ ಅಲ್ಪಸ್ವಲ್ಪ ಪಾಠ ಸ್ಖಾಲಿತ್ಯಗಳನ್ನು ಸರಿಗೊಳಿಸಿ ಈಗ ಮತ್ತೆ ಪ್ರಕಟಿಸಲಾಗಿದೆ. ಇದರಲ್ಲಿ ಒಟ್ಟು 101 ವೃತ್ತಗಳಿವೆ. ಗಣಸಹಸ್ರನಾಮವು ಮಲ್ಲಿಕಾರ್ಜುನ ಪಂಡಿತಾರಾಧ್ಯ ಹಾಗೂ ಪಾಲ್ಕುರಿಕೆ ಸೋಮನಾಥ ಇವರುಗಳ ನಂತರ ಷಟ್ಪದೀ ರೂಪದಲ್ಲಿ 101ಪದ್ಯ ಗಳಲ್ಲಿ ಬಂದಿದೆ ಗಣನಾಮ ಸಹಸ್ರ ನರಹರಿ ವಿಜಯದಲ್ಲಿ ನರಸಿಂಹಾವತಾರದ ಕಥೆಯನ್ನು 85 ಭಾಮಿನಿ ಷಟ್ಪಧಿಗಳಲ್ಲಿ ಹೇಳಲಾಗಿದೆ. ಮೊದಲಿಗೆ ಈ ಕೃತಿಗಳ ಪರಾಮರ್ಶೆಯನ್ನು ಪ್ರೊ. ಎಂ. ವಿ. ಸೀತಾರಾಮಯ್ಯನವರು ಸಂಕ್ಷಿಪ್ತವಾಗಿ ಮಾಡಿರು ವರು. ಉಪೋದ್ಘಾತದಲ್ಲಿ ಸಂಪಾದಕರು ಕೃತಿಗಳ ಸಮೀಕ್ಷೆಯನ್ನು ವಿಸ್ತಾರವಾಗಿ ಕೊಟ್ಟಿರುವರು. ಸೂಕ್ತಪಾಠಗಳಿಂದ ಕೂಡಿ ಆಕರ್ಷಕವಾಗಿ ಮುದ್ರಿತವಾಗಿರುವ ಈ ಕೃತಿ ಕೆಳದಿ ವೆಂಕಣ್ಣನ ಕೃತಿಗಳ ಸಮಗ್ರ ಅಧ್ಯಯನಕ್ಕೆ ಹೆಚ್ಚಿನನೆರವು ನೀಡುತ್ತದೆ.

'ಷಣ್ಮುಖ ಶಿವಯೋಗಿಗಳ ಅಖಂಡೇಶ್ವರ ವಚನಗಳು' ಗ್ರಂಥವನ್ನು ವಿ. ಶಿವಾನಂದ ಅವರು ಸಂಪಾದಿಸಿರುವರು. ಮುದ್ರಿತ ಪ್ರತಿಗಳಲ್ಲಿ ಷಣ್ಮುಖ ಶಿವ ಯೋಗಿಗಳ 717 ವಚನಗಳು ದೊರೆಯುತ್ತಿದ್ದು ಪ್ರಸ್ತುತ ಆವೃತ್ತಿಯಲ್ಲಿ 'ಕಟ್ಟಿದೆನು ಬಿರಿದ' ಎಂಬ ಹೊಸವಚನದ ಉಲ್ಲೇಖದೊಂದಿಗೆ 718 ವಚನಗಳು ಷಣ್ಮುಖ ಶಿವಯೋಗಿಗಳು ರಚಿಸಿದ್ದೆಂದು ನಿರ್ಣಯಿಸಲಾಗಿದೆ. ವಿಸ್ತಾರವಾದ ಪೀಠಿಕೆಯಲ್ಲಿ ಸಂಪಾದಕರು ಷಣ್ಮುಖ ಶಿವಯೋಗಿಗಳ ಕಾಲ – ಕೃತಿ – ಜೀವನ ಸಂಗತಿಗಳು, ವಚನಗಳ ಲಯವಿನ್ಯಾಸ, ಸ್ಥಲಾನುಸಾರಿ ವಿಂಗಡಣೆ, ಶೈಲಿ, ಭಾಷೆ ಮತ್ತು ವ್ಯಾಕರಣ ಪ್ರಕ್ರಿಯೆಗಳು, ವ್ಯಕ್ತಿತ್ವ, ಪ್ರಭಾವಮುದ್ರೆ-ಹೀಗೆ ಅನೇಕ ವಿಷಯಗಳನ್ನು ಕುರಿತು

ಚರ್ಚಿಸಿರುವರು. ವಚನಗಳ ಭಾಷೆ ಮತ್ತು ವ್ಯಾಕರಣ ಪ್ರಕ್ರಿಯೆಗಳು ಎಂಬ ಭಾಗ ಪೀಠಿಕೆಯಲ್ಲಿ ಗಮನಾರ್ಹವಾದುದು. ಹೊಸ ನಿಟ್ಟಿನಲ್ಲಿ ವಚನಗಳ ಅಧ್ಯಯನ ಇಲ್ಲಿ ನಡೆದಿದೆ. ಅನುಬಂಧದಲ್ಲಿ ಷಣ್ಮುಖ ಶಿವಯೋಗಿಗಳು ರಚಿಸಿದರೆನ್ನಲಾದ ಅಖಂಡೇಶ್ವರ ಜೋಗುಳ ಪದ' ವನ್ನು ಕೊಡಲಾಗಿದೆ. ಸ್ಥಲಾನುಸಾರಿ ವಿಂಗಡಣೆ ಗೊಂಡು ಅಖಂಡೇಶ್ವರ ವಚನಗಳು ಪ್ರಕಟವಾಗಿದೆಯೆಂಬ ತೃಪ್ತಿ ಈ ಆವೃತ್ತಿಯಿಂದ ನಮಗಾಗುತ್ತದೆ.

ಸರ್ವಜ್ಞನ ವಚನಗಳನ್ನು 'ಪರಮಾರ್ಥ' ಎಂಬ ಹೆಸರಿನಲ್ಲಿ ಎಲ್. ಬಸವ ರಾಜು ಅವರು ಶಾಸ್ತ್ರೀಯವಾಗಿ ಸಂಪಾದಿಸಿ ಕೊಟ್ಟಿರುವರು. 'ವೆಂಕನೆಂಬವನು ಕ್ರಿ.ಶ. 1636ರಲ್ಲಿ ಪ್ರತಿ ಮಾಡಿದ ಪ್ರಾಚೀನತಮ ಓಲೆಯ ಗ್ರಂಥವನ್ನು ಮೂಲಾ ಧಾರವಾಗಿಟ್ಟುಕೊಂಡು ಮತ್ತಿತರ ಪ್ರಾಚೀನ ಓಲೆಯ ಪ್ರತಿಗಳ ಮತ್ತು ಮದ್ಯಕಾಲೀನ ಕಾಗದದ ಪ್ರತಿಗಳ ಮತ್ತು ಅಚ್ಚಾದ ಹಲವು ಪುಸ್ತಕಗಳ ಪಾಠವನ್ನು ತೌಲನಿಕವಾಗಿ ಪರಿಶೀಲಿಸಿ ಈ ಪರಿಷ್ಕರಣವನ್ನು ನಿರ್ವಹಿಸಿದ್ದೇನೆ. ಮೇಲಾಗಿ ಬಹಳ ವೆಂದರೆ ಸರ್ವಜ್ಞನ ನಿಜವಚನಗಳಿರುವುದು ಸಂಖ್ಯೆಯಲ್ಲಿ ಒಂದು ಸಾವಿರ ಮಾತ್ರ ; ಉಳಿದುವೆಲ್ಲಾ ಕಾಲದಿಂದ ಕಾಲಕ್ಕೆ ಜನಪದರು ಸರ್ವಜ್ಞನ ಹೆಸರಿನಲ್ಲಿ ಅವನ ವಚನಗಳ ಮಾದರಿಯಲ್ಲಿ ಕಟ್ಟಿದ ಪ್ರಕ್ಷಿಪ್ತಗಳು ಎಂಬ ನಿರ್ಣಯಕ್ಕೆ ಬಂದಿದ್ದೇನೆ. ಸರ್ವಜ್ಞನ ಒಂದೊಂದು ನಿಜವಚನದಡಿಯಲ್ಲೂ ಅವನ ಮೂಲವಚನ ಕಾಲಕಾಲಕ್ಕೆ ಯಾವ ಯಾವ ರೂಪ ಪಡೆಯುತ್ತ ಕೆಡುತ್ತ ಬಂದಿರುವುದೆಂಬುದನ್ನೂ ಯಥೇಚ್ಛ ವಾದ ಉಲ್ಲೇಖಗಳಿಂದ ಸ್ಪಷ್ಟಪಡಿಸಿದ್ದೇನೆ."ಇದು ಸಂಪಾದಕರು ತಮ್ಮ ಸಂಪಾದನೆಗೆ ಅನುಸರಿಸಿರುವ ಕ್ರಮದ ಬಗೆಗೆ ನೀಡಿರುವ ವಿವರಣೆ. 949 ರಿಂದ 1002 ರ ವರೆಗೆ ಬಂದಿರುವ ವಚನಗಳು 'ಅಧಿಕ ವಚನಗಳು' ಎಂದು ಸಂಪಾದಕರು ಬೇರ್ಪಡಿ ಸಿರುವರು. ಇದರಲ್ಲಿ ಕೊನೆಯ ಮೂರು ಮಾತ್ರ 'ಪರಮಾರ್ಥ' ಎಂಬ ಅಂಕಿತವನ್ನು ಒಳಗೊಂಡಿರುವವು (ಇವು K. A. 450 ಪ್ರತಿಯವು.) ಸಂಪಾದಕರು ಪಾಠ ನಿರ್ಣಯ ಮಾಡುವಾಗ ಬಹಳ ಎಚ್ಚರವಹಿಸಿದಂತಿದೆ. ಉತ್ಕೃಷ್ಟ ಪಾಠಗಳನ್ನು ಆಯ್ಕೆ ಮಾಡಿರುವರು. ಸರ್ವಜ್ಞನ ವಚನಗಳಿಗೆ ಹೇರಳ ಪಾಠ ಭೇದಗಳು ಕಂಡು ಬರುವುದು. ಹಲವು ಪಾಠಭೇದಗಳ ನಡುವೆ ಶುದ್ಧಪಾಠವಾವುದೆಂಬುದನ್ನು ನಿರ್ಣಯಿಸ ಹೊರಟಾಗ, ಸಂಪಾದಕನಿಗೆ ಸಂದಿಗ್ಧ ತಲೆದೋರುವುದುಂಟು. ಸರ್ವಜ್ಞನ ವಚನಗಳ ಅಂತರಂಗ ಬಲ್ಲವನಿಗೆ ಮಾತ್ರ ಮೂಲಪಾಠ ಗುರುತಿಸಲು ಸಾಧ್ಯ. ಎಲ್. ಬಸವರಾಜು ಈ ದಿಶೆಯಲ್ಲಿ ಸಾಗಿ, ಸರ್ವಮಾನ್ಯವಾದ ಪಾಠ ವನ್ನು ಒದಗಿಸಿರುವರು. ವಿದ್ವತ್ಪೂರ್ಣವಾದ ಪೀಠಿಕೆಯನ್ನು ಸಂಪಾದಕರಿಂದ ನಿರೀಕ್ಷಿಸ ಲಾಗಿತ್ತು. ಅದಿಲ್ಲದಿರುವುದು ವಿದ್ವದ್ ಬಳಗಕ್ಕೆ ನಿರಾಶೆಯನ್ನುಂಟುಮಾಡಿದೆ.

'ನೀಲಕಂಠಾಚಾರ್ಯನ ಆರಾಧ್ಯ ಚಾರಿತ್ರ'ವನ್ನು ಎನ್. ಬಸವಾರಾಧ್ಯ ಅವರು ಸಂಪಾದಿಸಿರುವರು. ಆಂಧ್ರದ ಪಾಲ್ಕುರಿಕೆ ಸೋಮನಾಥನ 'ಪಂಡಿತಾರಾಧ್ಯ ಚರಿತೆ

ಕನ್ನಡ ರೂಪಾಂತರ ಈ ಕೃತಿ ಕೃತಿನಾಯಕನಾದ ಮಲ್ಲಿಕಾರ್ಜುನಪಂಡಿತನು ಮರ್ತ್ಯದಲ್ಲಿ ವೀರಶೈವವನ್ನು ಉದ್ಧರಿಸಲು ಬಂದ ಮಹಿಮಾಪುರುಷ, ವೀರಶೈವ ಧರ್ಮವನ್ನು ಉದ್ಧರಿಸಿ ಅದರ ಶ್ರೇಷ್ಠತ್ವವನ್ನು ಮೆರೆಯಲು ಅವನು ಕೈಗೊಂಡ ವಿಧಾನಗಳು, ತೋರಿದ ಪವಾಡಗಳು ಈ ಕೃತಿಯಲ್ಲಿ ವರ್ಣಿತವಾಗಿವೆ. ಕಥಾನಾಯಕನ ಜೀವಿತ ವೃತ್ತಾಂತವನ್ನು ನಿರೂಪಿಸುವುದರ ಜೊತೆಗೆ ಅಸಂಖ್ಯ ಶಿವಭಕ್ತರ ಕಥೆಗಳೂ ಇಲ್ಲಿ ನಿರೂಪಿತವಾಗಿದೆ. ಸಂಪಾದಕರು ತಮ್ಮ ವಿಸ್ತಾರವಾದ ಪೀಠಿಕೆಯಲ್ಲಿ ಕವಿ-ಕೃತಿ ವಿಚಾರವನ್ನು ಸಹೃದಯಪರರಾಗಿ ತಿಳಿಯಪಡಿಸಿರುವರು. ಕೃತಿಯ ದೀಕ್ಷಾ ಪ್ರಕರಣ, ಪುರಾತನ ಪ್ರಕರಣ, ವಾದಪ್ರಕರಣ, ಮಹಿಮ ಪ್ರಕರಣ ಹಾಗೂ ಪರ್ವತ ಪ್ರಕರಣಗಳ ಕಥಾ ಭಾಗವನ್ನು ಸಂಕ್ಷೇಪವಾಗಿ ಹೇಳಿರುವರು. ತೆಲುಗಿನ ಪಾಲ್ಕುರಿಕೆ ಸೋಮನಾಥ ಕನ್ನಡದ ನೀಲಕಂಠಾಚಾರ್ಯ ಹಾಗೂ ಸಂಸ್ಕೃತದ ಗುರುರಾಜ ಕವಿ–ಈ ಮೂವರು ಕವಿಗಳ ಕಥಾವಸ್ತು ಒಂದೇ ಆಗಿದ್ದು ಮೊದಲನೆಯವನನ್ನು ಉಳಿದ ಇಬ್ಬರು ಸಂಪೂರ್ಣವಾಗಿ ಅನುಸರಿಸಿರುವರೆಂಬುದನ್ನು ತೌಲನಿಕ ಅಧ್ಯಯನದ ಮೂಲಕ ವಿವರಿಸಿರುವರು. ವಿದ್ವತ್ ಪೂರ್ಣವಾದ ಪೀಠಿಕೆ, ಪದ್ಯಗಳ ಅಕಾರಾದಿ, ವಿಶಿಷ್ಟ ಪದಸೂಚಿ, ಪಾರಿಭಾಷಿಕ ಪದಕೋಶ, ಶಬ್ದಾರ್ಥಕೋಶ– ಇವುಗಳಿಂದ ಕೂಡಿರುವ ಈ ಸಂಪಾದಿತ ಕೃತಿ ಈ ವರ್ಷದ ಶ್ರೇಷ್ಠ ಸಂಪಾದಿತ ಕೃತಿಗಳಲ್ಲಿ ಒಂದಾಗಿದೆ. ಈವರೆವಿಗೂ ಅಪ್ರಕಟಿತವಾಗಿದ್ದ ಈ ಬೃಹತ್ ಕೃತಿಯನ್ನು ಹೊರತರುವುದರ ಮೂಲಕ ತೌಲನಿಕ ಅಧ್ಯಯನಕ್ಕೆ ಸಂಪಾದಕರು ಅವಕಾಶ ಕಲ್ಪಿಸಿರುವರು. ಇದಕ್ಕಾಗಿ ಸಂಪಾದಕರು ಅಭಿನಂದನಾರ್ಹರಾಗಿರುವರು.

'ನಾರಾಯಣದಾಸರ ಕೀರ್ತನ ಕುಸುಮಾಂಜಲಿ'ಯನ್ನು ಎಂ. ವಿ. ಸೀತಾರಾಮಯ್ಯನವರು ಸಂಪಾದಿಸಿರುವರು. ವಾಗ್ಗೇಯಕಾರ ತಿಮ್ಮಪ್ಪದಾಸರ ಜ್ಯೇಷ್ಠ ಪುತ್ರರಾದ ನಾರಾಯಣದಾಸರು ತಮ್ಮ ತಂದೆಯಂತೆ ನೂರಾರು ಕೀರ್ತನೆಗಳನ್ನು ರಚಿಸದಿದ್ದರೂ ಸದ್ಯ ದೊರೆತಿರುವ ಅವರ ಮೂವತ್ತೇಳು ಕೀರ್ತನೆಗಳು ಸುಶ್ರಾವ್ಯವೂ, ಭಕ್ತಿರಸಭರಿತವೂ ಅಗಿವೆ. ಭಕ್ತನೊಬ್ಬನ ಅಂತರಂಗದ ನಿವೇದನೆಯನ್ನು ಈ ಕೀರ್ತನೆಗಳಲ್ಲಿ ಕಾಣಬಹುದು. ಈ ಕೀರ್ತನೆಗಳಲ್ಲಿ ಬಹುಪಾಲು ಇಷ್ಟದೈವಗಳ ಸ್ತುತಿಯನ್ನು ನಾವು ನೋಡಬಹುದು. ಎರಡು, ನಾಲ್ಕು ಹಾಗೂ ಐದು-ಈ ಮೂರು ಕೀರ್ತನೆಗಳು ಸ್ವಕೀಯ ವಿವರಗಳನ್ನು ನೀಡುತ್ತವೆ. ಐದನೆಯ ಕೀರ್ತನೆ ತೆಲುಗಿನಲ್ಲಿದ್ದು ಶ್ರೀರಾಮನು ತಮ್ಮ ಮನೆಗೆ ಬಂದುದನ್ನು ಇಲ್ಲಿ ಹೇಳಲಾಗಿದೆ. "ಅನನ್ಯ ಭಕ್ತಿಯಿಂದ ಭಗವತ್ಸೇವೆ ಮಾಡಿದ ಭಕ್ತನ ಹೃದಯಸ್ಪಂದನಗಳು ಚೆನ್ನಾಗಿ ಕೇಳಿಬರುತ್ತವೆ." ಎಂಬ ಪೀಠಿಕೆಯಲ್ಲಿನ ಹೇಳಿಕೆಯನ್ನು ಒಪ್ಪಬಹುದಾಗಿದೆ. ಸಂಪಾದಕರು ಪರಿಚಯಾತ್ಮಕ ನೆಲೆಯಲ್ಲಿ ಪೀಠಿಕೆ ಬರೆದಿರುವರು. ಕೊನೆಯಲ್ಲಿ ಬಂದಿರುವ 'ಟಿಪ್ಪಣಿ ಮತ್ತು ಕಠಿನ ಪದಗಳ ಅರ್ಥ' ಕೀರ್ತನೆಗಳ ಅಂತರಂಗವನ್ನು ಅರಿಯಲು ಸಹೃದಯನಿಗೆ ಸಹಾಯಕವಾಗಿದೆ.

'ಅಂಬಿಗರ ಚೌಡಯ್ಯನ ವಚನಗಳು' (ಸಂ.) : ಬಸವರಾಜ ಸಿದ್ಧಾಶ್ರಮ ಮತ್ತು ಎಸ್. ವಿದ್ಯಾಶಂಕರ, ಕನ್ನಡ ಸಾಹಿತ್ಯದ ಒಂದು ಪ್ರಮುಖಭಾಗ ವಚನ ಸಾಹಿತ್ಯ. ಇದರ ಉಗಮ ಹಾಗೂ ಸ್ವರೂಪಗಳ ಬಗೆಗೆ ಯಾವುದೇ ಖಚಿತವಾದ ನಿರ್ಧಾರಕ್ಕೆ ಬರಲಾಗದಿದ್ದಾಗ್ಯೂ ಈ ಪ್ರಕಾರ ಕನ್ನಡದಲ್ಲಿ ಹನ್ನೊಂದು ಹನ್ನೆರಡನೆಯ ಶತಮಾನ ಗಳಲ್ಲಿ ಪ್ರಚಲಿತವಾಗಿದ್ದುದರ ಬಗೆಗೆ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ, ಸಕಳೇಶ ಮಾದರಸ, ಜೇಡರ ದಾಸಿಮಯ್ಯಾದಿಗಳು ಸದ್ಯದಲ್ಲಿ ವಚನ ಸ್ರೋತದ ಆದ್ಯ ಪ್ರವರ್ತಕರಾಗಿದ್ದಾರೆ. ಕ್ರಿ. ಶ. ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ, ಕಲ್ಯಾಣದಲ್ಲಿ, ಬಸವಾದಿಗಳ ನೇತೃತ್ವದಲ್ಲಿ, ನೂರಾರು ಶಿವಶರಣ ಶಿವಶರಣೆಯರು ವಿಪುಲವಾಗಿ ವಚನಗಳನ್ನು ಸೃಷ್ಟಿಸಿದರು. ಈ ಕಾಲ ವಚನ ಸಾಹಿತ್ಯದ ಬೆಳವಣಿಗೆಯ 'ಸುವರ್ಣಕಾಲ'ವಾಗಿ ಪರಿಣಮಿಸಿತು. ಈ ಸಮುದಾಯದಲ್ಲಿ ಅಂಬಿಗರ ಚೌಡಯ್ಯನು ಸಹ ಒಬ್ಬ ಗಮನಾರ್ಹ ಹಾಗೂ ಪ್ರಮುಖ ವಚನಕಾರನಾಗಿ ಕಾಣಿಸಿಕೊಳ್ಳುತ್ತಾನೆ.

ಅಂಬಿಗರ ಚೌಡಯ್ಯನ ವಚನಗಳು ಬಸವ, ಚೆನ್ನಬಸವಾದಿಗಳು ಷಟ್ಸ್ಥಲ ವಚನಗಳಂತೆ ಒಟ್ಟಿಗೆ ಒಂದೆಡೆ ಲಭಿಸುತ್ತಿಲ್ಲ. ಈತನ ವಚನಗಳು 'ಸಕಲ ಪುರಾತನರ ವಚನಗಳೇ ಮೊದವಾದ 2 ವಿಧ ವಚನ ಸಂಕಲನಗಳಲ್ಲಿ ಚೆದುರಿಹೋಗಿವೆ. ಹೀಗಾಗಿ ಈತನ ವಚನಗಳು ಸಂಕಲನ ಸಂಪಾದನೆಗೆಳಿಗೆ ವಿವಿಧ ಆಕರಗಳನ್ನೇ ಅವಲಂಭಿಸಬೇಕಾಗಿದೆ.

'ಅಂಬಿಗರ ಚೌಡಯ್ಯನ ವಚನಗಳು' ಕೃತಿಯ ಸಂಪಾದಕರುಗಳಾದ ಬಸವರಾಜ ಸಿದ್ಧಾಶ್ರಮ ಮತ್ತು ಎಸ್. ವಿದ್ಯಾಶಂಕರ ಅವರು ತಮ್ಮ ಪ್ರಸ್ತುತ ಕೃತಿ ಸಂಪಾದನೆಗೆ 22 ವಿವಿಧ ಆಕರಗಳನ್ನು ಆಧರಿಸಿ 264 ವಚನಗಳನ್ನು ಸಂಗ್ರಹಿಸಿದ್ದಾರೆ. (ಈ 264 ವಚನಗಳಲ್ಲಿ 7 ಅಲ್ಲಮಪ್ರಭುವಿನ ವಚನಗಳಾಗಿವೆ. ಅಲ್ಲದೆ 2 ಪಾಠ ಭೇದಗಳ್ಳುಳ್ಳ ಪುನರುಕ್ತ ವಚನಗಳಿವೆ. ಹೀಗಾಗಿ ಇಲ್ಲಿರುವ ಅಂಬಿಗರ ಚೌಡಯ್ಯನ ವಚನಗಳು 255 ಮಾತ್ರ.) ಇದರಲ್ಲಿ 19 ಮುದ್ರಿತ ಕೃತಿಗಳು ಹಾಗು ಮಾಸಿಕಗಳು ಮತ್ತು ಒಂದು ಕಾಗದದ ಪ್ರತಿ ಹಾಗೂ 2 ಓಲೆ ಕೃತಿಗಳಿವೆ.

ಕೃತಿಯ ಆದಿಯಲ್ಲಿ ಸಂಕೇತ ಸೂಚಿ, ಪೀಠಿಕೆಗಳಿದ್ದು ಅನಂತರ ವಚನಗಳನ್ನು ಪಾಠಾಂತರ ಸಹಿತ ಕೊಟ್ಟಿದೆ. ಪುಸ್ತಕದ ಕೊನೆಯಲ್ಲಿ ಕಥಾ ಸಂದರ್ಭಗಳು, ಟಿಪ್ಪಣಿಗಳು ಪಾರಿಭಾಷಿಕ ಪದಗಳು, ಕಠಿಣ ಪದಗಳ ಅರ್ಥ ಮತ್ತು ವಚನಗಳ ಆಕಾರಾದಿಗಳಿವೆ. ಇಲ್ಲೆಲ್ಲ ಸಂಪಾದಕರು ಓದುಗರಿಗೆ ಕೃತಿಯ ಅಭ್ಯಾಸಕ್ಕೆ ಅನು ಕೂಲವಾದ ಸಾಧನ ಸಾಮಗ್ರಿಗಳನ್ನು ಶ್ರಮಪೂರ್ವಕವಾಗಿ ಒದಗಿಸಿದ್ದಾರೆ.

ಸಂಪಾದಕರು ಅಂಬಿಗರ ಚೌಡಯ್ಯನ ವಚನಗಳನ್ನು ಆರಿಸಲು ಹಲವಾರು ವಚನ ಸಂಕಲಗಳನ್ನು ಪರಿಶೀಲಿಸಿದ್ದಾರೆ. ಆದರೆ ಕಾಲದ ದೃಷ್ಟಿಯಿಂದ ಪ್ರಾಚೀನ

ಗಳಾದ ಹಾಗೂ ಪ್ರಕಟಗೊಂಡಿರುವ ಕೆಲವು ವಚನ ಸಂಕಲನಗಳು ಅವರ ದೃಷ್ಟಿಗೆ ಬೀಳದಿರುವ ಕಾರಣ ಅರ್ಥವಾಗುವುದಿಲ್ಲ. ಮಹಾಲಿಂಗದೇವನ (ಸು. 1430) 'ಏಕೋತ್ತರ ಶತಸ್ಥಲ', ಗುಬ್ಬಿಯ ಮಲ್ಲಣ್ಣನ (ಸು. 1430) 'ಗಣಭಾಷಿತರತ್ನ ಮಾಲೆ', ಕಲ್ಲುಮಠದ ಪ್ರಭುದೇವನ (ಸು. 1430) 'ಲಿಂಗಲೀಲಾ ವಿಲಾಸ ಚಾರಿತ್ರ' ಗಳು ಮೇಲಿನ ಮಾತಿಗೆ ಉದಾಹರಣೆಗಳು ಇವುಗಳನ್ನು ಮುಂದಿನ ಮುದ್ರಣದಲ್ಲಿ ಅಳವಡಿಸಿಕೊಳ್ಳಬಹುದಾಗಿದೆ.

ಈಗ ಪ್ರಕಟವಾಗಿರುವ 'ಅಂಬಿಗರ ಚೌಡಯ್ಯನ ವಚನಗಳು' ಆತನನ್ನು ಅಭ್ಯಸಿಸಲು ಬೆಲೆಯುಳ್ಳ ಆಧಾರಯುಕ್ತ ಆಕರವಾದ ಕೃತಿಯಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ಇದಕ್ಕಾಗಿ ಸಂಪಾದಕರು ಅಭಿನಂದನಾರ್ಹರಾಗಿದ್ದಾರೆ.

—ಎಸ್. ಶಿವಣ್ಣ

# ಅಭಿನಂದನ ಗ್ರಂಥಗಳು

**ಕಾಳೇಗೌಡ ನಾಗವಾರ**

ನಮ್ಮ ವಿಶಾಲ ಸಾಂಸ್ಕೃತಿಕ ಬದುಕಿನ ಯಾವುದೇ ರಂಗದಲ್ಲಿ ಗಣನೀಯ ಕಾರ್ಯ ನಿರ್ವಹಿಸಿದ ಹಿರಿಯರನ್ನು ಅಭಿನಂದಿಸಿ, ಅವರ ಗೌರವಾರ್ಥವಾಗಿ ಗ್ರಂಥಗಳನ್ನು ಹೊರತರುವ ವಾಡಿಕೆ ಇದೆ. ಕನ್ನಡದಲ್ಲಿ ಪ್ರತಿವರ್ಷ ಇಂಥ ಹತ್ತಾರು ಗ್ರಂಥಗಳು ಪ್ರಕಟವಾಗುತ್ತಿರುತ್ತವೆ. ನಾನಾ ಬಗೆಯ ವಿಷಮತೆಯಿಂದ ತುಂಬಿ ತುಳುಕುತ್ತಿರುವ ಈ ಸಮಾಜದಲ್ಲಿ ಅನೇಕಸಲ ನಿಜಕ್ಕೂ ಗೌರವ ಸಲ್ಲಿಸಬೇಕಾದವರಿಗೆ ಅದು ಸಲ್ಲದೆ ಇಲ್ಲೂ 'ಎಲ್ಲಾ' ಇದ್ದುಳ್ಳವರ ಪಾಲೇ ಆಗಿ—ಅನುಚಿತ ಗುಣಗಾನವು ನಡೆಯುವುದುಂಟು. ಗುಣಮಟ್ಟದಿಂದ ಇಂಥ ಬೇರೆ ಬೇರೆಯ (ಎಷ್ಟೋಸಲ ಬಹಳಷ್ಟು ಅತಿರೇಕಗಳ) ಪ್ರಮಾಣಗಳಲ್ಲಿ ನಿಲ್ಲಬಲ್ಲವುಗಳನ್ನು ಅಭಿನಂದನ ಗ್ರಂಥಗಳಲ್ಲಿ ಕಾಣಬಹುದಾಗಿದೆ. ಈ ವರ್ಷ ನಮ್ಮ ಗಮನಕ್ಕೆ ಬಿದ್ದ 8 ಕೃತಿಗಳನ್ನು ಈ ವಿಭಾಗದಲ್ಲಿನ ಸಮೀಕ್ಷೆಗಾಗಿ ಕೈಗೆತ್ತಿಕೊಳ್ಳಲಾಗಿದೆ:

ಅಧ್ಯಯನ (ಸಂ) ಎಂ. ಚಿದಾನಂದಮೂರ್ತಿ

ಕರ್ನಾಟಕ ಸಾಂಸ್ಕೃತಿಕ ಇತಿಹಾಸದ ಸಂಶೋಧನೆಯಲ್ಲಿ ಅತ್ಯಂತ ಹೆಚ್ಚಿನ ಶ್ರದ್ಧೆ ಮತ್ತು ಆಸಕ್ತಿಗಳಿಂದ ಕೆಲಸಮಾಡಿರುವ ಹಿರಿಯ ವಿದ್ವಾಂಸರಾದ ಶಂ.ಬಾ. ಜೋಶಿ ಅವರಿಗೆ, ಅವರ ಮಿತ್ರರು ಮತ್ತು ಅಭಿಮಾನಿಗಳು ಅರ್ಪಿಸಿರುವ ಅಭಿನಂದನ ಗ್ರಂಥ ಇದು. ಸಂಪಾದಕರು ತಮ್ಮ ಆರಂಭದ ಮಾತುಗಳಲ್ಲಿ "ಕರ್ನಾಟಕದ ಇತಿಹಾಸವನ್ನು ಬಿಚ್ಚಿಡುವುದರಲ್ಲಿ, ಅದರ ಆತ್ಮಗೌರವವನ್ನು ಎತ್ತಿ ಹಿಡಿಯುವಲ್ಲಿ ಜೀವನದುದ್ದಕ್ಕೂ ಸತ್ಯವನ್ನು ಒಂದು ದೈವವಾಗಿ ಆರಾಧಿಸಿಕೊಂಡು ಬಂದಿರುವಲ್ಲಿ ಜೋಶಿಯವರಂತಹ ವ್ಯಕ್ತಿಗಳು ಬಹಳ ಜನ ದೊರಕಲಾರರು. ಅಧಿಕಾರ, ಸ್ಥಾನ, ಮಾನ, ಧನ ಎಲ್ಲ ಅನುಕೂಲಗಳಿದ್ದರೂ, ಶೈಕ್ಷಣಿಕವಾಗಿ ಜಡರಾಗಿಯೇ ಉಳಿಯುವ ಉದಾಹರಣೆಗಳೇ ಹೆಚ್ಚಾಗಿ ನಮ್ಮ ಕಣ್ಣ ಮುಂದಿರುವಾಗ, ಡಾ. ಜೋಶಿಯವರು ಅಂತಶ್ಚೈತನ್ಯದ ಉಜ್ವಲ ವಿರಳ ನಿದರ್ಶನವಾಗಿ ನಮ್ಮ ಮುಂದೆ ನಿಲ್ಲುತ್ತಾರೆ..." ಎಂದು ಹೇಳಿರುವುದು ಸೂಕ್ತವಾಗಿದೆ. ಜೊತೆಗೆ ಮಾಮೂಲಿ ಅಭಿನಂದನ ಗ್ರಂಥಗಳಲ್ಲಿ ಸಾಮಾನ್ಯವಾಗಿ ಆಗುವಂತೆ—ದೊಡ್ಡ ದೊಡ್ಡ ಪದಪುಂಜಗಳ, ಗುಣವಾಚಕಗಳ ಅಬ್ಬರದಲ್ಲಿ ಎಲ್ಲೋ ಸತ್ಯವನ್ನು ಮುಳುಗಿಸಿ ಬಿಡುವ ಕೆಲಸ ಇಲ್ಲಿ ಆಗಿಲ್ಲ ; ಜೋಶಿ

ಯವರ ವೈಯುಕ್ತಿಕ ಜೀವನಕ್ಕೆ ಸಂಬಂಧಿಸಿದ ನಾಲ್ಕು ಲೇಖನಗಳನ್ನು ಮಾತ್ರ ಇಲ್ಲಿ ಅಳವಡಿಸಲಾಗಿದೆ. ಉಳಿದಂತೆ ಒಟ್ಟು ಎಂಟುನೂರ ಇಪ್ಪತ್ತು ಪುಟಗಳಷ್ಟು ವಿಸ್ತಾರವಾದ ಈ ಕೃತಿಯಲ್ಲಿ ಕರ್ನಾಟಕದ ಹಿರಿಕಿರಿಯ ವಿದ್ವಾಂಸರಿಂದ ಅವರವರ ಆಸಕ್ತಿಗನುಗುಣವಾಗಿ ರಚಿತವಾಗಿರುವ ಅರವತ್ತನಾಲ್ಕು ಬರಹಗಳಿವೆ. "ವಾಸ್ತವ ವಾಗಿ, ಜೋಶಿಯವರೆಂದರೆ ಮುಖ್ಯವಾಗಿ ಅವರ ಬರಹಗಳು ; ಆ ಕಾರಣದಿಂದಲೇ ಅವರ ಕೃತಿಗಳ ಸಮೀಕ್ಷೆ ಮಾಡುತ್ತ ಅವರ ವಿಚಾರಗಳನ್ನು ವ್ಯಾಖ್ಯಾನಿಸುವ ಒಂಬತ್ತು ಅಭ್ಯಾಸಪೂರ್ಣ ಲೇಖನಗಳನ್ನು ಇಲ್ಲಿ ಸೇರಿಸಿದ್ದೇವೆ. ಉಳಿದ ಎಲ್ಲ ಲೇಖನಗಳೂ ಬೇರೆ ಬೇರೆ ಶೈಕ್ಷಣಿಕ ಶಿಸ್ತುಗಳಿಗೆ ಸೇರಿದುವು. ಆ ದೃಷ್ಟಿಯಿ ದ 'ಅಧ್ಯಯನ' ಎಂಬ ಶೀರ್ಷಿಕೆ ಈ ಸಂಪುಟಕ್ಕೆ ಉಚಿತವೆಂದೇ ಹೇಳಬೇಕು" ಎಂಬ ಚಿದಾನಂದಮೂರ್ತಿಯವರ ನಿಲುವು ಗಮನಾರ್ಹವಾದುದಾಗಿದೆ. ಈ ವರ್ಷ ಪ್ರಕಟ ವಾಗಿರುವ ಅಭಿನಂದನ ಗ್ರಂಥಗಳಲ್ಲಿ ಗುಣ ಮತ್ತು ಗಾತ್ರಗಳೆರಡರ ದೃಷ್ಟಿಯಿಂದಲೂ ಮೊದಲ ಮನ್ನಣೆಗೆ ಅರ್ಹವಾದ ಕೃತಿಯೆಂದರೆ "ಅಧ್ಯಯನ"ವೇ ಆಗಿದೆ.

ಜೋಶಿಯವರ ವೈಯಕ್ತಿಕ ಬದುಕಿಗೆ ಸಂಬಂಧಿಸಿದಂತೆ ಇರುವ ಆರಂಭದ ನಾಲ್ಕು ಪುಟ್ಟ ಲೇಖನಗಳಲ್ಲಿ—ಅವರು ಬೆಳೆದು ಬಂದ ದಾರಿ ; ಗುರು, ಗೆಳೆಯ ಹಾಗೂ ವಿದ್ವಾಂಸರಾಗಿ ಅವರ ಹಿರಿಮೆ-ಗರಿಮೆಗಳನ್ನು ಗುರುತಿಸಲಾಗಿದೆ. ಶಂ.ಬಾ ಅವರ ಬರಹಗಳ ತಾತ್ವಿಕ ಹಿನ್ನೆಲೆಯಲ್ಲಿ ರಚಿತವಾಗಿರುವ ಲೇಖನಗಳು—ನಮ್ಮ ವಿವಿಧ ಬಗೆಯ ಓದುಗ ಪ್ರಪಂಚಕ್ಕೆ ಬಹಳಸಲ 'ಕಠಿಣ'ವೆನ್ನಿಸಬಹುದಾದ ಮೂಲ ಗ್ರಂಥಗಳ ವಿವೇಚನೆಯಿಂದ ಹೊರಟು ಕೆಲವು ಕಡೆ ಹೊಸ ಚರ್ಚೆಯನ್ನು ಸಹ ಆರಂಭಿಸಿವೆ. ಅದರಲ್ಲೂ "ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆಯ ಕೇಂದ್ರ ಪ್ರಮೇಯಗಳೂ ಅವುಗಳ ಮೌಲಿಕ ವಿಶೇಷಗಳೂ", "ಶಂಬಾ ಜೋಶಿಯವರ ಸಾಂಸ್ಕೃತಿಕ ಅಧ್ಯಯನದ ನೆಲೆಗಳು—ಒಂದು ಪ್ರವೇಶ", "ಸಂಸ್ಕೃತಿಯಲ್ಲಿ 'ರಾತ್ರಿ'—'ಹಗಲು'ಗಳ ವೈಷಮ್ಯ", "ಮಾನವಶಾಸ್ತ್ರ ಮತ್ತು ಶಂಬಾ ಜೋಶಿಯವರ ವಿಚಾರ ಗಳು"—ಮುಂತಾದ ಲೇಖನಗಳು ಈ ದಿಕ್ಕಿನಲ್ಲಿ ತುಂಬಾ ಉಪಯುಕ್ತವಾದ ಬರಹ ಗಳಾಗಿವೆ. ಹಾಗೆಯೇ ವೈದಿಕ ಸಂಸ್ಕೃತಿ, ಭಾರತೀಯ ವಾಸ್ತುಶಿಲ್ಪ, ಧರ್ಮ, ವೈಚಾರಿಕತೆ, ಕಾವ್ಯಮೀಮಾಂಸೆ, ಶಾಸನಗಳು, ಜಾನಪದ, ಭಾಷೆ, ಛಂದಸ್ಸು, ಹಳಗನ್ನಡ ಹಾಗೂ ನಡುಗನ್ನಡ ಕವಿಗಳು ಮತ್ತು ವಚನಸಾಹಿತ್ಯವನ್ನು ಕುರಿತು ವಿವಿಧ ಲೇಖಕರು ಗಂಭೀರವಾಗಿ ಚರ್ಚಿಸಿದ್ದಾರೆ. ಇದನ್ನೆಲ್ಲ ಕುರಿತು ಈ ಪುಟ್ಟ ಸಮೀಕ್ಷೆಯಲ್ಲಿ ವಿವರವಾಗಿ ಬರೆಯಲು ಸಾಧ್ಯವಾಗುತ್ತಿಲ್ಲ. ತಮ್ಮ ಈ ಇಳಿ ವಯಸ್ಸಿನ ತನಕ ಉದ್ದಕ್ಕೂ ಎಂದೂ ಭಾವುಕತೆಗೆ ಪಕ್ಕಾಗದೆ ನಿರಂತರವಾಗಿ ಸತ್ಯಾ ನ್ವೇಷಣೆಯನ್ನಷ್ಟೇ ಜೀವಿತದ ಪರಮಗುರಿಯನ್ನಾಗಿಸಿಕೊಂಡು ಬಂದ ಶಂಬಾ ಜೋಶಿಯವರಂಥ ಸತತಾಧ್ಯಯನಶೀಲ ಹಿರಿಯ ಚೇತನಕ್ಕೆ ಅರ್ಪಿಸಲಾಗಿರುವ ಈ ಬಗೆಯ ಗೌರವವು ಸೂಕ್ತವೂ ಅನುಕರಣೀಯವೂ ಆಗಿದೆ.

ರಾಜಮಾರ್ಗ (ಡಾ॥ ಜಿ. ಪಿ. ರಾಜರತ್ನಂ ನೆನಪಿನ ಸಂಪುಟ)

ಬೆಂಗಳೂರಿನ ಜಿ. ಪಿ. ರಾಜರತ್ನಂ ಸ್ಮಾರಕ ಸಮಿತಿಯವರು ಈ ಸಂಪುಟವನ್ನು ಹೊರತರುತ್ತಿರುವ ಬಗ್ಗೆ ವಿ. ಸೀತಾರಾಮಯ್ಯನವರು ಪ್ರಸ್ತಾಪಿಸುತ್ತ "ರಾಜರತ್ನಂ ಹೆಸರಿನಲ್ಲಿ ಈ ಪುಸ್ತಕ ಅಚ್ಚುಮಾಡುತ್ತಿದ್ದೀರಿ. ಅವರ ಹೆಸರಿನಲ್ಲಿ ಬರುವ ಗ್ರಂಥ ಉತ್ತಮವಾಗಿರಬೇಕು. ಅವರ ಜೀವಿತವೆಲ್ಲ ಸಾಹಿತ್ಯಕ್ಕೆ ಮೀಸಲಾದದ್ದು...ಅವರು ಮಾಡಿರುವ ಕೆಲಸ ಅತ್ಯುಪಯುಕ್ತವಾದದ್ದು. ಅವರು ಸಾಹಿತಿಯಾಗಿ, ದೊಡ್ಡದಾಗಿ ಕಾರ್ಯ ಮಾಡಿದ್ದಾರೆ. ಬುದ್ಧಧರ್ಮ, ಜೈನಧರ್ಮ, ನಮ್ಮ ಹಿಂದೂ ಧರ್ಮಗಳಲ್ಲಿ ಅವರು ಮಾಡಿರುವ ಕೆಲಸ, ಉಪನ್ಯಾಸಗಳು ಬಹುಜನಪ್ರಿಯವಾದವು. ಅವರ ಕೀರ್ತಿ ಮಕ್ಕಳ ಸಾಹಿತ್ಯದಲ್ಲಿ ವಿಶೇಷವಾದ್ದು. ಬಹುಕಾಲ ಅವರ ಸೇವೆ ಉಳಿಯು ವಂತಾದ್ದು" ಎಂಬ ಮಾತುಗಳನ್ನು ಬರೆದಿದ್ದರು. ರಾಜರತ್ನಂ ಅವರ ಈ ಹಿರಿಮೆ ಯನ್ನು ಅರ್ಥಮಾಡಿಕೊಂಡರುವ ಸ್ಮಾರಕ ಸಮಿತಿಯು 'ರಾಜಮಾರ್ಗ' ಸಂಪುಟ ವನ್ನು ಅಷ್ಟೇ ಪ್ರೀತ್ಯಾದರಗಳ ಮೂಲಕ ಸುಂದರವಾಗಿ ಹೊರತಂದಿದೆ.

'ಆತ್ಮೀಯ', 'ಸಾಹಿತ್ಯ', 'ಸಾಧನೆ' ಮತ್ತು 'ಆರದ ಬೆಳಕು'—ಎಂಬ ನಾಲ್ಕು ಪ್ರಮುಖ ಭಾಗಗಳಲ್ಲಿ—ಒಟ್ಟು 555 ಪುಟಗಳ ಈ ಗ್ರಂಥವು—ಹಲವಾರು ಲೇಖನಗಳನ್ನು ಒಳಗೊಂಡಿದೆ. ರಾಜರತ್ನಂ ಅವರನ್ನು ಅವರ ಜೀವನದ ವಿವಿಧ ಘಟ್ಟಗಳಲ್ಲಿ ಹತ್ತಿರದಿಂದ ನೋಡಿತಿಳಿದವರು, ಅಭಿಮಾನಿಗಳು, ಹಿರಿಯರು, ಅವರ ಓರಗೆಯವರು, ಕಿರಿಯರು ಹಾಗೂ ತೀರಾ ಈಚಿನವರು ಕೂಡ ಸೇರಿದಂತೆ ಹಲವಾರು ತಲೆಮೊರೆಗಳ ಲೇಖಕರು 'ಆತ್ಮೀಯ' ವಿಭಾಗದಲ್ಲಿ ಬರೆದಿದ್ದಾರೆ. 'ಅನಸೂಯಾ ಸಾಹಿತಿ'ಯಾಗಿದ್ದ ಅವರು ಅತ್ಯಂತ ಜನಪ್ರಿಯರೂ, ಶಕ್ತರೂ, ಹೃದಯವಂತರೂ ಆಗಿದ್ದ ವಿವರಗಳನ್ನು ಇಲ್ಲಿಯ ಬರಹಗಳಲ್ಲಿ ನಾವು ಕಾಣ ಬಹುದಾಗಿದೆ. ಎ. ಆರ್. ಕೃ., ಡಿ.ವಿ.ಜಿ., ಗೋವಿಂದಪೈ, ಮಾಸ್ತಿ, ಕಾರಂತ, ಬೇಂದ್ರೆ ಕೈಲಾಸಂ, ಅನಕೃ, ಗೊರೂರು, ಕೆ.ಎಸ್.ನ., ದೇಜಗೌ, ಅಡಿಗ ಮುಂತಾದ ಖ್ಯಾತ ಸಾಹಿತಿಗಳು ಈ ಬಗ್ಗೆ ಮುಕ್ತವಾಗಿ ಬರೆದಿರುವ ಹೃದಯಸ್ಪರ್ಶಿಯಾದ ಚಿತ್ರಣಗಳು ಇಲ್ಲಿವೆ. ವ್ಯಕ್ತಿ, ಸಾಹಿತಿ, ಅಧ್ಯಾಪಕ, ವಾಗ್ಮಿ ಮತ್ತು ತಾವು ನಂಬಿದ ಮೌಲ್ಯಗಳಿಗೆ ತಮ್ಮನ್ನು ಸಂಪೂರ್ಣ ತೆತ್ತುಕೊಂಡು ದುಡಿಯುವ ಸಾಧಕನಾಗಿ ರಾಜರತ್ನಂ ಹಲವು ಹನ್ನೊಂದು ಬಗೆಯ ಸಾರ್ಥಕ ಜೀವಿಯಾಗಿ ಸುತ್ತಲ ಹಿತೈಷಿಗಳಿಗೆ, ಅಭಿಮಾನಿ ಬಳಗಕ್ಕೆ ಕಂಡಿರುವ ರೀತಿಯು 'ಆತ್ಮೀಯ' ಭಾಗದ ಬಹುಪಾಲು ಲೇಖನಗಳಲ್ಲಿ ಆಪ್ತವಾಗಿ ತಟ್ಟುತ್ತದೆ.

'ಸಾಹಿತ್ಯ' ವಿಭಾಗದಲ್ಲಿ ರಾಜರತ್ನಂ ಅವರ ಕೃತಿಗಳನ್ನು ಕುರಿತು ಕನ್ನಡದ ಕೆಲವು ಮುಖ್ಯ ಲೇಖಕರೂ ಸೇರಿದಂತೆ ವಿಮರ್ಶಕರು ಬರೆದಿರುವ ವಿಮರ್ಶಾ ಬರಹ

ಗಳು ಸೇರಿವೆ. 'ರತ್ನನ ಪದಗಳು' ಕುರಿತು ಬೆಟಗೇರಿ ಕೃಷ್ಣಶರ್ಮ, "ಗಂಡುಗೊಡಲಿ"ಯ ಬಗ್ಗೆ ಸಾ. ಶಿ. ಮರುಳಯ್ಯ, 'ಪುರುಷ ಸರಸ್ವತಿ' ಕುರಿತು ಎಲ್. ಎಸ್. ಶೇಷಗಿರಿರಾವ್, 'ಕಂದನ ಕಾವ್ಯ—ಮಾಲೆ'ಯ ಬಗ್ಗೆ ಹಾ. ಮಾ. ನಾಯಕ ಹಾಗೂ 'ವಿಚಾರ ರಶ್ಮಿ' ಕುರಿತು ಜಿ. ಎಸ್. ಶಿವರುದ್ರಪ್ಪನವರು ಬರೆದಿರುವ ಲೇಖನಗಳು ರಾಜರತ್ನಂ ಅವರ ಸಾಹಿತ್ಯದ ಪ್ರಧಾನ ಸತ್ವವನ್ನು ಗುರುತಿಸಿರುವುದನ್ನು ಕಾಣಬಹುದು. ವ್ಯಕ್ತಿಯಾಗಿ ರಾಜರತ್ನಂ ಮತ್ತು ಅವರ ಸಾಹಿತ್ಯಕ ಸಾಧನೆಯನ್ನು ಕುರಿತು ಈಗಾಗಲೇ ಬೇರೆ ಬೇರೆಯ ಪತ್ರಿಕೆ ಮತ್ತು ಕೃತಿಗಳಲ್ಲಿ ಪ್ರಕಟವಾಗಿದ್ದ ಅತ್ಯಂತ ಉಪಯುಕ್ತ ಭಾಗಗಳನ್ನು ಸಹ ಈ ನೆನಪಿನ ಗ್ರಂಥದಲ್ಲಿ ಸಂದರ್ಭೋಚಿತವಾಗಿ ಹೊಸ ಲೇಖನಗಳ ಜತೆಗೆ ಬಳಸಿಕೊಳ್ಳಲಾಗಿದೆ.

ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ, ಗೋಖಲೆ ಸಂಸ್ಥೆ ಮತ್ತು ಗಾಂಧೀ ಸಾಹಿತ್ಯ ಸಂಘಗಳಲ್ಲಿ ರಾಜರತ್ನಂ ಅವರು ಹೆಚ್ಚು ಕ್ರಿಯಾಶೀಲರಾಗಿ ದುಡಿಯುತ್ತಿದ್ದ ರೀತಿಯನ್ನು ಕ್ರಮವಾಗಿ ಶ್ರೀನಿವಾಸರಾಜು, ವೆಂಕಟರಮಣನ್ ಮತ್ತು ಶ್ರೀನಿವಾಸಯ್ಯನವರು ಈ ಕೃತಿಯ ಮೂರನೆಯ ಭಾಗವಾದ 'ಸಾಧನೆ'ಯಲ್ಲಿ ವಿವರವಾಗಿ ಚಿತ್ರಿಸಿದ್ದಾರೆ. ಜೊತೆಗೆ ಶಿಶುಸ್ನೇಹಿಯೂ ಆಗಿದ್ದ ಈ ಸಾಹಿತಿಯು ಮಕ್ಕಳ ಸಾಹಿತ್ಯದ ಬಗ್ಗೆ ಹೊಂದಿದ್ದ ಅರ್ಥಪೂರ್ಣ ಕಾಳಜಿ ಮತ್ತು ಸಾಹಿತ್ಯದ ಅತ್ಯುತ್ತಮ ಭಾಗಗಳನ್ನು ಕುರಿತು ನೀಡುತ್ತಿದ್ದ ವ್ಯಾಖ್ಯಾನ, ಉಪನ್ಯಾಸಗಳ ಪರಿಚಯವೂ ಇಲ್ಲಿದೆ.

ಕೊನೆಯಲ್ಲಿ 'ಆರದ ಬೆಳಕು' ಎಂದು ಕರೆಯಲಾಗಿರುವ ಭಾಗದಲ್ಲಿ ನೀಲತ್ತಹಳ್ಳಿ ಕಸ್ತೂರಿಯವರು ತೊಂಬತ್ತು ಪುಟಗಳ ಸುದೀರ್ಘ 'ರಾಜರತ್ನಂ—ಜೀವನ ಚಿತ್ರ'ವನ್ನು ನೀಡಿದ್ದಾರೆ. ರತ್ನಂ ಅವರ ಬಗ್ಗೆ ಕಂಡು, ಕೇಳಿ, ಓದಿ, ಅನುಭವಿಸಿದ ಅನೇಕ ಬಗೆಯ ಸಂಗತಿಗಳ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಈ ಚಿತ್ರವು ತುಂಬು ಲವಲವಿಕೆಯಿಂದ ಕೂಡಿದ್ದು, ಕನ್ನಡ ಸಾಹಿತ್ಯಾಸಕ್ತರಿಗೆ ಪ್ರಿಯವಾಗುತ್ತದೆ ; ರಾಜರತ್ನಂ ಅವರ ವ್ಯಕ್ತಿತ್ವ ಮತ್ತು ಸಾಹಿತ್ಯದ ಬಗ್ಗೆ ಹೊಸಬರಿಗೆ ಆಸಕ್ತಿಯನ್ನು ಕೆರಳಿಸುತ್ತದೆ. ಜೊತೆಗೆ—ತಮ್ಮ ವೃದ್ಧಾಪ್ಯದ ದಿನಗಳಲ್ಲಿ ರತ್ನಂ ಅವರು ಬುದ್ಧ, ಬಸವ, ಮಹಾವೀರ, ಗಾಂಧೀಜಿ ಅವರಿಗಿಂತಲೂ ಒಂದು ಕೈ ಮಿಗಿಲೆನ್ನುವಂತೆ 'ಸತ್ಯಸಾಯಿ'ಯನ್ನು ಹಚ್ಚಿಕೊಂಡಿದ್ದು ; ಆತ ಸರ್ವರುಜಾಪಹಾರಿಣಿ ಎನ್ನುವಂತೆ ಯಥೇಚ್ಛ ವಿಭೂತಿಕೊಟ್ಟು, ಇವರು ನಿಂತರೆ ಕೂತರೆ ಅದನ್ನು ಪ್ರಸಾದವಾಗಿ ಉಪಯೋಗಿಸುತ್ತಿದ್ದುದು ; ಬಂಗಾರದ ಉಂಗುರ, ಸರ, ವಾಚುಗಳನ್ನು ಸತ್ಯಸಾಯಿ 'ಸ್ವಯಂ ಸೃಷ್ಟಿ'ಸಿ ತಮಗೆ ನೀಡಿದರೆಂದು ಇವರು ನಂಬುವುದು—ಇತ್ಯಾದಿ ವಿವರಗಳು ಈ 'ಜೀವನಚಿತ್ರವೂ' ಸೇರಿದಂತೆ ಕೃತಿಯ ಬೇರೆ ಬೇರೆ ಭಾಗಗಳಲ್ಲಿ (ಪು. 89, 96, 109, 168, 508, 509, 513–520) ಗೌರವಾದರಗಳೊಡನೆ ಸೇರಿಕೊಂಡಿವೆ.

ಈ ಪ್ರಕರಣದ ಕಾರಣದಿಂದಾಗಲೇ ರಾಜರತ್ನಂ ಅವರಿಗೆ ವೈಯಕ್ತಿಕವಾಗಿ ಅತ್ಯಂತ ಆನಂದದಾಯಕವೂ ಮತ್ತು ಈ ಬಗ್ಗೆ ಅನೇಕ ಸಹಸಾಹಿತಿಗಳ, ವಿಚಾರ ವಾದಿಗಳ ಟೀಕೆಗಳಿಂದ ಇನ್ನಿಲ್ಲದಂಥ ಮುಜುಗರವೂ ಏಕಕಾಲದಲ್ಲಿಯೇ ಉಂಟಾಗಿರುವ ಸ್ಥಿತಿಯು ಈ ಮೂಲಕ ಸ್ಪಷ್ಟವಾಗಿ ತಿಳಿಯಲ್ಪಡುತ್ತದೆ. ಈ ಬಗೆಯ ಟೀಕೆಗಳು ಎದುರಾದಾಗ ರತ್ನಂ ಅವರು "ನನ್ನ ವೈಯಕ್ತಿಕ ವಿಚಾರ ಇವರಿಗೇಕೆ? ಯಾರಿಗೂ ತೊಂದರೆಯಾಗದ...ನನಗೆ ಸಂತೋಷವಾಗುವಂತಹ ಯಾವುದೇ ಕಾರ್ಯವಿರಲಿ, ಅದನ್ನು ಇವರು ಯಾಕೆ ಟೀಕಿಸಬೇಕು?" ಎಂಬ (ಪು. 168) ಸೌಮ್ಯವಾದ ಸಿದ್ಧ-ಉತ್ತರವನ್ನು ಸದಾ ಇಟ್ಟುಕೊಂಡೇ ಇದ್ದರು.

ರಾಜರತ್ನಂ ಅವರಂಥ ನಿಷ್ಠಾವಂತ ಸಾಹಿತಿಗೆ, ಅಖಂಡ ಸಾಹಿತ್ಯೋಪಾಸಕರಿಗೆ "ರಾಜಮಾರ್ಗ" ನೆನಪಿನ ಗ್ರಂಥವು ಬೆಲೆಯುಳ್ಳ ಕಾಣಿಕೆಯಾಗಿದೆ.

ರಸಷಷ್ಟಿ (ಸಂ) ಕೆ. ಸಚ್ಚಿದಾನಂದಯ್ಯ, ಕೆ. ಆರ್. ಕಮಲೇಶ್

ಕನ್ನಡನಾಡು, ನುಡಿ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕಳೆದ ಕೆಲವು ದಶಕ ಗಳಿಂದ - ಅಹರ್ನಿಶಿ ದುಡಿದರೂ; ಅರ್ಧದಶಕಕ್ಕೂ ಹೆಚ್ಚುಕಾಲ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ಕೆಲಸಮಾಡಿದವರೂ ಆದ ಪ್ರೊ॥ ದೇಜಗೌ ಅವರಿಗೆ ಅರವತ್ತು ವರ್ಷಗಳು ತುಂಬಿದ ನೆನಪಿಗಾಗಿ ಹೊರತಂದಿರುವ ಅಭಿನಂದನ ಗ್ರಂಥ ಇದಾಗಿದೆ. ಬದುಕಿನ ಬೇರೆಬೇರೆ ವಲಯಗಳಲ್ಲಿ ಅಪಾರ ಅಭಿಮಾನಿಗಳನ್ನು ಒಳಗೊಂಡಿರುವ ದೇಜಗೌ ಅವರಿಗೆ ಅರ್ಪಿತವಾಗಿರುವ ಈ ಕೃತಿಯು ಒಟ್ಟು 936 ಪುಟಗಳಷ್ಟು ದೊಡ್ಡದಾಗಿದ್ದು, ಸುಮಾರು 116 ಮಂದಿ ಆಪ್ತೇಷ್ಟರು ಮತ್ತು ಅಭಿಮಾನಿ ಲೇಖಕರ ಬರಹಗಳನ್ನು ಒಳಗೊಂಡಿದೆ. ಈ ವರ್ಷ ಹೊರ ಬಂದಿರುವ ಅಭಿನಂದನ ಗ್ರಂಥಗಳಲ್ಲಿ ಗಾತ್ರದ ದೃಷ್ಟಿಯಿಂದ ದೊಡ್ಡದು ಇದೇ ಆಗಿದೆ. ಇದಕ್ಕೆ ಕೆಲವು 'ಹರಕೆ'ಯ ಮಾತುಗಳನ್ನು ಬರೆಯುವ ನೆಪದಲ್ಲಿ ಕುವೆಂಪು ಅವರು ತಮ್ಮ ಆ ಪುಟ್ಟ ಬರಹದ ಪೂರ್ತಾ ನಾಡಿನಾದ್ಯಾಂತ ತುರ್ತಾಗಿ ನಡೆಯು ಬೇಕಾಗಿರುವ ಹೊಸ ಸಾಂಸ್ಕೃತಿಕ ವಿಚಾರ ಕ್ರಾಂತಿಯ ಕಡೆಗೆ ಎಲ್ಲರ ಗಮನವನ್ನು ಸೆಳೆಯುತ್ತ "...ಕೆಳವರ್ಗದ ಜನ ಈ ಮತಮೌಢ್ಯದ ಬಲೆಯಲ್ಲಿ ಸಿಕ್ಕಿ ಮೂರು ನಾಲ್ಕು ಸಾವಿರ ವರ್ಷಗಳಿಂದ ನವೆಯುತ್ತಿದ್ದಾರೆ; ಶೋಷಣೆಗೆ ಒಳಗಾಗಿದ್ದಾರೆ. ಮೊದಲು ಅವರ ತಲೆಯಲ್ಲಿ ವೈಚಾರಿಕ ಬುದ್ಧಿ ಹಾಗೂ ವೈಜ್ಞಾನಿಕ ದೃಷ್ಟಿಕೋನ ಗಳನ್ನು ತಂದು ತುಂಬಿ, ಪುರೋಹಿತಶಾಹಿಯ ಶೋಷಣೆಯಿಂದ ಪಾರಾಗುವಂತೆ ನಾವು ಅವರಿಗೆ ಮೆದುಳಿನ ಬೆಳಕು ಕೊಡುವುದು ಬಹುಮುಖ್ಯ" ಮುಂತಾದ ಅತಿ ಮುಖ್ಯ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ.

ಆರಂಭದಲ್ಲಿನ ಕುವೆಂಪು, ಬೇಂದ್ರೆಯುವರ ಹರಕೆ, ಹಾರೈಕೆಗಳನ್ನು ದಾಟಿ ಮುಂದೆ ಹೋದರೆ—ದೇಜಗೌ ಅವರ ಬಹುಮುಖ ವ್ಯಕ್ತಿತ್ವವನ್ನು ಕುರಿತು ಬರೆದ ಅನೇಕ ಲೇಖನಗಳು ಎದುರಾಗುತ್ತವೆ. ಪುತಿನ, ರಂಗಣ್ಣ, ಗೊರೂರು, ನಿಜಲಿಂಗಪ್ಪ, ಕಡಿದಾಳ್, ಶಂಕರೇಗೌಡ, ಹರಿದಾಸಭಟ್ಟ, ಕಣವಿ, ಕಟ್ಟೀಮನಿ, ಅನಂತಮೂರ್ತಿ ಮುಂತಾದ ಲೇಖಕರು ದೇಜಗೌ ಅವರನ್ನು ಹತ್ತಿರದಿಂದ ಕಂಡು, ತಾವು ಅರ್ಥ ಮಾಡಿಕೊಂಡ ರೀತಿಯಲ್ಲಿ ವರ್ಣಿಸಿದ್ದಾರೆ. ಆದರೆ ಈ ಎಲ್ಲ ಲೇಖನಗಳ ಗುಂಪಿನಲ್ಲಿ ಕೆ. ಶಿವರಾಮ ಐತಾಳರ 'ಕನ್ನಡ ಮತ್ತು ನಾನು' ಎಂಬ ಬರಹ ಮಾತ್ರ ತೀರಾ ಕುತೂಹಲಕಾರಿಯಾದ ಹೊಸಕಳೆಯಿಂದ ಮಿಂಚುತ್ತದೆ. ಅತ್ಯಂತ ಆಪ್ತವಾಗಿ, ನಿಷ್ಪಕ್ಷಪಾತವಾಗಿ, ಕಟುವಾಗಿ, ನಿರ್ಭೀತಿಯಿಂದ ತನಗೆ ತಿಳಿದ ಸತ್ಯವನ್ನೆಲ್ಲ ಹೇಳಿ ಹಗುರಾಗುತ್ತಿದ್ದೇನೆನ್ನುವ ಧಾಟಿಯಲ್ಲಿ ಈ ಲೇಖನ ಮುಂದುವರಿಯುತ್ತದೆ. ತಾನೂ ಕೂಡಿದಂತೆ ಅಧಿಕಾರಸ್ಥ ದೇಜಗೌ ಹಾಗೂ ಅವರ ಪರಿವಾರ ದೇವತೆಗಳೆಲ್ಲರ ಇತಿಮಿತಿ ಮತ್ತು ಪ್ರಮುಖ ಅರ್ಹತೆಯನ್ನು ಕುರಿತು ಐತಾಳರು ಬರೆದಿದ್ದಾರೆ. ಸ್ವಯಂ ದೇಜಗೌ ಸಹ ಬೆಚ್ಚಿಬೀಳುವಂತಹ ಕೆಲವು ಘಟನೆಗಳ ಪ್ರಸ್ತಾಪವು ಅಲ್ಲಿರುವುದರ ಜೊತೆಗೆ ಇಡೀ ಲೇಖನವು ಇನ್ನೊಂದು ದೃಷ್ಟಿಯಿಂದ ಏಕಮುಖವಾದುದ್ದಾಗಿದೆ. ಏಕೆಂದರೆ, ಇಲ್ಲಿ ಕಟುಟೀಕೆಗೆ ಒಳಗಾಗಿರುವ ಜನರು ತಮ್ಮ ಅಂತರಂಗದ ದನಿಯನ್ನು ನಿಶ್ಶಬ್ದದಲ್ಲಿ ಯಾವತ್ತೋ ಕೇಳಿಸಿಕೊಂಡಲ್ಲಿ, ಇಲ್ಲಿ ಸೋತಿದ್ದು ಇನ್ನೆಲ್ಲೋ ಹೇಗೋ ತಾವು ಗೆದ್ದಿರಬಹುದಾದ ಸಾಧ್ಯತೆಗಳು ಸಹ ಇರಬಹುದಲ್ಲ?

'ನನ್ನನ್ನು ನಾನು ಕಂಡಂತೆ' ಎಂಬ ದೇಜಗೌ ಅವರ ಮುಖ್ಯ ಲೇಖನವೊಂದು ಈ ಕೃತಿಯಲ್ಲಿದೆ. ತಾವು ಅಧಿಕಾರದ ದಿನಗಳಲ್ಲಿದ್ದಾಗ ಸದಾ ಹತ್ತಿರವೇ ಇರುತ್ತಿದ್ದ ಕೆಲವರು ಅದು ಹೋದ ಮರುದಿನದಿಂದಲೇ ನಾಪತ್ತೆಯಾದರೆಂದೂ ದೇಜಗೌ ಅವರು ಈ ಲೇಖನದಲ್ಲಿ ಪ್ರಧಾನವಾಗಿ ಪ್ರಸ್ತಾಪಿಸಿ "ಅಧಿಕಾರದಿಂದ ನಿವೃತ್ತನಾದ ನಂತರ ಬಾಳಿನ ಗುಟ್ಟು ರಟ್ಟಾದಂತಾಯಿತು ; ತಾರತಮ್ಯ ಪ್ರಜ್ಞೆ ಮತ್ತು ಅಂತ ರ್ಮುಖತೆಯ ಪರಿಣಾಮವಾಗಿ ವಿವೇಕ ಮೂಡಿ, ಹಿಂದಣೆಸಕಗಳ ಸರಿ-ತಪ್ಪು ಸ್ಪಷ್ಟ ವಾಯಿತು" ಎಂದು ನೊಂದುಕೊಂಡಿದ್ದಾರೆ. ಈ - ಬಗೆಯ 'ಅಧಿಕಾರೋತ್ತರ ದೇಜಗೌ' ಬದುಕನ್ನು ಕುರಿತು ಇಲ್ಲಿನ ಲೇಖನಗಳಲ್ಲಿ ಇತರರು ಸಹ ಅಲ್ಲಲ್ಲಿ ಪ್ರಸ್ತಾಪಿಸಿದ್ದಾರೆ.

ದೇಜಗೌ ಅವರು ಈ ನಡುವೆಯೂ ಅತ್ಯುತ್ಸಾಹ ಮತ್ತು ಶ್ರದ್ಧೆಗಳ ಮೂಲಕ ಕೆಲವು ಸಂಘ, ಸಂಸ್ಥೆ ಮತ್ತು ಟ್ರಸ್ಟ್‌ಗಳನ್ನು ಕಟ್ಟಲು ನೆರವಾದುದನ್ನು ವಿವರಿಸುವ ನಾಲ್ಕು ಲೇಖನಗಳು ಇಲ್ಲಿ ಸೇರಿವೆ. ಕನ್ನಡದ ಅಗ್ರಗಣ್ಯ ಗದ್ಯಲೇಖಕರಲ್ಲಿ ಒಬ್ಬರಾದ ಇವರು ಎಪ್ಪತ್ತಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 36 ಕೃತಿ ಗಳನ್ನು ವಿವಿಧ ಲೇಖಕರು ವಿಮರ್ಶಿಸಿದ್ದಾರೆ. ಪರಿಚಯ, ಮೆಚ್ಚುಗೆ, ಸಮೀಕ್ಷೆ

ಯಿಂದ ಮೊದಲಾಗಿ ಎಲ್ಲ ಬಗೆಯ, ಮಟ್ಟಗಳ ವಿಮರ್ಶೆಯನ್ನು ಸಹ ಇಲ್ಲಿ ಕಾಣಬಹುದಾಗಿದೆ. ಜೊತೆಗೆ ಭಾಷಾಂತರ, ಸಂಪಾದನೆ, ಭಾಷಾವಿಜ್ಞಾನ, ಜಾನಪದ, ವಿಮರ್ಶೆ, ವಿಚಾರ, ವ್ಯಾಖ್ಯಾನ ಮುಂತಾದ ಕ್ಷೇತ್ರಗಳಲ್ಲಿ ಆಗಿರುವ ದೇಜಗೌ ಅವರ ಸಾಧನೆಯನ್ನು ವಿವರಿಸುವ ಲೇಖನಗಳು ಈ ಕೃತಿಯ ಇನ್ನೆರಡು ವಿಭಾಗಗಳಲ್ಲಿ ಸೇರಿವೆ.

ತಮ್ಮ ಜೀವಿತದ ಅತ್ಯಂತ ಮುಖ್ಯ ಅವಧಿಯಲ್ಲಿ ಹೆಚ್ಚು ಕ್ರಿಯಾಶೀಲರಾಗಿ ನಡೆದುಕೊಂಡ ವ್ಯಕ್ತಿಯೊಬ್ಬರ ಸಾಹಿತ್ಯಕ ಹಾಗೂ ಸಾಹಿತ್ಯೇತರ ಚಟುವಟಿಕೆಗಳ ಬೃಹತ್ ಸಮೀಕ್ಷೆಯನ್ನು 'ರಸಪೃಷ್ಟಿ' ಅಭಿನಂದನ ಗ್ರಂಥದಲ್ಲಿ ನಿಚ್ಚಳವಾಗಿ ಕಾಣಬಹುದಾಗಿದೆ.

ಚೆಂಬೆಳಕು (ಸಂ) ಜಿ. ಎಸ್. ಕಾಪಸೆ

ನಮ್ಮ ಪ್ರಸಿದ್ಧ ಕವಿಗಳಲ್ಲಿ ಒಬ್ಬರಾದ ಚೆನ್ನವೀರ ಕಣವಿಯವರಿಗೆ ಐವತ್ತು ವರ್ಷಗಳು ತುಂಬಿದ ಸಂದರ್ಭದಲ್ಲಿ ಅಭಿನಂದನಾ ಸೂಚಕವಾಗಿ ಈ ಗ್ರಂಥ ಹೊರಬಂದಿದೆ. 540 ಪುಟಗಳಷ್ಟು ದೊಡ್ಡದಾದ ಈ ಕೃತಿಯಲ್ಲಿ ಕಣವಿಯವರ ವ್ಯಕ್ತಿತ್ವ ಮತ್ತು ಸಾಹಿತ್ಯವನ್ನು ಕುರಿತಾದ ವಿವೇಚನೆಯನ್ನು ನಾಡಿನ ಅನೇಕ ಲೇಖಕರು ನೀಡಿದ್ದಾರೆ. ಆರಂಭದ 116 ಪುಟಗಳಲ್ಲಿ ಈ ಕವಿ "ವಾತ್ಸಲ್ಯಮಯಿಯಾದ ತಂದೆ, ಒಲುಮೆಯ ಪತಿ, ನೈಜ ಹಾಗೂ ಪ್ರಾಮಾಣಿಕ ಸ್ನೇಹಿತ ; ಎಲ್ಲಕ್ಕೂ ಮಿಗಿಲಾಗಿ ಒಳ್ಳೆಯ ಹೃದಯಸಂಪನ್ನ ವ್ಯಕ್ತಿ..."ಯಾಗಿ (ಪು. 116) ತಮ್ಮ ಈತನಕದ ಬದುಕಿನಲ್ಲಿ ನಡೆದುಕೊಂಡದ್ದನ್ನು ಕುರಿತು ಅತ್ಯಂತ ಹೃದಯಂಗಮವಾಗಿ ವರ್ಣಿಸಿರುವ ಹಲವಾರು ಲೇಖನಗಳಿವೆ. ಹಿರಿಯ ಸಾಹಿತಿಗಳಾದ ಮಾಸ್ತಿ, ಕಾರಂತ, ಕುವೆಂಪು, ಗೋಕಾಕ, ಪುತಿನ, ಗೊರೂರು, ಅಡಿಗ, ನರಸಿಂಹಸ್ವಾಮಿ ಮುಂತಾದವರಿಂದ ಮೊದಲುಗೊಂಡು ಲಂಕೇಶರವರೆಗೆ ಅನೇಕರು ತಮ್ಮ ಈ ಬಗೆಯ ಬರಹಗಳ ಮೂಲಕ ಮೃದು-ಮಧುರ ವ್ಯಕ್ತಿತ್ವದ ಕಣವಿಯವರನ್ನು ಪರಿಚಯಿಸಿದ್ದಾರೆ. ವೈಯಕ್ತಿಕ ಬದುಕಿನಲ್ಲಿ ಅಜಾತಶತ್ರುಗಳಾದ ಕಣವಿಯವರು ತಮಗೆ ಪರಿಚಯುದವರು ಮತ್ತು ಒಡನಾಟದವರ ನಡುವೆ ಹೊಂದಿದ್ದ ತುಂಬು ಆತ್ಮೀಯತೆಯ ಕ್ಷಣಗಳು ಈ ಪುಟಗಳಲ್ಲಿ ಸೆರೆಹಿಡಿಯಲ್ಪಟ್ಟಿವೆ.

ಮುಂದಿನ ಭಾಗದಲ್ಲಿ ಕಣವಿಯವರ ಕಾವ್ಯದ ವಿವಿಧ ಮುಖಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ದೈತ್ಯದರ್ಪದ ದುರುಳ ದಾರುಣದ ಹೋರಟೆಗೆ
ಎಂದೆಂದು ನನ್ನ ತಲೆ ಬಾಗದಿರಲಿ ;
ಸಾತ್ವಿಕರ ತಾತ್ವಿಕರ ಹಿರಿಜೀವದೌನ್ನತ್ಯ
ವಿಶ್ವಭಾವಾತ್ಮರಿಗೆ ನಮನವಿರಲಿ

—ಎಂಬ ತಾತ್ವಿಕ ನಿಲುವನ್ನು ಆರಂಭದಿಂದಲೂ ಮೈಗೂಡಿಸಿಕೊಂಡಿರುವ ಈ ಕವಿಯ ಕಾವ್ಯಜೀವನದ ಒಳಗನ್ನು ಅರಿಯುವ, ಪರಿಶೀಲಿಸುವ ಪ್ರಯತ್ನಗಳನ್ನು ಇಲ್ಲಿ ಕಾಣ ಬಹುದಾಗಿದೆ. "ತಮ್ಮ ವ್ಯಕ್ತಿತ್ವದ ಮೂಲದ್ರವ್ಯಗಳಾದ ನಿಸರ್ಗಪ್ರಿಯತೆ, ಮಾರ್ದವತೆ, ಅನುಭಾವಿಕ ದೃಷ್ಟಿ, ಮಾನವೀಯತೆ, ಮೌಲ್ಯಪ್ರಜ್ಞೆ" ಮುಂತಾದುವುಗಳ ಮೂಲಕ ಕಣವಿಯವರ ಕಾವ್ಯವು ವಿವಿಧ ಮಜಲುಗಳಲ್ಲಿ ಕಂಡುಕೊಂಡ ಸಹಜವೂ, ಜೀವಂತವೂ ಆದ ಬೆಳವಣಿಗೆಯನ್ನು ಜಿ. ಎಸ್. ಶಿವರುದ್ರಪ್ಪನವರು ತಮ್ಮ 'ಕಣವಿಯವರ ಕಾವ್ಯದ ಜೀವಂತಗತಿ' ಎಂಬ ಲೇಖನದಲ್ಲಿ ಅತ್ಯಂತ ಸಮರ್ಪಕವಾಗಿ ಚರ್ಚಿಸಿದ್ದಾರೆ. ಹಾಗೆಯೇ ಗೌರೀಶ ಕಾಯ್ಕಿಣಿಯವರ 'ಕಣವಿಯವರ ಕಾವ್ಯದಲ್ಲಿ ಶ್ರುತನಿಯೋಜನ', ಗಿರಡ್ಡಿಗೋವಿಂದರಾಜರ 'ಕಾವ್ಯಮಾರ್ಗ ಮತ್ತು ಶಿಶುಗೀತೆಗಳು' ಶಾಂತಿನಾಥ ದೇಸಾಯಿ ಅವರ 'ಸುನೀತಗಳು', ಶ್ಯಾಮಸುಂದರ ಬಿದರಕುಂದಿಯವರ 'ನವ್ಯಮಾರ್ಗ' ಮತ್ತು ಎಂ. ಚಿದಾನಂದಮೂರ್ತಿಯವರ 'ಕಣವಿಯವರ ಕವಿತೆಗಳ ಛಂದಸ್ಸನ್ನು ಕುರಿತು' ಮುಂತಾದ ಇಲ್ಲಿನ ಲೇಖನಗಳು ಆಯಾಯ ವಿಷಯವನ್ನು ಕುರಿತ ಉತ್ತಮ ಲೇಖನಗಳಾಗಿವೆ. ಪ್ರಧಾನವಾಗಿ ಕಾವ್ಯಮಾಧ್ಯಮದ ಮೂಲಕ ಮೂರು ದಶಕಗಳಷ್ಟು ದೀರ್ಘಕಾಲ ಸಾಧನೆಯನ್ನು ನಡೆಸಿರುವ ಈ ಕಲಾವಿದ ಜೀವದ ಗಂಭೀರ ಪ್ರಯತ್ನಗಳನ್ನು ಇಲ್ಲಿ ವಿವರವಾಗಿ ಗುರುತಿಸಲಾಗಿದೆ. ಜೊತೆಗೆ ಕಣವಿಯವರ ಹತ್ತು ಪ್ರಾತಿನಿಧಿಕ ಕವನಗಳನ್ನು ಆಯ್ದುಕೊಂಡು ಬೇರೆ ಬೇರೆಯ ವಿಮರ್ಶಕರು 'ಬಿಡಿ ಕವಿತೆಗಳ ವಿಶ್ಲೇಷಣೆ'ಯನ್ನು ನಡೆಸಿರುವುದರಿಂದ ಅವುಗಳ ಸಂಕೀರ್ಣ ಗುಣ ಲಕ್ಷಣಗಳನ್ನು ತಿಳಿಯಲು ಸಾಧ್ಯವಾಗಿದೆ. ಮತ್ತೊಂದು ಭಾಗದಲ್ಲಿ ಬೇಂದ್ರೆ, ಗೋಕಾಕ, ಮೊಖಾಶಿ ಮುಂತಾದವರು ಮುನ್ನುಡಿ ಹಾಗೂ ಅವಲೋಕನಗಳ ಸಂದರ್ಭಗಳಲ್ಲಿ ಆಗಾಗ ಬರೆದ ಲೇಖನಗಳಿವೆ. ಹಾಗೆಯೇ ಈ ಲೇಖಕರ ಗದ್ಯ ಕೃತಿಗಳನ್ನು ಕುರಿತು ಸಿ.ಪಿ.ಕೆ. ಹಾಮಾನಾ ಮತ್ತಿತರರ ವಿಮರ್ಶಾ ಬರಹಗಳು ಹಾಗೂ ಸಂದರ್ಶನದ ವಿಭಾಗಗಳು ಉಪಯುಕ್ತವಾಗಿವೆ. ಕಣವಿಯವರಂಥ ಮುಕ್ತ ಮನಸ್ಸಿನ ಸೃಜನಶೀಲ ಲೇಖಕರಿಗೆ ಅರ್ಪಿಸಲಾಗಿರುವ ಈ ಅಭಿನಂದನ ಗ್ರಂಥದ ಸಂಪಾದನೆ ಕಾರ್ಯವು ಅಚ್ಚುಕಟ್ಟಾಗಿದ್ದು, ಸದಭಿರುಚಿಯಿಂದ ಕೂಡಿದೆ.

ಸಾಲಿರಾಮಚಂದ್ರರಾಯ (ಸಂ) ಸಿದ್ಧಲಿಂಗ ಪಟ್ಟಣಶೆಟ್ಟಿ, ಪರಮೇಶ್ವರ ಹೆಗಡೆ

ತೊಂಬತ್ತು ವರ್ಷದ ತುಂಬು ಜೀವನ ಬದುಕಿ ಈಚೆಗೆ ಕಣ್ಮರೆಯಾದ ಕನ್ನಡದ ಹಿರಿಯ ಸಾಹಿತಿ ಸಾಲಿರಾಮಚಂದ್ರರಾಯರ ವ್ಯಕ್ತಿತ್ವ ಮತ್ತು ಹಿರಿಮೆಯನ್ನು ಕುರಿತು ನಮ್ಮ ನಡುವಣ ಹಿರಿಕಿರಿಯ ಲೇಖಕರು ಬರೆದಿರುವ 56 ಬರಹಗಳು ಈ ಸಂಸ್ಮರಣ ಗ್ರಂಥದಲ್ಲಿ ಅಡಕವಾಗಿವೆ. ಆರಂಭದಿಂದ ಮೊದಲುಗೊಂಡು ತೀರ ಇತ್ತೀಚಿನ ತನಕವೂ ಸಾಲಿಯವರು ನಾನಾ ಬಗೆಯಲ್ಲಿ ಸಾಹಿತ್ಯಾಸಕ್ತರ ಅವಜ್ಞೆಗೆ ಒಳಗಾದುದ್ದನ್ನು ಕುರಿತು ಪಟ್ಟಣಶೆಟ್ಟರು ತೀರಾ ಆಪ್ತವಾಗಿ, ಹಾಗೆಯೇ ಖಾರವಾಗಿ ನಿರೂಪಿಸಿದ್ದಾರೆ. "ಕೀರ್ತಿಮೋಹವನ್ನು ದೂರವಿಟ್ಟ ಸಾಲಿಯವರು ಅನೇಕ ಕೀರ್ತಿವಂತರ. ಅವರ ಬಾಲ ಬಡುಕರ ದೃಷ್ಟಿಯಿದ, ಮನಸ್ಸಿನಿಂದ ದೂರವಾಗಿಯೇ ಉಳಿದರು" ಎಂದು ತಮ್ಮ 'ಮುಮ್ಮಾತು'ಗಳಲ್ಲಿ ನೊಂದಿರುವ ಅವರು ತಮ್ಮ ಓರಗೆಯವರ "ಕಟು ವಿಮರ್ಶೆಗೆ ತುತ್ತಾಗಿ ಕನ್ನಡದಲ್ಲಿ ಬರೆಯುವುದನ್ನೇ ನಿಲ್ಲಿಸಿದ" (ಪು. 239) ಸಾಲಿಯವರ ಸ್ಥಿತಿಯನ್ನು ವಿವರಿಸಿದ್ದಾರೆ. ಆದರೆ ತಮ್ಮ ಕಾಲದವರ ಗೇಲಿ ಮತ್ತು ವಿಮರ್ಶೆಯ ನಡುವೆಯೂ ನುಸುಳಿ ಬದುಕುವ ಗಟ್ಟಿಯಾದ ಛಲದಿಂದ ಈ ಸೃಜನಶೀಲ ಮನಸ್ಸು ಮುನ್ನುಗ್ಗಲಿಲ್ಲ – ಎಂಬುದು ಸಹ ಅಷ್ಟೇ ಸ್ಪಷ್ಟವಾಗಿರುವ ಅಂಶವಾಗಿದೆ ; ಲೇಖಕರಿಗೆ ಇರುವ ಮಿತಿಯನ್ನು ಕುರಿತು ಅನವಶ್ಯಕವಾಗಿ ಲಂಬಿಸುವುದು ಬೇಡ.

ತಮ್ಮ ಜೀವಿತದ ಅವಧಿಯಲ್ಲಿ ಉದ್ದಕ್ಕೂ ಪರಮ ಆಸ್ತಿಕರೂ ನಾಡುನುಡಿಯ ಅವಿಚ್ಛಿನ್ನ ಭಕ್ತರೂ ಆಗಿದ್ದ ರಾಮಚಂದ್ರರಾಯರ ಕಷ್ಟಸಹಿಷ್ಣು ಗುಣ, ತುಂಬು ಹೃದಯವಂತಿಕೆ ಮತ್ತು ಸ್ನೇಹ ಸಜ್ಜನಿಕೆಗಳನ್ನು ಕುರಿತು ಈ ಕೃತಿಯಲ್ಲಿ ಅವರನ್ನು ಹತ್ತಿರದಿಂದ ಬಲ್ಲವರು ಮನೋಜ್ಞವಾಗಿ ಬಣ್ಣಿಸಿದ್ದಾರೆ, ಬೆಟಗೇರಿ, ಮುಗಳಿ, ಮಾಳವಾಡ, ಧಾರವಾಡ್ಕರ್, ಎನ್ಕೆ, ಹೇಮಾ, ಪಟ್ಟಣಶೆಟ್ಟಿ, ಪರಮೇಶ್ವರ ಹೆಗಡೆ ಮುಂತಾದವರ ಬರಹಗಳು ಸಾಲಿಯವರ ವ್ಯಕ್ತಿತ್ವ ಮತ್ತು ಸಾಧನೆಗಳನ್ನು ಅರಿಯಲು ನೆರವಾಗುತ್ತದೆ. ಲೇಖಕರ ಪ್ರಾತಿನಿಧಿಕ ರಚನೆಗಳಾದ 'ಹಂಬಲು' 'ಶಿಲಾಂಜಲಿ' ಮತ್ತು "ಕನ್ನಡದ ನೆಲದ ಪುಲ್ಲೆನಗೆ ಪಾವನ ತುಲಸಿ" ಕವನಗಳನ್ನು ಈ ಕೃತಿಯಲ್ಲಿ ಸೇರಿಸಿರುವುದು ಸೂಕ್ತವಾಗಿದೆ.

ಆಚಾರ್ಯಭಿವಂದನೆ : (ಸಂ) ಜಿ. ಜ್ಞಾನಾನಂದ, ಸರಿತಾಜ್ಞಾನಾನಂದ

ವಿಶ್ವಕರ್ಮ ಜನಾಂಗದ ಏಳಿಗೆಗಾಗಿ ಅವಿರತವಾಗಿ ಶ್ರಮಿಸಿದವರೂ, ಆ ಜನಾಂಗದ ಅತ್ಯಂತ ಪ್ರಾಚೀನ ಸಂಪ್ರದಾಯ ಹಾಗೂ ಪರಂಪರಾಗತ ಶಿಲ್ಪಕಲೆಯ ಬಗ್ಗೆ ಆಳವಾಗಿ ಅಧ್ಯಯನ ನಡೆಸಿದವರೂ ಮತ್ತು ಆ ಬಗ್ಗೆ ಕೃತಿಗಳನ್ನು ರಚಿಸಿದವರೂ

ಆದ ಶ್ರೀ ನಾ. ಭಾ. ಚಂದ್ರಶೇಖರಾಚಾರ್ಯ ಅವರ ಎಪ್ಪತ್ತೊಂದನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ ಅರ್ಪಿಸಲಾಗಿರುವ ಅಭಿನಂದನ ಗ್ರಂಥ ಇದಾಗಿದೆ. ವಿಶ್ವಕರ್ಮ (ವಿಶ್ವ ಬ್ರಾಹ್ಮಣ ?) ಸಂಪ್ರದಾಯವನ್ನು ಕುರಿತು ವೇದೋಪನಿಷತ್ತುಗಳ ಕಾಲ ದಿಂದ ಈ ತನಕ ಸಿಗಬಹುದಾದ ವಿಪುಲ ಸಾಮಗ್ರಿಯನ್ನು ಈ ಕೃತಿಯಲ್ಲಿ ನಾವು ಕಾಣಬಹುದಾಗಿದೆ. ಸಿಂಧೂಕಣಿವೆಯ ನಾಗರೀಕತೆಯಿಂದ ಮೊದಲಾಗಿ ಇತ್ತೀಚಿನ ದೇಗುಲಗಳ ನಿರ್ಮಾಣದ ತನಕ ಇತಿಹಾಸದ ನೂರಾರು ಪ್ರಮುಖ ಘಟ್ಟಗಳಲ್ಲಿ ಇಂಡಿಯಾದ ಶಿಲ್ಪಿಗಳು ವಹಿಸಿದ ಪಾತ್ರವನ್ನು ವಿವರಿಸುವ ಅನೇಕ ಲೇಖನಗಳು ಈ ಗ್ರಂಥದಲ್ಲಿ ಸೇರಿವೆ. ಶಂ. ಬಾ. ಜೋಶಿಯವರ ಪ್ರಕಾರ "ವಿಶ್ವಕರ್ಮ ಸಂಪ್ರದಾಯ ದವರು ಪ್ರಾಮುಖ್ಯದಿಂದ ಶೈವ ಸಂಪ್ರದಾಯದವರಾಗಿರುವಂತೆ ತೋರುತ್ತದೆ. ಶೈವರಾದರೂ ಇವರು ಶಕ್ತಿದೇವಿಯ ಉಪಾಸಕರು. ಇವಳು ಮೇಧಾದೇವಿಯಾಗಿರ ಬೇಕು. ನಿಜವಾಗಿ ಕಾಳಮ್ಮ ಹೆಸರಿನ ಕುಲದೈವತವು ಇರುವುದು ಕಂಡು ಬರುವುದು. ಇವರು ಮಂತ್ರ, ತಂತ್ರ, ಯಂತ್ರ, ವಿದ್ಯೆಯಲ್ಲಿ ವಿಖ್ಯಾತರಾಗಿದ್ದರು......" (ಪು. 132) ಎಂಬ ವಿವರಗಳು ದೊರೆಯುತ್ತವೆ. ಜೊತೆಗೆ ಈ ಕೃತಿಯಲ್ಲಿರುವ "ಮಾಪನ ವಿಜ್ಞಾನಕ್ಕೆ ಭಾರತೀಯ ಶಿಲ್ಪಿಯ ಕೊಡುಗೆ", "ಶಿಲ್ಪ, ಚಿತ್ರಕಲೆ", "ಪ್ರಾಚೀನ ಭಾರತದಲ್ಲಿ ಯಂತ್ರ ಶಿಲ್ಪ", "ಪವಾಡ ಪುರುಷ ಸಿದ್ದಪ್ಪಾಜಿ" ಮುಂತಾದ ಲೇಖನಗಳು ಈ ದಿಕ್ಕಿನಲ್ಲಿ ಕರ್ನಾಟಕ ಹಾಗು ಭಾರತದ ಮಟ್ಟದಲ್ಲಿ ಆಳವಾದ ಅಧ್ಯಯನಕ್ಕೆ ನೆರವಾಗುತ್ತವೆ. ಕೆಲವು ಸಂಶೋಧನ ಲೇಖನಗಳ ಜೊತೆಗೆ ವಿಶ್ವಕರ್ಮ ಜನಾಂಗದವರು ನೆರೆನಾಡುಗಳಲ್ಲಿ ಇದ್ದು ರಾಷ್ಟ್ರಮಟ್ಟದಲ್ಲಿ ಪ್ರಸಿದ್ಧಿ ಗಳಿಸಿರುವ ಮಹನೀಯರ ಬಗೆಗಿನ ವಿವರಗಳು ಸಹ ಈ ಕೃತಿಯಲ್ಲಿ ದೊರೆಯುತ್ತವೆ. ಅಭಿನಂದನ ಗ್ರಂಥವೊಂದನ್ನು ಒಂದು ಜನಾಂಗದ ಸಾಂಸ್ಕೃತಿಕ ದಾಖಲೆಗಳಿಂದ ಕೂಡಿರುವ ಮುಖ್ಯಕೃತಿಯನ್ನಾಗಿಸಿರುವ ಸಂಪಾದಕರ ಶ್ರಮವು ಅರ್ಥಪೂರ್ಣವಾಗಿದೆ.

ಜಯತೀರ್ಥ (ಸಂ) ಬಿ. ವಿ. ಹಂಪನ ಗೌಡ್ರು ಮತ್ತು ಶಂ. ಗು. ಬಿರಾದಾರ

ಸಾಹಿತಿಗಳೂ, ಆಡಳಿತದ ಹಲವಾರು ಹಂತಗಳಲ್ಲಿ ಕೆಲಸ ಮಾಡಿದವರೂ ಆದ ಜಯತೀರ್ಥ ರಾಜ ಪುರೋಹಿತರಿಗೆ ಅವರ ಅಭಿಮಾನಿಗಳು ಮತ್ತು ಮಿತ್ರರು ಅರ್ಪಿಸಿರುವ ಅಭಿನಂದನ ಗ್ರಂಥ ಇದು. "ಬದುಕು ಬೆಳಕು" ಎಂಬ ತಮ್ಮ ದೀರ್ಘ ಲೇಖನದಲ್ಲಿ ರಾಜಪುರೋಹಿತರು ಹುಟ್ಟಿನಿಂದ ಕಟ್ಟಾ ವೈದಿಕ ವಾತಾವರಣದಲ್ಲಿ ಬೆಳೆದ ತಾವು ಆಧುನಿಕ ವಿದ್ಯೆಯನ್ನು ಕಲಿಯಲು ಎಷ್ಟೆಲ್ಲ ಪರಿಪಾಟಲು ಹೊಂದ ಬೇಕಾಯಿತು ಎಂಬುದನ್ನು ಮನಕರಗುವಂತೆ ವಿವರಿಸಿದ್ದಾರೆ. ಮುಂದೆ ವಿದ್ಯಾ ಭ್ಯಾಸದ ಜೊತೆಜೊತೆಗೆ ಸ್ವಾತಂತ್ರ್ಯ ಚಳುವಳಿಯಲ್ಲೂ ಭಾಗವಹಿಸಿದ್ದ ಅವರು ಇಂಡಿಯಾದ ಶ್ರೀಸಾಮಾನ್ಯನ ಹೃದಯ ವೈಶಾಲ್ಯವನ್ನು ಅರಿತುಕೊಳ್ಳಲು ಸಾಧ್ಯ

ವಾದ ಘಟನೆಯೊಂದು ಅತ್ಯಂತ ರೋಮಾಂಚನಕಾರಿಯಾಗಿದೆ: ರಜಾಕಾರರ ವಿರುದ್ಧದ ಹೋರಾಟದಲ್ಲಿ ಪೋಲೀಸ್ ಧಾಳಿ ತಪ್ಪಿಸಿಕೊಳ್ಳಲು ಉಪ್ಪಲದಿನ್ನಿಯ ಮಡಿವಾಳಪ್ಪನ ಮನೆಯಲ್ಲಿ ತರುಣ ಜಯತೀರ್ಥರು ಅಡಗಿರುತ್ತಾರೆ. ಪೋಲೀಸರು ಮನೆಮನೆಯ ಶೋಧವನ್ನು ಆರಂಭಿಸಿದಾಗ ರೈತ ಮಡಿವಾಳಪ್ಪ ಈ ಸತ್ಯಾಗ್ರಹಿ ಯನ್ನು ಕರೆದು "......ದನ ಮಳೆಯಾಗ ತೋಯ್ತಿದ್ರು ನಾವು ಮುಸುಕಿನಾಗ ಕರ್‍ಕೊಂಬೋ ಜನ. ನಿಮ್ಮನ್ನ ಹ್ಯಾಂಗ ಹೊರಗ ಕಳಿಸೇನ್ರೀ? ಬರ್‍ರೀ, ಅಲ್ಲೇ ನನ್ನ ಹೇಣ್ತೀ ಹಂತೇಕ್ ಹೋಗಿ ಕೌದಿ ಹೊದಕೊಂಡು ಮಲಕೋರಿ. ನನ್ನ ಮಗ ಮಲ ಗ್ಯಾನ ಅಂತ ಹೇಳ್ತೀನಿ" (ಪು. 63) ಎಂದು ಹೇಳಿ ಮಲಗಿಸುತ್ತಾನೆ. ಈ ಬಗೆಯ ವಿವರಗಳು ಕುಬ್ಜತೆಯನ್ನು ಹೊರ ನೂಕುವ ಇಂಡಿಯಾದ ಶ್ರೀಸಾಮಾನ್ಯನ ಪರಮೌದಾರ್ಯದ ಪ್ರಸಂಗವನ್ನು ನೆನಪಿಸುತ್ತವೆ.

'ವ್ಯಕ್ತಿತ್ವ ಮತ್ತು ಚಟುವಟಿಕೆ' ಎಂಬ ಶೀರ್ಷಿಕೆಯನ್ನು ಹೊತ್ತಿರುವ ಈ ಕೃತಿಯ ಎರಡನೆಯ ಭಾಗದಲ್ಲಿ ನಾಡಿನ ಹಿರಿಕಿರಿಯ ಲೇಖಕರು ಮತ್ತು ರಾಜ ಪುರೋಹಿತರ ಮಿತ್ರರು, ಸಹೋದ್ಯೋಗಿಗಳು ಬರೆದ ಲೇಖನಗಳಿವೆ; ಇಲ್ಲೆಲ್ಲ ಜಯತೀರ್ಥರ ಕಾರ್ಯದಕ್ಷತೆ ಮತ್ತು ಕನ್ನಡ ಪ್ರೇಮವನ್ನು ಕುರಿತು ನಿದರ್ಶನ ಪೂರ್ವಕವಾಗಿ ವರ್ಣಿಸಲಾಗಿದೆ. ಮೂರನೆಯ ಭಾಗದಲ್ಲಿ ಈ ಲೇಖಕರ ಕೃತಿಗಳ ಬಗೆ ವಿವಿಧವಿಮರ್ಶಕರು ಲೇಖನಗಳನ್ನು ಬರೆದು ಪರಿಚಯಾತ್ಮಕ ವಿಶ್ಲೇಷಣೆಯನ್ನು ನೀಡಿದ್ದಾರೆ.

ಸುವರ್ಣ ತರಂಗ (ಸಂ) ಹೆಚ್. ಆರ್. ದಾಸೇಗೌಡ ಮತ್ತು ಇತರರು

ತಮ್ಮ ಅಭಿನಂದನ ಗ್ರಂಥದ ಆರಂಭದಲ್ಲಿ ಕೆ. ಪಿ. ಶಿವಲಿಂಗಯ್ಯನವರು ಸುದೀರ್ಘವಾದ ಲೇಖನ ಬರೆದು ಅಲ್ಲಿ ಆತ್ಮಕತೆಯ ಹಲವಾರು ವಿವರಗಳನ್ನು ನೀಡಿ ತಮ್ಮ ವ್ಯಕ್ತಿತ್ವ ಬೆಳೆದು ಬಂದ ಬಗೆಯನ್ನು ನಿರೂಪಿಸಿದ್ದಾರೆ. ಜೊತೆಗೆ ಅವರನ್ನು ಹತ್ತಿರದಿಂದ ಬಲ್ಲ, ಕಂಡ, ಕೇಳಿದ ಹಿರಿಕಿರಿಯರನೇಕರು ಶಿವಲಿಂಗಯ್ಯನವರ ಬಗ್ಗೆ ತಮ್ಮ ಅನ್ನಿಸಿಕೆಗಳನ್ನು ತಿಳಿಸಿದ್ದಾರೆ. ಎರಡನೆಯ ಮತ್ತು ಮೂರನೆಯ ಭಾಗಗಳಲ್ಲಿ ಲೇಖಕರ ಕೃತಿಗಳ ಪರಿಚಯುವೂ, ಅವರಿಗೆ ವಿವಿಧ ಮಠಾಧೀಶರಾದಿಯಾಗಿ ಕೆಲ ಹಿರಿಯರು ಬರೆದ ಪತ್ರಗಳೂ ಸೇರಿವೆ. ಕೊನೆಯ ಮತ್ತು ನಾಲ್ಕನೆಯ ಭಾಗದಲ್ಲಿ ಬೇರೆ ಬೇರೆ ವಿಷಯಗಳನ್ನು ಕುರಿತು ವಿವಿಧ ಲೇಖಕರು ಬರೆದಿದ್ದಾರೆ. ಈ ಗ್ರಂಥದ ಉಪಯುಕ್ತ ಭಾಗವೂ ಸಹ ಇದೇ ಆಗಿದೆ. 'ಜಾನಪದ ವೈದ್ಯ', 'ಶಾಸನಗಳು – ಒಂದು ವಿವೇಚನೆ' 'ಬಳ್ಳಿಗಾವೆ ದಾಸೋಜನ ಒಂದು ಹೊಸ ಪೀಠಶಾಸನ', 'ಬಸವಣ್ಣನವರ ಸಾಹಿತ್ಯ ಶಕ್ತಿ', 'ಸಿದ್ಧರಾಮ ಚಾರಿತ್ರದಲ್ಲಿ ಸಾಮಾಜಿಕ ಪ್ರಜ್ಞೆ', 'ಹರಿದಾಸ ಸಾಹಿತ್ಯ' – ಮುಂತಾದ ಲೇಖನಗಳು ಹೆಚ್ಚು ಗಮನಾರ್ಹವಾಗಿವೆ. ಕೃ. ಸುಮಿತ್ರಾಬಾಯಿ ಅವರು ಬರೆದಿರುವ 'ಸ್ತ್ರೀ ಮತ್ತು ಶೋಷಣೆ' ಎಂಬ ಲೇಖನವಂತೂ ಆ ವಿಷಯಕ್ಕೆ

ಸಂಬಂಧಿಸಿದ ಪ್ರಮುಖ ಸಂಗತಿಗಳನ್ನು ಕುರಿತು ಆಳವಾಗಿ ಚರ್ಚಿಸಲ್ಪಟ್ಟಿರುವ ಒಂದು ಪರಿಣಾಮಕಾರಿಯಾದ ಲೇಖನವಾಗಿದೆ.

ಮೇಲಿನ ಈ ಎಂಟು ಕೃತಿಗಳಲ್ಲಿ 'ಅಧ್ಯಯನ' ಮತ್ತು 'ಚೆಂಬೆಳಕು' ಅಭಿನಂದನ ಗ್ರಂಥಗಳು ಹಾಗೂ 'ರಾಜಮಾರ್ಗ' ಸಂಸ್ಮರಣ ಸಂಪುಟ ಕನ್ನಡ ಸಂಶೋಧನೆ ಮತ್ತು ಸಾಹಿತ್ಯ ಮಾರ್ಗದಲ್ಲಿನ ಉತ್ತಮ ಆಕರಗ್ರಂಥಗಳಾಗಿ ಉಳಿಯುತ್ತವೆ.

# ಛಂದಸ್ಸು, ಸಂಶೋಧನೆ ಮತ್ತು ಇತಿಹಾಸ

**ಎಂ. ಚಿದಾನಂದಮೂರ್ತಿ**

ಕೆಲವು ಸಂಶೋಧನ ಕೃತಿಗಳ ಸಮೀಕ್ಷೆಯ ಈ ವಿಭಾಗದಲ್ಲಿ ಬಂದಿರುವ ಎರಡು ಪಿಎಚ್.ಡಿ. ನಿಬಂಧಗಳೂ ತೃಪ್ತಿಯನ್ನುಂಟುಮಾಡುವುದಿಲ್ಲ. ಆದರೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ ಕನ್ನಡ ಛಂದಸ್ಸಿನ ಚರಿತ್ರೆಯ ಎರಡು ಸಂಪುಟಗಳು ಮನಸ್ಸಿಗೆ ಹರ್ಷವನ್ನುಂಟು ಮಾಡುವ ಕೃತಿಗಳು. ಅದೇ ಸಂಸ್ಥೆ ಹೊರತರಬೇಕೆಂದಿರುವ ಕನ್ನಡ ಭಾಷೆಯ ಚರಿತ್ರೆಯ ಸಂಪುಟಗಳೂ ಇದೇ ಮಟ್ಟವನ್ನು ಕಾಪಾಡಿಕೊಂಡರೂ ತೃಪ್ತಿಯೇ ; ಇನ್ನೂ ಉತ್ತಮ ವಾಗಿದ್ದರೆ ಅದು ಕನ್ನಡದ ಸೌಭಾಗ್ಯವೆಂದೇ ಭಾವಿಸಬೇಕು. ಎಸ್. ಕೆ. ರಾಮಚಂದ್ರ ರಾಯರ ತಿರುಪತಿ ತಿಮ್ಮಪ್ಪ ಎನ್ನುವುದು ತನ್ನ ಶ್ರೇಷ್ಠತೆಯಿಂದ ಎದ್ದು ಕಾಣುವ ಈ ವರ್ಷದ ಕೃತಿ. 'ಸಾಹಿತ್ಯ ವಾರ್ಷಿಕ'ದ ಬೇರೆ ವಿಭಾಗಗಳಲ್ಲಿ ಸಂಶೋಧನಾತ್ಮಕ ಕೃತಿಗಳ ಸಮೀಕ್ಷೆ ಇರುವ ಸಾಧ್ಯತೆಗಳಿರುವುದರಿಂದ ಈ ವಿಭಾಗದಲ್ಲಿ ಬಂದಿರುವಷ್ಟೇ ಕೃತಿಗಳು ಈ ವರ್ಷದ ಸಂಶೋಧನೆಯ ಬೆಳೆಯೆಂದು ಭಾವಿಸಬಾರದು.

"ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಛಂದಸ್ಸಿನ ಚರಿತ್ರೆ", (ಸಂಪುಟ ಒಂದು ಮತ್ತು ಎರಡು) ಇವು ಬೇರೆ ಬೇರೆ ಲೇಖಕರು ಕನ್ನಡ ಛಂದಸ್ಸಿನ ಬಗ್ಗೆ ಬರೆದಿರುವ ಲೇಖನಗಳ ಸಂಪುಟಗಳು. ಮೊದಲ ಸಂಪುಟವನ್ನು ಪ್ರೊ. ಹರಿ ದಾಮೋದರ ವೇಲಣ ಕರ್ ಅವರಿಗೂ ಎರಡನೆಯ ಸಂಪುಟವನ್ನು ಪ್ರೊ. ತೀ. ನಂ. ಶ್ರೀಕಂಠಯ್ಯನವರಿಗೂ ಅರ್ಪಿಸಿರುವುದು ಮೆಚ್ಚಬೇಕಾದ ಸಂಗತಿ. ಆಯಾ ಕ್ಷೇತ್ರದಲ್ಲಿ ದುಡಿದ ಮಹನೀಯರಿಗೆ ಆಯಾ ಕ್ಷೇತ್ರದಲ್ಲಿ ನಿಮ್ಮ ಕೆಲಸವನ್ನು ಮುಂದುವರಿಸಿದ್ದೇವೆ ಎಂದು ಹೇಳುವುದು ಅವರಿಗೆ ತೋರುವ ದೊಡ್ಡ ಗೌರವ.

ಇವು ಬೇರೆ ಬೇರೆ ಲೇಖಕರ ಲೇಖನಗಳಾದರೂ ಶೀರ್ಷಿಕೆಗಳು ಪೂರ್ವ ನಿಯೋಜಿತವಾದುದರಿಂದ ಅವುಗಳ ಜೋಡಣೆ ಛಂದಸ್ಸಿನ ಬೆಳವಣಿಗೆಯನ್ನು ಎತ್ತಿ ತೋರಿಸುವಂತಾಗಿದೆ. ಮೊದಲ ಸಂಪುಟದಲ್ಲಿ ಛಂದಸ್ಸಿಗೆ ಸಂಬಂಧಿಸಿದ ಸೈದ್ಧಾಂತಿಕ ವಿಷಯಗಳ ಪರಿಚಯವಿದೆ. ಉದಾ. ಛಂದಸ್ಸಿನ ಉಗಮ, ಅದರ ಸಾಮಾನ್ಯ ಸ್ವರೂಪ ಮತ್ತು ಪ್ರಯೋಜನಗಳು, ಸಂಸ್ಕೃತ, ಪ್ರಾಕೃತ, ಕನ್ನಡವೂ ಸೇರಿದಂತೆ ಎಲ್ಲ ಶಿಷ್ಟ ದ್ರಾವಿಡ ಛಂದೋಗ್ರಂಥಗಳ ಪರಿಚಯ ಇಲ್ಲುಂಟು. ಛಂದ

ಶ್ಯಾಸ್ತ್ರದ ಮೂಲ ಪರಿಕಲ್ಪನೆಗಳಾದ ಲಯ, ಗಣ (ವರ್ಣ, ಮಾತ್ರಾ, ಅಂಶ), ಯತಿ ಪ್ರಾಸ ಇವುಗಳ ಪರಿಚಯವೂ ಉಂಟು. ಇವುಗಳ ಬಳಿಕ, ಕನ್ನಡ ಛಂದಸ್ಸಿಗೆ ಹಿನ್ನೆಲೆಯಾದ ಸಂಸ್ಕೃತ ಛಂದಸ್ಸು, ಅದರ ತಾಯಿಬೇರಾದ ವೈದಿಕ ಛಂದಸ್ಸಿನ ಬಗ್ಗೆ ಒಂದು ಲೇಖನವಿದೆ. ವೈದಿಕ ಛಂದಸ್ಸುಗಳಿಗೆ ಕೊಂಡಿಯಂತಿರುವ ಶ್ಲೋಕದ ವಿಷಯ ಬಂದಿದೆ, ಅಕ್ಷರ ವೃತ್ತಗಳ ತೌರಾದ ಲೌಕಿಕ ಛಂದಸ್ಸಿನ ಬಗ್ಗೆ ಒಂದು ಬರಹವಿದೆ. ಕನ್ನಡ ಸಾಹಿತ್ಯದ ಆರಂಭದ ವರ್ಣ ವೃತ್ತಗಳ ವೈವಿಧ್ಯವೇನು, ಅವುಗಳು ಕನ್ನಡಕ್ಕೆ ಒಗ್ಗಿ ಬಂದ ಬಗೆ ಯಾವುದು ಎಂಬುದರ ಚರ್ಚೆ ದೊರಕುತ್ತದೆ. ಇತರ ಮಾಲಾವೃತ್ತ, ಅರ್ಧಸಮ, ವಿಷಮ ವೃತ್ತಗಳ ಬಗ್ಗೆಯೂ ಬರಹವಿದೆ. ಹಾಗೆಯೇ ಮಾತ್ರಾ ಛಂದಸ್ಸು, ಅದರ ಕೊಡುಗೆಗಳಾದ ಕಂದ, ರಗಳೆಗಳ ಚರಿತ್ರೆಯೂ ದೊರಕುತ್ತದೆ. ಅದೇ ಮಾತ್ರಾವೃತ್ತಗಳ ಗುಂಪಿಗೆ ಸೇರುವ, ಅಷ್ಟೊಂದು ಪ್ರಚುರವಿರದ ಚೌಪದಿ, ಧವಲ ಇತ್ಯಾದಿಗಳ ವಿಷಯವಲ್ಲದೆ, ಷಟ್ಪ್ರತ್ಯಯದ ಒಂದು ಕಿರುಪರಿಚಯವೂ ಇಲ್ಲಿ ಸೇರಿದೆ. ಇಷ್ಟು ಮೊದಲ ಸಂಪುಟ : ಎಂದರೆ, ಕನ್ನಡಕ್ಕೆ ಹೊರಗಿನಿಂದ ಬಂದಿರುವ ಪದ್ಯಜಾತಿಗಳ ಚರಿತ್ರೆಗೆ ಈ ಸಂಪುಟ ಬಂದು ನಿಲ್ಲುತ್ತದೆ.

ಎರಡನೆಯ ಸಂಪುಟ ಮುಖ್ಯವಾಗಿ ಕನ್ನಡಕ್ಕೆ ಸೇರಿದ ಛಂದೋ ಪ್ರಯೋಗಗಳಿಗೆ ಮೀಸಲು. ಕರ್ಣಾಟಕ ವಿಷಯ ಜಾತಿಗಳ ಉಗಮದ ಚರ್ಚೆಯಿಂದ ಈ ಸಂಪುಟ ಆರಂಭವಾಗುವುದು ಉಚಿತವೇ ಆಗಿದೆ. ಏಳೆ, ತ್ರಿಪದಿ, ಷಟ್ಪದಿ, ಅಕ್ಕರ, ಕೊನೆಯದಾದ ಸಾಂಗತ್ಯ ಇವುಗಳ ಸಾಮಾನ್ಯ ಲಕ್ಷಣಗಳು, ಅವುಗಳ ಬೆಳವಣಿಗೆಯಲ್ಲಿ ಕಾಲಕಾಲಕ್ಕೆ ಕಂಡುಬರುವ ಮಾರ್ಪಾಟುಗಳು, ಇತಿಹಾಸ, ಕನ್ನಡ ಛಂದಸ್ಸಿಗೆ ಅವುಗಳ ಕೊಡುಗೆ ಇವುಗಳನ್ನು ಕುರಿತು ದೀರ್ಘವಾದ ವಿವೇಚನೆಯಿದೆ. ಕೀರ್ತನೆಗಳ 'ಛಂದಸ್ಸ'ನ್ನು ಕುರಿತು ಮಾತನಾಡುವುದು ಕಷ್ಟವಾದರೂ ಆ ಬಗ್ಗೆಯೂ ಒಂದು ಲೇಖನವಿದೆ. ಹೊಸಗನ್ನಡ ಛಂದಸ್ಸಿಗೆ ಪ್ರೇರಣೆ ಆಂಗ್ಲ ಸಾಹಿತ್ಯವಾದರೂ ಕನ್ನಡದಲ್ಲಿ ನಡೆದ ಪ್ರಯೋಗಗಳಿಗೆಲ್ಲ ಕನ್ನಡ ಕವಿಗಳೇ ಜವಾಬುದಾರರಾದ್ದರಿಂದ ಇಡೀ ಸಂಪುಟ ಅಚ್ಚಗನ್ನಡ ಛಂದಸ್ಸಿಗೇ ಮೀಸಲು ಎಂಬುದು ಸ್ಪಷ್ಟವಾಗುತ್ತದೆ. ಹೊಸಗನ್ನಡ ಛಂದಸ್ಸಿನ ಉದಯಕ್ಕೆ ಉಂಟಾದ ಪ್ರಚೋದನೆಗಳ ಹಿನ್ನೆಲೆಯಾಗಿ ಆಂಗ್ಲ ಛಂದಸ್ಸಿನ ಮೂಲ ತತ್ವಗಳನ್ನು ಪರಿಚಯ ಮಾಡಿಸಿರುವುದು ಬಹಳ ಉಪಯುಕ್ತವಾಗಿದೆ. ಮತ್ತು ಹಿಂದಿನಂತೆಯೇ ಇಲ್ಲೂ ಹೊಸಗನ್ನಡ ಛಂದಸ್ಸಿನ ಪರಿಭಾಷೆಯ ಪರಿಚಯ, ಪ್ರಯೋಗಗಳು, ವೈವಿಧ್ಯ, ಸಾನೆಟ್ ಪ್ರಗಾಥಗಳಂಥ ಬಿಡಿ ವೃತ್ತಗಳ ಸ್ವರೂಪ-ಇತಿಹಾಸ, ಸರಳರಗಳೆ, ಮಹಾಛಂದಸ್ಸು, ಮುಕ್ತ ಛಂದಸ್ಸುಗಳ ಸ್ವರೂಪಗಳನ್ನು ಇಲ್ಲಿ ವಿವೇಚಿಸಿದೆ. ಯಕ್ಷಗಾನ ಛಂದಸ್ಸಿನ ಬಗ್ಗೆ-ಇವರ ಬಗ್ಗೆ ಬರೆಯುವುದು ಕಷ್ಟವಾದರೂ—ಒಂದು ಲೇಖನ ಸೇರಿಸಿರುವುದು ಉಚಿತವಾಗಿದೆ. ಅಂತ್ಯದಲ್ಲಿ ಛಂದಸ್ಸಿನ ಅಧ್ಯಯನ ನಡೆದು ಬಂದಿರುವ ದಾರಿ, ಅದರಲ್ಲಿ ಕೆಲಸ ಮಾಡಿರುವ

ವಿದ್ವಾಂಸರ ಸಾಧನೆಗಳು, ವೈಫಲ್ಯಗಳು, ಮುಂದೆ ಆಗಬೇಕಾದ ಕಾರ್ಯ ಇವುಗಳನ್ನು ಕುರಿತಂತೆ ಒಂದು ಸಮೀಕ್ಷೆ ನಡೆಸಿರುವುದೂ ನಮ್ಮ ಮೆಚ್ಚುಗೆಯನ್ನು ಗಳಿಸುತ್ತದೆ.

ಇದರಿಂದ, ಈ ಒಟ್ಟು ಕೆಲಸದ ಹಿಂದೆ ವ್ಯವಸ್ಥಿತವಾದ ನಿರ್ದಿಷ್ಟ ಯೋಜನೆ ಯಿದೆಯೆಂಬುದು ಸ್ವಯಂವೇದ್ಯ. ಕನ್ನಡ ಛಂದಸ್ಸಿಗೆ ಸಂಬಂಧಿಸಿದ ಯಾವುದೇ ವಿಷಯವೂ ಇಲ್ಲಿನ ಸಮೀಕ್ಷೆಯಿಂದ ತಪ್ಪಿಸಿಕೊಂಡಿಲ್ಲ. ವಚನಗಳ ಪ್ರಸ್ತಾಪ ಆಧುನಿಕ ಮುಕ್ತಛಂದಸ್ಸಿನ ಪೀಠಿಕೆಯಲ್ಲಿ ಬಂದಿದ್ದರೂ ಅವುಗಳ ಲಯದ ಬಗ್ಗೆ ಒಂದು ಲೇಖನವಿರುವುದು ಅಗತ್ಯವೆನ್ನಿಸುತ್ತದೆ. ಕೀರ್ತನೆಗಳ ಛಂದಸ್ಸನ್ನು ಶಿವಶರಣರು ಬರೆದರೆಂದು 'ಹೇಳಲಾದ' ಕೀರ್ತನೆಗಳ ಉಲ್ಲೇಖವಿದ್ದರೂ ಅವುಗಳನ್ನು ಕೀರ್ತನೆಗಳ ಛಂದಸ್ಸಿನ ಚರ್ಚೆಯಲ್ಲಿ ಕೈಬಿಟ್ಟಿರುವುದು ಅಸಮರ್ಥನೀಯ.

ಈ ಸಂಪುಟಗಳಲ್ಲಿ ಬಂದಿರುವ ಎಲ್ಲ ಲೇಖನಗಳೂ ಒಂದೇ ಮಟ್ಟದವಾಗಿರಲು ಸಾಧ್ಯವಿಲ್ಲವಾದರೂ, ಬಹುಮಟ್ಟಿನವು ಉತ್ಕೃಷ್ಟತೆಯನ್ನು ಕಾಪಾಡಿಕೊಂಡಿವೆ. ಸಂಪಾದಕರು ಈ ಎಲ್ಲ ಲೇಖನಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿ ಇರಬಹುದಾದ ಅರೆಕೊರೆಗಳನ್ನು ತುಂಬಿರುವುದನ್ನು ಊಹಿಸಬಹುದು. ಎಲ್ಲ ಲೇಖನಗಳನ್ನೂ ಬಿಡಿಬಿಡಿಯಾಗಿ, ವಿವರವಾಗಿ ಚರ್ಚಿಸುವುದು ಅಸಾಧ್ಯ ಮತ್ತು ಅನಗತ್ಯ. ಒಂದು ಮಾತಂತೂ ನಿಜ-ಇಲ್ಲಿನ ಎಲ್ಲ ಲೇಖಕರು ಆಯಾ ಕ್ಷೇತ್ರದಲ್ಲಿ ಚನ್ನಾಗಿ ಪಳಗಿದವರೇ, ಮತ್ತು ಎಲ್ಲರೂ ಶ್ರದ್ಧೆಯಿಂದ ಬರೆದಿದ್ದಾರೆ. ಆದರೂ, ಒಂದೆರಡು ಅಂಶಗಳನ್ನು ಪ್ರಾಸಂಗಿಕವಾಗಿ ಗಮನಿಸಬಹುದು. ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆಗಳಲ್ಲಿ ಲೇಖಕ ಎಂಬರ್ಥದಲ್ಲಿ 'ಲೇಖನದಾರ' ಎಂಬ ಮಾತನ್ನು ಬಳಸಲಾರಂಭಿಸಿರುವುದು ತೀರಾ ಅಸಮರ್ಥನೀಯವಾಗಿದೆ. ಪು. 25ರಲ್ಲಿ ಶೀರ್ಷಿಕೆಯಲ್ಲೇ ಅಕ್ಷರಪಲ್ಲಟ ವಾಗಿರುವುದಕ್ಕೆ ಯಾರೂ ಜವಾಬ್ದಾರರಲ್ಲ (ಪುಸ್ತಕದ 'ಅಚ್ಚುದಾರ'ನೇ ಹೊಣೆ). ಪು. 154(1)ರಲ್ಲಿ ಹೇಳಿರುವಂತೆ 'ಯ್ಮು' ಕಂಪಿತಕೆ ಉದಾಹರಣೆಯಾಗುವುದಿಲ್ಲ; ಆಗುವುದಾದರೆ 'ಬಾಯ್' ಆಗಬೇಕು. ಆದರೆ ನಾವು ಕಂಪಿತವಾಗಿ ಮಾಡಿ ಕೊಳ್ಳಬಹುದು, ಅಥವಾ ಇನ್ನೂ ಹೆಚ್ಚಿನ ಕಾಲಕ್ಕೆ ಎಳೆಯಬಹುದು-ರಚನೆಯಲ್ಲಿ ಕಂಪಿತವಾಗುವುದಿಲ್ಲ (ಆದರೆ, 'ತಲ್' 'ಮೇ' ಎಂಬುವು, ತೀ.ನಂ.ಶ್ರೀ. ಅವರ ಉದಾಹರಣೆಗಳಲ್ಲಿರುವಂತೆ ಸಹಜ ಕಂಪಿತಗಳು). "ಖ್ಯಾತಕರ್ಣಾಟಕ" (ಪು. 414. 1) ರೂಪಕ್ಕಿಂತ ಖ್ಯಾತ "ಕಾರ್ಣಾಟಕ" ಎಂಬ ವ್ಯಾಕರಣ ಶುದ್ಧ ರೂಪ ಸ್ವೀಕಾರಾರ್ಹ (ಕಾರ್ಣಾಟಕ-ಕರ್ಣಾಟಕಕ್ಕೆ ಸಂಬಂಧಿಸಿದ್ದು). ಮಾತ್ರಾಲಯವಿರುವ ಅಕ್ಷರವೃತ್ತ ಗಳ ಪಾದಗಳನ್ನು ಮೂರಕ್ಷರಗಳ ಗಣಗಳಿಂದ ಅಳೆಯುವುದು ಅಸ್ವಾಭಾವಿಕವೆಂಬ ಬಿ. ಎಂ. ಶ್ರೀ. ಯವರ ಅಭಿಪ್ರಾಯವನ್ನು ಪ್ರಶ್ನಿಸಿರುವುದು (ಪು.416.।) ಸರಿಯಾಗಿದೆ. ಆಂಗ್ಲಛಂದಸ್ಸಿನ ಪರಿಚಯಾತ್ಮಕ ಲೇಖನದಲ್ಲಿ (ಪು. 360.।।) ಇಂಗ್ಲಿಷ್ ಪದ್ಯ ಗಳನ್ನು ರೋಮನ್ ಲಿಪಿಯಲ್ಲಿಯೇ ಕೊಡಬೇಕಾಗಿತ್ತು. ಕನ್ನಡ ಲಿಪಿಯಲ್ಲಿ ಅವನ್ನು

ಓದುವುದೇ ಕಷ್ಟವಾಗುತ್ತದೆ. 'ಫರ್ಸ್ಟ್' (first) ಎಂಬಲ್ಲಿನ 'ರ್'ಉಚ್ಚಾರ ಗೊಳ್ಳುವುದಿಲ್ಲ; 'ರಿವರ್' ಎಂಬಲ್ಲಿನ ಅಂತ್ಯ 'ರ್' ಕೂಡ ಅಷ್ಟೇ. ಕನ್ನಡ ಲಿಪಿಯಲ್ಲಿ ಬರೆದರೆ ಅವನ್ನು ಉಚ್ಚರಿಸಬೇಕೆನ್ನಿಸುತ್ತದೆ. ಮಹಾಛಂದಸ್ಸಿನ ಬಗ್ಗೆ ನನ್ನ ಅಭಿಪ್ರಾಯಗಳಿಗಿಂತ ಸ್ವಲ್ಪ ಭಿನ್ನವಾದ ಅಭಿಪ್ರಾಯಗಳು ವ್ಯಕ್ತವಾಗಿದ್ದರೂ (||. ಪು. 568 ಇತ್ಯಾದಿ) ನನ್ನ ಅಭಿಪ್ರಾಯಗಳನ್ನು ಇನ್ನೂ ಸಾಧುವೆಂದೇ ನಂಬಿದ್ದೇನೆ. ಭಾಮಿನೀ ಷಟ್ಪದಿಯನ್ನು ಸಮರ್ಥವಾಗಿ ಬಳಸಿದ ಮಾತ್ರಕ್ಕೆ ಅದಕ್ಕೆ ನಾವು ಬೇರೊಂದು ಹೆಸರನ್ನು ಕೊಡುವ ಅಗತ್ಯ ಹೇಗಿಲ್ಲವೋ, ಸರಳರಗಳೆಗೂ ಅದರ ಅಪೂರ್ವ ಪ್ರಯೋಗಕ್ಕಾಗಿ ಮಹಾಛಂದಸ್ಸು ಎಂಬ ಹೆಸರು ಕೊಡುವುದು ಅನಗತ್ಯವೆಂದೇ ನನ್ನ ದೃಢ ನಂಬಿಕೆ. ಇವೆಲ್ಲ ಸಣ್ಣ ವಿಷಯಗಳು.

ವಾಸ್ತವಸಂಗತಿಯೆಂದರೆ ಈ ಎರಡು ಸಂಪುಟಗಳ ವಿಸ್ತೃತವಿಮರ್ಶೆಯನ್ನು ಮಾಡುವವರು ಛಂದಸ್ಸಿನ ತಮ್ಮ ಸಾಮಾನ್ಯ ಜ್ಞಾನವನ್ನು ಹೊಂದಿದ್ದರೆ ಸಾಲದು. ಏಕೆಂದರೆ ಒಬ್ಬೊಬ್ಬರೂ ಒಂದೊಂದು ವಿಷಯದಲ್ಲಿ ಆಳವಾಗಿ ಹೊಕ್ಕು ವಿವೇಚಿಸಿರುವಾಗ ವಿಮರ್ಶೆಯೆಂಬುದು ಅಷ್ಟು ಸುಲಭವಾಗುವುದಿಲ್ಲ. ಕನ್ನಡದಲ್ಲಿ ಒಂದು ವಿಷಯದ ಬಗ್ಗೆ ಇಷ್ಟೊಂದು ಲೇಖಕರು ತೀವ್ರ ಶ್ರದ್ಧೆಯಿಂದ, ಏಕಪ್ರಕಾರವಾದ ಮಟ್ಟವನ್ನು ಕಾಯ್ದುಕೊಂಡು ಲೇಖನಗಳನ್ನು ಬರೆದ ಮತ್ತೊಂದು ಉದಾಹರಣೆ ದೊರಕಲಾರದು. ಎಲ್ಲ ಲೇಖಕರೂ ನಿಜವಾಗಿಯೂ ಅಭಿನಂದನಾರ್ಹರು.

ಅದಕ್ಕಿಂತ, ಇಲ್ಲಿ ನಡೆದಿರುವ ಸಂಪಾದನ ಕೆಲಸವೂ ಅಷ್ಟೇ ಗೌರವಾರ್ಹವಾದುದು. ಬಂದ ಲೇಖನಗಳನ್ನು ಒಂದು ಕ್ರಮದಲ್ಲಿ ಜೋಡಿಸಿ ಅಚ್ಚಿಗೆ ಕಳಿಸುವುದೇ ಇಂದಿನ ಅನೇಕ 'ಸಂಪಾದಕರ' ಕೆಲಸವಾಗಿರುವಾಗ, ಎಲ್ಲ ಲೇಖನಗಳನ್ನೂ ತಿದ್ದಿ, ಒಂದು ವ್ಯವಸ್ಥೆಗೆ ಪ್ರಮಾಣಕ್ಕೆ ತರುವಲ್ಲಿ ನಡೆದಿರುವ ಶ್ರಮವನ್ನು ಸುಲಭವಾಗಿ ಊಹಿಸಬಹುದಾ ದೆ. ಅಚ್ಚಿನ ತಪ್ಪುಗಳು ತೀರ ವಿರಳ ; ಅಡಿಟಿಪ್ಪಣಿಗಳನ್ನು ಕೊಡುವಲ್ಲಿ ಬಹುಮಟ್ಟಿನ ಏಕರೂಪತೆ (ಇಲ್ಲೂ ಅರಿಯದೆ ಪ್ರಮಾದಗಳಾಗಿವೆ. ಉದಾ. ಪು. 654.॥ 'ಶ್ರೀಕಂಠತೀರ್ಥ' ಕೃತಿಗೆ ನಾನು ಲೇಖಕನಲ್ಲ, ಸಂಪಾದಕ ; ಸಂಪಾದಕ ನಾನೊಬ್ಬನೇ ಅಲ್ಲ, ನಾನೂ ಸೇರಿದಂತೆ ಮೂವರು) ; ಕೊನೆಯಲ್ಲಿ ಕೊಟ್ಟಿರುವ ಅಭ್ಯಾಸ ಸೂಚಿ ಎಲ್ಲವೂ ಮೇಲ್ಮಟ್ಟದ ಸಂಪಾದನೆಯನ್ನು ಹೇಳುತ್ತವೆ. ಗಂಭೀರ ಸಂಶೋಧನೆಯಲ್ಲಿ ಆಸಕ್ತರಾಗಿರುವವರಿಗೆ ತುಂಬು ತೃಪ್ತಿಯನ್ನು ತರುವ ಈ ಕೃತಿಗಳ ಪ್ರಧಾನ ಸಂಪಾದಕರಾದ ಹಾ. ಮಾ. ನಾಯಕ, ಸಂಪಾದಕರಾದ ಸಿ. ಪಿ. ಕೃಷ್ಣಕುಮಾರ್ ಇಬ್ಬರೂ ಅಭಿನಂದನಾರ್ಹರು. ಈ ಸಂಪುಟಗಳ ಪ್ರಕಟಣೆಯಿಂದ ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ಒಂದು ಹೊಸತಿರುವು ಪ್ರಾಪ್ತವಾಗಿದೆ.

"ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ" ಸಾ. ಶಿ. ಮರುಳಯ್ಯನವರ ಪಿಎಚ್.ಡಿ. ನಿಬಂಧ. ಆರಂಭದ ಕೃತಜ್ಞತೆ ಭಾಗದಲ್ಲಿ "...ಅಧ್ಯಯನ ಅವಿಶ್ರಾಂತ ವಾಗಿ ಸಾಗಿತು. ಅಂತು ಸಾಗಿದ ಸುಮಾರು ಒಂಬತ್ತು ವರ್ಷಗಳ ಸುದೀರ್ಘ ತಪಸ್ಸಿನ ಫಲ ಈ ಕೃತಿ ...ನಲ್ಲಿಯಲ್ಲಿ ನೀರು ಬಂದರೆ ನಲ್ಲಿಯ ಹೊಟ್ಟೆಯಲ್ಲೇ ನೀರು ಹುಟ್ಟುವುದಿಲ್ಲ. ಹನಿ ನೀರಿನ ಸೃಷ್ಟಿಗೆ ಸಮಸ್ತ ಶಕ್ತಿಗಳೂ ಶ್ರಮಿಸಬೇಕಾಗುತ್ತದೆ. ಅಂತೆಯೇ ನನ್ನ ಲೇಖಣಿಯಿಂದ ಹೊರಬಂದ ಈ ಗ್ರಂಥದ ಹಿನ್ನೆಲೆಯಲ್ಲಿ ನೂರಾರು ವ್ಯಕ್ತಿ-ಶಕ್ತಿಗಳ ಕೈವಾಡ ಇದೆ. ಆ ಎಲ್ಲ ಚೈತನ್ಯಗಳಿಗೂ ನನ್ನ ಭಕ್ತಿಪೂರ್ವಕ ನಮನ ಗಳು"—ಈ ಧಾಟಿಯ ಬರವಣಿಗೆಯನ್ನು ಭಾವುಕ ಲೇಖಕರಿಗೆ ಬಿಟ್ಟುಕೊಟ್ಟು ಸಂಶೋಧಕರು ನೇರವಾಗಿ ಇದ್ದುದನ್ನು ಇದ್ದಂತೆ ಹೇಳುವುದನ್ನು ಅಭ್ಯಾಸಮಾಡಿ ಕೊಳ್ಳುವುದು ಮರ್ಯಾದೆ, ಓದುಗರಿಗೂ ಅವರ ಬಗ್ಗೆ ನಂಬಿಕೆ ಹುಟ್ಟುತ್ತದೆ.

ಆದರೆ, ಈ ನಿಬಂಧ ರಚನೆಗೆ ಮರುಳಯ್ಯನವರು ನಿಜವಾಗಿಯೂ ಶ್ರಮಿಸಿದ್ದಾರೆ. ಕೆಳದಿಯ ಅರಸರ ಸಂಕ್ಷಿಪ್ತ ಇತಿಹಾಸ, ಅರಸರ ಸಾಹಿತ್ಯ ಸೇವೆ, ಕೆಳದಿಯ ಆಶ್ರಯದಲ್ಲಿ ಕೃತಿರಚನೆ ಮಾಡಿದ ಕನ್ನಡ ಕವಿಗಳು ಅವರ ಕೃತಿಗಳು, ಕೆಳದಿ ಸಾಹಿತ್ಯದ ಮೌಲ್ಯನಿರ್ಣಯ ಇವು ಇಲ್ಲಿಯ ಸ್ಥೂಲಹಂದರವನ್ನು ಹೇಳುತ್ತದೆ. (ವಿಷಯ ಸೂಚಿಯಲ್ಲಿ ಪುಟಗಳ ಸಂಖ್ಯೆ ಇಲ್ಲದಿರುವುದು, ಆಯಾ ಅಧ್ಯಾಯದ ಹೆಸರು ಪ್ರತಿಪುಟದಲ್ಲಿಯೂ ಬಾರದಿರುವುದು ಓದುಗನಿಗೆ ತೊಡಕನ್ನುಂಟುಮಾಡು ತ್ತದೆ ; ಯಾವ ವಿಷಯ ಯಾವ ಪುಟಗಳಲ್ಲಿ ದೊರಕುತ್ತದೆ ಎಂಬುದಕ್ಕೆ ಬಹಳ ತಡಕಾಡಬೇಕಾಗುತ್ತದೆ). ಪುಸ್ತಕದ ಅಂತ್ಯದಲ್ಲಿ ಉಪಯುಕ್ತ ಸನ್ನದು, ಶಾಸನಗಳು, ಕೆಳದಿ ಸಾಹಿತ್ಯದ ಪಟ್ಟಿ ಇವೆಲ್ಲ ಬಂದಿರುವುದು ಹೆಚ್ಚಿನ ಅಧ್ಯಯನಕ್ಕೆ ಸಹಾಯಕಾರಿ.

ಮೊದಲ ಅಧ್ಯಾಯದಲ್ಲಿ ತಮ್ಮ ನಿಬಂಧದ ವಸ್ತುವಿನ ವ್ಯಾಪ್ತಿಯನ್ನು ಕಂಡು ಕೊಳ್ಳಲು ಯತ್ನಿಸಿದ್ದಾರೆ. ಕೆಳದಿ ಇತಿಹಾಸದ ಬಗ್ಗೆ ಬಂದಿರುವ ಗ್ರಂಥಗಳ ಸೂಕ್ಷ್ಮ ವಿವೇಚನೆ ಇಲ್ಲಿದೆ. 'ಕೆಳದಿಯ ಸಂಕ್ಷಿಪ್ತ ಇತಿಹಾಸ' ಅಧ್ಯಾಯದಲ್ಲಿ ರಾಜಕೀಯ ಚರಿತ್ರೆ ದೊರಕುತ್ತದೆ. 'ಕೆಳದಿ ಅರಸರ ಸಾಹಿತ್ಯ ಸೇವೆ' ಎಂಬುದು ಈ ನಿಬಂಧದ ಅತಿ ಮುಖ್ಯಭಾಗ. ಏಳು ದೊರೆಗಳು ಸುಮಾರು ಮೂವತ್ತು ಕವಿಗಳನ್ನು ಪೋಷಿಸಿದ್ದಾರೆ, ಆ ಕವಿಗಳ ಕೃತಿಸಂಖ್ಯೆ ಅರುವತ್ತಕ್ಕೂ ಮಿಕ್ಕಿದೆ. (ಇವುಗಳಲ್ಲಿ ಸಂಸ್ಕೃತ ಕೃತಿಗಳೂ ಸೇರಿವೆ), ಒಬ್ಬೊಬ್ಬ ದೊರೆಯ ಆಶ್ರಿತರಾಗಿದ್ದ ಕವಿಗಳ, ಕೃತಿಗಳ ಪರಿಚಯ ಈ ಭಾಗದಲ್ಲಿದೆ. ಮುಂದಿನ ಭಾಗದಲ್ಲಿ ಕೆಲವು ಕೆಳದಿಯ ಕವಿಗಳ ವಿಚಾರ ಬಂದಿದೆ. ಗಂಗಾದೇವಿ ಎಂಬಾಕೆ 'ಕೆಳದಿ ರಾಜ್ಯಾಭ್ಯುದಯಂ' ಎಂಬ ಕೃತಿ ಯನ್ನು ಬರೆದಂತೆ ಒಂದು ಕಾಗದದ ಪ್ರತಿಯಿಂದ ತಿಳಿದುಬರುತ್ತದೆ. ಈ ಕವ ಯಿತ್ರಿಯ ಬಗ್ಗೆ ಕೃತಿಕಾರರು ತೀರ ಸಂದಿಗ್ಧ ಸ್ಥಿತಿಯಲ್ಲಿ ಚರ್ಚೆಯನ್ನು ಉಳಿಸಿರು ವುದು, ಅವಳ ಕರ್ತೃತ್ವವೇ ಸಂದೇಹಾಸ್ಪದವಾಗಿರುವಾಗ ಆ ಬಗ್ಗೆ ಏನೂ ಸ್ಪಷ್ಟವಾಗಿ

ಹೇಳದಿರುವುದು (ಪು. 134-5) ಶೋಚನೀಯ ಸಂಗತಿ. ಕವಿಗಳ ಕೃತಿಗಳ ವಿಶ್ಲೇಷಣೆ ಅಸಮರ್ಪಕವೆನ್ನುವುದಕ್ಕೆ 'ಕೆಳದಿನೃಪವಿಜಯ'ದ ಬಗ್ಗೆ ಬಂದಿರುವ ಬರಹ ಒಳ್ಳೆಯ ಉದಾಹರಣೆ (ಪು. 209-15). ಕೆಲವೆಡೆ 'ಹರಿಹರನ ಪ್ರಭಾವ'ವಿದೆ ಎನ್ನುತ್ತಾರೆ, (ಪು. 217) ಎಲ್ಲಿ ಎನ್ನುವುದು ಸ್ಪಷ್ಟವಾಗುವುದಿಲ್ಲ. 'ಶಿವಕಲ್ಯಾಣ'ವೆಂಬ ಯಕ್ಷಗಾನ 'ಕಲಾತ್ಮಕ'ವಾಗಿದೆ ಎನ್ನುತ್ತಾರೆ (ಪು. 223) ; ಆದರೆ, ಆ ಯಕ್ಷಗಾನದ ವಿಶ್ಲೇಷಣೆ, ಅದರ ಬಂಧ ಇವುಗಳ ಪರಿಚಯವಾಗುವುದಿಲ್ಲ. 'ಶಾಸನಸಾಹಿತ್ಯ' ಭಾಗ (ಪು. 249-50) ಕೆಳದಿ ಅರಸರ ಶಾಸನಗಳ ವೈಶಿಷ್ಟ್ಯವನ್ನು ಪರಿಚಯ ಮಾಡಿ ಕೊಡುವಲ್ಲಿ ವಿಫಲವಾಗುತ್ತದೆ. ಕೆಳದಿ ಶಾಸನಗಳು ಗದ್ಯಾತ್ಮಕವಾಗಿ, ಅಲ್ಲಿ ಕೇವಲ ವಿಷಯ ನಿರೂಪಣೆಯೇ ಮುಖ್ಯ ಉದ್ದೇಶವಾಗಿರುವುದು ಆ ಕಾಲಕ್ಕೆ ತೀರ ನಿರೀಕ್ಷಿತವೆಂಬುದನ್ನು ಗುರುತಿಸಬೇಕೇ ಹೊರತು "ದೌರ್ಭಾಗ್ಯವಶಾತ್ ಕೆಳದಿಯ ಶಾಸನಗಳಲ್ಲಿ ಹೆಚ್ಚು ಸಾಹಿತ್ಯಾಂಶಗಳು ಸಿಗುವುದಿಲ್ಲ" ಎಂದು ಹೇಳುವುದು ಸಮರ್ಥನೀಯವಾಗದು, ರಾಜಾಸ್ಥಾನಗಳ ವಿದ್ವದ್ಗೋಷ್ಠಿಗಳನ್ನು 'ಸಾಹಿತ್ಯ ಅಕಾಡೆಮಿ' ಎಂದು ಕರೆದು, ಗೋಷ್ಟಿ, ಅನುಭವಗೋಷ್ಠಿ(?), ಪರಿಷತ್, ಸತ್ಸಭೆ, ವಿದ್ವತ್ಸಭೆ, ಸಂಗಂ, ಇವು ಅಂದಿನ ಅಕಾಡೆಮಿಗೆ ಇದ್ದ ಪರ್ಯಾಯನಾಮಗಳೆಂದಿರುವುದು, ಇಕ್ಕೇರಿಯ 'ನಾಟಕಶಾಲೆ' (ಇದು ವಾಸ್ತವವಾಗಿ ನರ್ತನಶಾಲೆ) ಸಾಹಿತ್ಯ ಅಕಾಡೆಮಿ ಸೇರುತ್ತಿದ್ದ ಭವನವೆಂದು ಊಹಿಸುವುದು ಹಾಸ್ಯಾಸ್ಪದ.

ಮರುಳಯ್ಯನವರು ಅನೇಕ ಹಸ್ತಪ್ರತಿಗಳನ್ನು ನೋಡಿದ್ದಾರೆ ; ಶ್ರಮಿಸಿದ್ದಾರೆ, ನಿಜ. ಆದರೆ ನಿರೂಪಣೆಯಲ್ಲಿ ಶಿಸ್ತು, ಆಲೋಚನೆಯಲ್ಲಿ ಒಂದು ಕ್ರಮ ಇದ್ದಿದ್ದರೆ ಎಷ್ಟೊಂದು ಒಳ್ಳೆಯ ನಿಬಂಧವಾಗುತ್ತಿತ್ತು. ಎಷ್ಟೋ ಕಡೆ ವಾಕ್ಯ ರಚನೆಯೇ ಸುಸಂಬದ್ಧವಾಗಿರುವುದಿಲ್ಲ. Op. cit., ibid ಇತ್ಯಾದಿ ಚಿಹ್ನೆಗಳ ಸರಿಯಾದ ಬಳಕೆ ತಿಳಿಯದು. ಸಮಸ್ಯೆಗಳನ್ನು ಎತ್ತುವ ಎದುರಿಸುವ ಬಿಡಿಸುವ ಯತ್ನ ಅಷ್ಟಾಗಿ ಕಾಣದು. ಉಲ್ಲೇಖಗಳನ್ನೂ ಅಡಿಟಿಪ್ಪಣಿಗಳನ್ನೂ ಕೊಡುವಲ್ಲಿ ಅನವಧಾನತೆ ಎದ್ದು ಕಾಣುತ್ತದೆ. "ಆಧಾರ ಗ್ರಂಥಾವಲಿ" ಭಾಗವಂತೂ ಅವ್ಯವಸ್ಥೆಯ ಪರಮಾವಧಿ. ಲೇಖಕರ, ಪುಸ್ತಕಗಳ ಹೆಸರುಗಳು ಅನೇಕ ಕಡೆ ತಪ್ಪಾಗಿವೆ. ಅಚ್ಚಿನ ತಪ್ಪುಗಳಿಗೆ ಲೆಕ್ಕವಿಲ್ಲ. ಹೀಗಾಗಿ, ಈ ನಿಬಂಧದ ಪ್ರಕಾಶಕರಾಗಲಿ, ಲೇಖಕರಿಗಾಗಲಿ ಇಂತಹ ಪ್ರಕಟಣೆಯಿಂದ ಗೌರವ ಬರುತ್ತದೆಯೆಂದು ನಾನು ಹೇಳಲಾರೆ. ನಿಬಂಧಕ್ಕೆ ಎಷ್ಟು ಒಳ್ಳೆಯ ವಿಷಯ, ಲೇಖಕರಿಗೆ ಎಷ್ಟು ಒಳ್ಳೆಯ ಸಾಮಗ್ರಿ ಲಭಿಸಿದೆ ; ಆದರೆ ಫಲಿತಾಂಶವನ್ನು ನೋಡಿದರೆ ಏಕೆ ಹೀಗೆ? ಎಂಬ ಪ್ರಶ್ನೆ ಮೂಡುತ್ತದೆ. ಉತ್ತರವೂ ತಾನಾಗಿಯೇ ಹೊಳೆಯುತ್ತದೆ.

"ದಕ್ಷಿಣ ಕರ್ಣಾಟಕದ ಜನಪದ ರಂಗಭೂಮಿ" ಡಿ. ಕೆ. ರಾಜೇಂದ್ರರ ಪಿಎಚ್.ಡಿ. ನಿಬಂಧ. ಇದರಲ್ಲಿ ಐದು ಭಾಗಗಳಿವೆ ; ಜನಪದ ನಾಟಕಗಳ ಮೂಲ,

ಮೂಡಲಪಾಯ ಯಕ್ಷಗಾನ ಬಯಲಾಟ, ಗೊಂಬೆಯಾಟಗಳು, ಉಪಸಂಹಾರ ಮತ್ತು ಅನುಬಂಧಗಳು. ಮೊದಲ ಭಾಗದಲ್ಲಿ ಜನಪದ ನಾಟಕಗಳ ಮೂಲವನ್ನೂ ಕರ್ಣಾಟಕದ ಜನಪದ ರಂಗಭೂಮಿಯನ್ನೂ ಕುರಿತು ವಿವೇಚಿಸಿದ್ದಾರೆ. ಈ ಭಾಗದ ಮೊದಲ ವಾಕ್ಯವೇ ಓದುಗ ಹುಬ್ಬೇರಿಸುವಂತೆ ಮಾಡುತ್ತದೆ—"ಭಾರತೀಯ ಸಂಪ್ರದಾಯದಲ್ಲಿ ಯಾವುದೊಂದರ ಅಥವಾ ಎಲ್ಲದರ ಮೂಲವನ್ನು, ಯಾವ ತೊಡಕೂ ಇಲ್ಲದೆ ಸುಲಭವಾಗಿ ಗುರುತಿಸಬಹುದು". ಅದರ ಮುಂದಿನ ವಾಕ್ಯ ಹೀಗಿದೆ—"ಅವುಗಳಿಗೆ ಕೊಡುವ ವಿವರಣೆಯೂ ಸಂಪ್ರದಾಯ ಮೂಲವಾದದ್ದರಿಂದ ಅದೂ ಅಷ್ಟೇ ಸುಲಭವಾಗಿರುತ್ತದೆ"—ಈ ಮಾತುಗಳು ಆದ್ಯ ರಂಗಾಚಾರ್ಯರು ಯಾವುದೋ ಒಂದು ಕಡೆ ಆಡಿದ ಮಾತನ್ನು ವಿಮರ್ಶಿಸದೆ ತೆಗೆದುಕೊಂಡುವಾದ್ದರಿಂದ, ಲೇಖಕರು ಅವನ್ನು ಗಂಭೀರವಾಗಿ ಹೇಳಿದ್ದಾರೆಯೋ ವ್ಯಂಗ್ಯಕ್ಕೆ ಹೇಳಿದ್ದಾರೆಯೋ ತಿಳಿಯದು. ಒಂದು ನಿಬಂಧವನ್ನು ಆರಂಭಿಸುವ ಮಾತುಗಳಂತೂ ಹೀಗಿರಬಾರದು ತಾನೇ! ಜನಪದ ನಾಟಕಗಳಿಗೆ ಭೂತನೃತ್ಯ, ಗೊಂಬೆಯಾಟ ಮೂಲ ಮುಂತಾದ ಸಿದ್ಧಾಂತಗಳನ್ನು ಉಲ್ಲೇಖಿಸಿದ್ದಾರೆ. 21ನೇ ಪುಟದಲ್ಲಿ ಇಂತಹ ಸಮಸ್ಯೆಗಳನ್ನು ಬಿಡಿಸುವುದು ಕಷ್ಟ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಜನಪದ ನಾಟಕಗಳ ಮೂಲದಂತಹ ಹಿಡಿತಕ್ಕೆ ಸಿಗದ ವಿಷಯಗಳ ಚರ್ಚೆಯೇ ಇಂತಹ ನಿಬಂಧಗಳ ವ್ಯಾಪ್ತಿಗೆ ಹೊರಗು. 'ಕರ್ಣಾಟಕ ಜನಪದ ರಂಗಭೂಮಿ' ಭಾಗದಲ್ಲಿ ರಂಗಭೂಮಿಯ ವಿವಿಧ ಪ್ರಕಾರಗಳನ್ನು ವಿಶ್ಲೇಷಿಸಿದ್ದಾರೆ. ಯಕ್ಷಗಾನದ ಬೇರೆ ಬೇರೆ 'ಪಾಯ'ಗಳ (=ಪದ್ಧತಿ?) 'ತಿಟ್ಟು'ಗಳ ವ್ಯತ್ಯಾಸವನ್ನು ತೋರಿದ್ದಾರೆ. ದಕ್ಷಿಣ ಭಾರತದ ಎಲ್ಲ ಜಾನಪದ ರಂಗಭೂಮಿಗಳೂ 'ದ್ರಾವಿಡಮೂಲ'ದವು ಎಂಬ ನಿರ್ಧಾರಕ್ಕೆ ಬಂದಿದ್ದಾರೆ.

ಮೂಡಲಪಾಯ ಯಕ್ಷಗಾನ ಬಯಲಾಟ ದಕ್ಷಿಣ ಕರ್ಣಾಟಕದಲ್ಲಿ ಪ್ರಚಲಿತವಾಗಿರುವ ಜಾನಪದ ನಾಟಕ ಪ್ರಭೇದ. ಇದೇ ಈ ನಿಬಂಧದ ಬಹು ಮುಖ್ಯ ಭಾಗ ಮತ್ತು ಈ ಬಗ್ಗೆ ಲೇಖಕರು ವ್ಯಾಪಕವಾಗಿ ಕ್ಷೇತ್ರಕಾರ್ಯವನ್ನು ಮಾಡಿದ್ದಾರೆ. ವಸ್ತು, ರಂಗಸ್ಥಳ, ವಾದ್ಯ, ವೇಷಭೂಷಣ, ಆಟ ಕಲಿಸುವ ವಿಧಾನಗಳ ಬಗ್ಗೆ ಸಾಕಷ್ಟು ಮಾಹಿತಿ ಸಂಗ್ರಹಿಸಿದ್ದಾರೆ. ಉದ್ದಕ್ಕೂ ಉಳಿದ ಯಕ್ಷಗಾನ ಬಯಲಾಟಗಳಿಗೂ ಮೂಡಲಪಾಯಕ್ಕೂ ಇರುವ ಭೇದವನ್ನು ಗಮನಿಸಿದ್ದಾರೆ. ಉಚಿತವಾದ ಚಿತ್ರಗಳನ್ನು ಕೊಟ್ಟಿದ್ದಾರೆ. ಸೂತ್ರದ ಗೊಂಬೆಯಾಟದ ತೊಗಲು ಬೊಂಬೆಯಾಟದ ಬಗ್ಗೆಯೂ ಇದೇ ಮಾತನ್ನು ಹೇಳಬಹುದು. ಇಂತಹ ನಿಬಂಧಗಳಲ್ಲಿ "ಆದಿಮಾನವ ತನ್ನ ಬದುಕನ್ನು ಚೌಕಟ್ಟಿಗೆ ಒಳಪಡಿಸಿಕೊಳ್ಳುವ ಪ್ರಾರಂಭದ ದಿನಗಳಲ್ಲಿ ಇದೂ (=ಸೂತ್ರದ ಬೊಂಬೆಯಾಟವೂ) ತನ್ನ ಹುಟ್ಟನ್ನು ಪಡೆದಂತೆ ತೋರುತ್ತದೆ" ಎಂಬಂತಹ ಮಾತುಗಳನ್ನು ಬಿಡುವುದು ಒಳ್ಳೆಯದು. ಖಚಿತವಾಗಿ ಗೊತ್ತಿಲ್ಲದಿರುವ ಸಂಗತಿಗಳ ಬಗ್ಗೆ ಏಕೆ ಇಂತಹ ವ್ಯರ್ಥ ಊಹೆಗಳು! ಮೇಲಿನ ಮೂರು ಜಾನಪದ ರಂಗ

ಭೂಮಿಗಳನ್ನು ಕುರಿತಂತೆ ಸಮಗ್ರವಾದ ಮಾಹಿತಿ ಇಲ್ಲಿ ದೊರಕುತ್ತದೆಯೆನ್ನುವುದು ಈ ಕೃತಿಯ ಮಹತ್ವದಾಗಿದೆ.

ಉಪಸಂಹಾರ ಭಾಗದಲ್ಲಿ, ಲೇಖಕರು ಈ ನಿಬಂಧದಲ್ಲಿ ನಾಲ್ಕು ನಿರ್ಣಯಗಳಿಗೆ ಬರಲಾಗಿದೆ ಎಂದಿದ್ದಾರೆ. (ಪು. 169) ದುರದೃಷ್ಟದ ಸಂಗತಿಯೆಂದರೆ, ಆ ನಾಲ್ಕು ನಿರ್ಣಯಗಳು ಅವರವಲ್ಲ. ಅವರೇ ತಮ್ಮ ನಿಬಂಧದಲ್ಲಿ ಅಲ್ಲಲ್ಲಿ ಕೊಟ್ಟಿರುವ ಇಂಗ್ಲಿಷ್ ಉಲ್ಲೇಖಗಳು ಆ ಮಾತುಗಳನ್ನು ಹಿಂದಿನವರು ಆಡಿ ಬಿಟ್ಟಿದ್ದಾರೆ ಎಂಬುದನ್ನು ಹೇಳುತ್ತವೆ. ಉದಾಹರಣೆಗೆ, "ಜನಪದ ನಾಟಕಗಳಿಗೆ ಜನಪದ ನೃತ್ಯವೇ ಮೂಲ" ಎಂಬ 'ನಿರ್ಣಯ'ಕ್ಕೆ ಪು. 14ರಲ್ಲಿನ Encyclopaedia of the Social Sciences ಎಂಬ ವಿಶ್ವಕೋಶದ ಲೇಖನವನ್ನೂ, ಮೂರನೆಯ "ಮಾನವ ರಂಗಭೂಮಿಗೆ ಸೂತ್ರದ ಬೊಂಬೆಯಾಟವೇ ಮೂಲ" ಎಂಬ 'ನಿರ್ಣಯ'ಕ್ಕೆ ಪು. 18ರ ಪಿಷಲ್ ಅವರ ಮಾತನ್ನೂ, "ಮೂಡಲ"ಪಾಯ ಯಕ್ಷಗಾನ ಬಯಲಾಟದಲ್ಲಿ ಬಯಲಾಟದ ಪ್ರಾಚೀನ ರೂಪವನ್ನೂ ಕಾಣಬಹುದು" ಎಂಬ 'ನಿರ್ಣಯಕ್ಕೆ' ಪು. 27ರ ಎಚ್. ಕೆ. ರಂಗನಾಥ್ ಅವರ ಮಾತನ್ನೂ ಗಮನಿಸಬಹುದು. ದಕ್ಷಿಣ ಭಾರತದ ಜಾನಪದ ರಂಗಭೂಮಿ ಮುಖ್ಯವಾಗಿ ದ್ರಾವಿಡ ಮೂಲದ್ದು ಎಂಬ ಮಾತನ್ನು ಆಗಲೇ ಯಾರೋ ಹೇಳಿದ್ದರಲ್ಲಿ ಆಶ್ಚರ್ಯವಿಲ್ಲ. ಎಂದರೆ, ನಿಬಂಧಕಾರರು ತಮ್ಮ ನಿಬಂಧದ ಹೊಸ ಅಂಶಗಳನ್ನು ತಮ್ಮ ನಿರ್ಣಯದಲ್ಲಿ ಎತ್ತಿ ತೋರಿಸಿಲ್ಲವೆಂಬುದು ಸ್ವಯಂವೇದ್ಯವಾಗುತ್ತದೆ.

ಲೇಖಕರು ತಮ್ಮ ನಿಬಂಧವನ್ನು ಬೇರೆಯವರ ಮಾತುಗಳಿಂದ ತುಂಬಿಸಿದ್ದಾರೆ. ಅನಗತ್ಯವಾದ ಕಡೆ ಉಲ್ಲೇಖಗಳನ್ನು ಕೊಡುತ್ತಾರೆ, ಇಂಗ್ಲಿಷ್ ಭಾಗಗಳಲ್ಲಂತೂ ತಪ್ಪುಗಳು ಹೇರಳವಾಗಿವೆ. ಅಚ್ಚಿನ ತಪ್ಪುಗಳೂ ಸಾಕಷ್ಟಿವೆ. ನಮ್ಮಲ್ಲಿ ಪಿಎಚ್.ಡಿ. ನಿಬಂಧಗಳನ್ನು ಬರೆಯುವವರು ತಮ್ಮ ಕಾರ್ಯವನ್ನು ಶ್ರದ್ಧೆಯಿಂದ ಒಂದು ಶಿಸ್ತಿಗೆ ಒಳಪಟ್ಟು ಸಿದ್ಧಪಡಿಸದಿದ್ದರೆ ಇಂತಹ ದೋಷಗಳು ಘಟಿಸುತ್ತವೆ. ಮುಖ್ಯವಾಗಿ ಮೂಡಲಪಾಯ ಯಕ್ಷಗಾನದ ಬಗ್ಗೆ ಮಾಹಿತಿ ಸಂಗ್ರಹವಾಗಿದೆಯೆಂಬುದು ಈ ನಿಬಂಧದ ಪರವಾಗಿ ಹೇಳಬಹುದಾದ ಒಂದು ಮಾತು.

"ಕಮ್ಮಟದ ಕಿಡಿಗಳು" ಎಂಬ ಹಂಪ. ನಾಗರಾಜಯ್ಯನವರ ಪುಸ್ತಕದಲ್ಲಿ 'ಸಂಶೋಧನಾತ್ಮಕ ಲೇಖನಗಳು' (ಒಟ್ಟು ನಲವತ್ತೈದು) ಇವೆಯೆಂದು ಅವು "ಮುಖ್ಯವಾಗಿ ಶಬ್ದಕೋಶಸಿದ್ಧತೆಯಲ್ಲಿ ಕೆಲಸಮಾಡುವವರಿಗೆ...ಸಾಕಷ್ಟು ಮಾಹಿತಿ ಒದಗಿಸುತ್ತವೆ"ಯೆಂದು ಮುನ್ನುಡಿಯಲ್ಲಿ ಹೇಳಿಕೊಳ್ಳಲಾಗಿದೆ. ಪುಸ್ತಕದ ಹೆಸರು ವಾಸ್ತವವಾಗಿ ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಒಂದು ಸ್ಥಿರ ಶೀರ್ಷಿಕೆಯದೇ ಆಗಿದ್ದು ಅದನ್ನು ಅಲ್ಲಿಂದ ಎತ್ತಿಕೊಂಡು ಹಾಗೆ ಎತ್ತಿಕೊಂಡದ್ದನ್ನು ಎಲ್ಲೂ ಸ್ಮರಿಸದೆ ಈ ಪುಸ್ತಕಕ್ಕೆ ಬಳಸಿಕೊಂಡಿರುವುದರ ಔಚಿತ್ಯವನ್ನು ಪ್ರಶ್ನಿಸಬೇಕೆನ್ನಿಸುತ್ತದೆ.

ಇಲ್ಲಿಯ ಲೇಖನಗಳಲ್ಲಿ ಇಪ್ಪತ್ತೊಂದು ಲೇಖನಗಳು ಶಬ್ದಾರ್ಥಕ್ಕೆ ಸಂಬಂಧ ಪಟ್ಟುವಾಗಿವೆ ; ಮೂರು ಕವಿಕಾಲ ವಿಚಾರಕ್ಕೆ, ಇನ್ನು ಕೆಲವು ಶಬ್ದಕೋಶಕ್ಕೆ ಕವಿಗಳ ಕಾಣಿಕೆಗೆ ಸಂಬಂಧಿಸಿವೆ. ಕವಿಚರಿತೆಗೆ ತಿದ್ದುಪಡಿ ಎಂದು ಎರಡು ಲೇಖನಗಳು ಇವೆ. ಹೀಗೆಯೇ ಪಾಠಾಂತರ ಸಮಸ್ಯೆ, ಕವಿಗಳಿಗೆ ಸಂಬಂಧಿಸಿದ ಸಾಮಾನ್ಯವಿಚಾರ, ತೌಲನಿಕ ಅಧ್ಯಯನ ಹೀಗೆ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ಲೇಖನ ಗಳಿವೆ. "ತೀ. ನಂ. ಶ್ರೀ.ಯವರ ಅಪ್ರಕಟಿತ ಕವನ"ವೆನ್ನುವುದೂ ಇಲ್ಲಿ 'ಸಂಶೋಧನ ಲೇಖನ'ವಾಗಿ ಸೇರಿದೆ. ತೀ. ನಂ,ಶ್ರೀ. (ಯವರು ತಿರುವನಂತಪುರದಲ್ಲಿ ಕೆ. ಎಸ್. ನರಸಿಂಹಸ್ವಾಮಿಯವರ ಪದ್ಯವೊಂದನ್ನು ಇಂಗ್ಲಿಷಿಗೆ ಅನುವಾದಿಸಿದ ವಿಷಯವನ್ನು ಹೇಳಿ, "ತೀ.ನಂ.ಶ್ರೀ.ಯವರು ಮಾಡಿದ ಇಂಗ್ಲಿಷ್ ಅನುವಾದವನ್ನು ಕನ್ನಡದ ಮೂಲ ಪದ್ಯದೊಡನೆ ಇಲ್ಲಿ ಕೊಟ್ಟಿದೆ" ಎಂದು ಸೂಚಿಸಿದ್ದರೂ ಇಂಗ್ಲಿಷ್ ಅನುವಾದವೂ ಇಲ್ಲ, ಕನ್ನಡದ ಮೂಲವೂ ಇಲ್ಲಿಲ್ಲ. "ಕಮ್ಮಟದ ಕಿಡಿಗಳು" ಪುಸ್ತಕದ ಹಿಂದೆ ಕೆಲಸ ಮಾಡಿರುವ ಎಚ್ಚರಗೇಡಿತನಕ್ಕೆ ಇದೊಂದೇ ಉದಾಹರಣೆ ಸಾಕು.

ವಾಸ್ತವ ಸಂಗತಿಯೆಂದರೆ, ಈ ಪುಸ್ತಕದಲ್ಲಿ ಯಾವುದೂ ನಿಜವಾದ ಸಂಶೋಧ ನಾತ್ಮಕ ಲೇಖನವಲ್ಲ. ಇದಕ್ಕೆ ಕಾರಣ, ಲೇಖಕರಿಗೆ ಇರುವ ವೈಜ್ಞಾನಿಕ ದೃಷ್ಟಿಯ ಅಭಾವ. ಮೊದಲ ಲೇಖನ 'ಅತ್ತಪರ : ಶಬ್ದಾರ್ಥ ಜಿಜ್ಞಾಸೆ' ಎಂಬುದನ್ನೇ ನೋಡಿ. 'ಅತ್ತಪರ' ಎಂದರೆ ಗುರಾಣಿ ಎಂದರ್ಥ ; ಕೇಶಿರಾಜನೇ 'ಕಾಳೆಗವಲಗೆ' ಎಂದು ಅರ್ಥವನ್ನು ಸೂಚಿಸಿಬಿಟ್ಟಿದ್ದಾನೆ. ಕನ್ನಡ ನಿಘಂಟಿನಲ್ಲಿ ಅದರ ನಿಷ್ಪತ್ತಿಗೆ ಪ್ರಶ್ನಾ ರ್ಥಕ ಚಿಹ್ನೆ ಹಾಕಿರುವುದನ್ನು ನಾಗರಾಜಯ್ಯನವರು ಪ್ರಶ್ನಿಸಿ, ಅದನ್ನು 'ಹಸ್ತಫಲಕ' ದಿಂದ ನಿಷ್ಪನ್ನ ಮಾಡಬಹುದೆನ್ನುತ್ತಾರೆ. ನಿಷ್ಪತ್ತಿ ಅಷ್ಟು ಸುಲಭವಾಗಿದ್ದರೆ ನಿಘಂಟಿನವರೇ ಅದನ್ನು ಸೂಚಿಸುತ್ತಿದ್ದರು. ಸಂಸ್ಕೃತ. ಹಸ್ತಫಲಕ-ಪ್ರಾ. ಹತ್ಥಫರಅ ಕ.ಅತ್ತಪರ : ಇದು ಅವರು ಸೂಚಿಸುವ ನಿಷ್ಪತ್ತಿ. 'ಪಾಇಅಸದ್ದ ಮಹಣ್ಣವೊ' ತೆಗೆದು ನೋಡಿದರೆ ಅಲ್ಲಿ ಸುಲಭವಾಗಿ 'ಫರಅ' ಶಬ್ದವು ಕಾಣುತ್ತದೆ. 'ಫರಅ'ದ ಮೂಲ 'ಸ್ಫರಕ' (= Shield). 'ಅತ್ತಪರ'ದ ಉತ್ತರಾರ್ಧ 'ಫರಅ' ಎಂಬಲ್ಲಿ ಅನುಮಾನವಿಲ್ಲ. ಪೂರ್ವಾರ್ಧ 'ಹಸ್ತ'ದ ಪ್ರಾಕೃತ ರೂಪ'ಹತ್ಥ'ವಿರಬಹುದು, ಅಥವಾ 'ಅಸ್ತ್ರ'ದ ಪ್ರಾಕೃತರೂಪ 'ಅತ್ಥ' ವಿರಬಹುದು. ಕನ್ನಡ ನಿಘಂಟಿನ ಮೊದಲ ಸಂಪಾದಕರು ಅವಸರದಿಂದ ಏನೋ ತಪ್ಪು ನಿಷ್ಪತ್ತಿ ಹೇಳುವ ಬದಲು ಪ್ರಶ್ನಾರ್ಥಕ ಚಿಹ್ನೆ ಹಾಕಿದ್ದರೆ, ಅದನ್ನು ತಿದ್ದಲು ಹೊರಟಾಗ ನಾವೂ 'ಹಸ್ತಫಲಕ'ದಿಂದ ಅದನ್ನು ಹೊರಡಿಸುವಂತಹ ಸಾಮಾನ್ಯ ತಪ್ಪು ಮಾಡಬೇಕೆ? 'ಫರಅ' (<ಸ್ಫರಕ) 'ಪಾಇ ಅಸದ್ದ ಮಹಣ್ಣವೊ'ದಲ್ಲಿಯೇ ದೊರಕುವಾಗ ಅದನ್ನು ನೋಡಬೇಡವೇ?

ಪದಾದಿಯ 'ಹ್'—ಲೋಪವಾಗುವುದಕ್ಕೆ ಅನಗತ್ಯವಾಗಿ ಉದಾಹರಣೆ ಕೊಡುವುದು, ಅನಗತ್ಯವಾಗಿ ತಮ್ಮ ಲೇಖನವನ್ನು ಉಲ್ಲೇಖಿಸಿಕೊಳ್ಳುವುದು (ಪು. 2) ತೀರ ಅನಗತ್ಯವಾಗಿರುತ್ತದೆ. ಸಮಯ ಸಿಕ್ಕಾಗಲೆಲ್ಲ ಹಂಪನಾ ಅವರು ತಮ್ಮ ಲೇಖನಗಳನ್ನೇ ಉಲ್ಲೇಖಿಸಿಕೊಂಡು ತೃಪ್ತಿಪಡುತ್ತಾರೆ.

'ಎದೆ' ಶಬ್ದದ ಬಗ್ಗೆ ಬರೆದಿರುವ ಟಿಪ್ಪಣಿಯಲ್ಲಿ ಏನು ಹೊಸತು ಹೇಳುತ್ತಾರೆ? 'ಎದೆ', ಅದರ ಮೂಲ 'ಎರ್ದೆ' ಇವು ಕನ್ನಡಶಬ್ದಗಳಲ್ಲವೆಂದು ಸಾಧಿಸಹೊರಡುವುದೇ ತಮಾಷೆಯಾಗಿ ತೋರುತ್ತದೆ. ಅವು ಸಂಸ್ಕೃತದ 'ಹೃದಯ'ದ ತದ್ಭವವೆಂದು ಕೇಶಿರಾಜನೇ ಹೇಳಿದ್ದಾನೆ: ಎಲ್ಲರಿಗೂ ಅದು ಗೊತ್ತಿದೆ. "ಇದು ಕನ್ನಡದ ಮಾತಿನಂತೆ ತೋರುತ್ತದೆ. ಆದರೂ ಈ ಶಬ್ದ ಕನ್ನಡೇತರವಿರಬೇಕೆಂದು ಸಂದೇಹಿಸಲವಕಾಶವಿದೆ. ಹಾಗೆಂದು ಹೇಳಲು ಎದೆಗಾರಿಕೆಯೇ ಬೇಕಾಗಬಹುದು"—ಸಂಶೋಧನ ಲೇಖನಗಳಲ್ಲಿ ಇಂತಹ ಹಾಸ್ಯವು ವಿಕಟವಾಗಿ ಪರಿಣಮಿಸುತ್ತದೆ.

'ಎಕ್ಕಡ'ದ ಮೂಲ 'ಏಕಪತ್ರ'ವೇ, 'ಏಕಪಟ'ವೇ (ಪು. 187) ಲೇಖಕರಿಗೇ ಸ್ಪಷ್ಟವಿಲ್ಲ. ಎರಡೂ ಆಧಾರವಿಲ್ಲದ ಊಹೆಗಳು. 'ಕಳಿಜಿನ್' ಎಂಬ ವ್ಯಕ್ತಿವಾಚಿಯನ್ನು ಕನ್ನಡದಲ್ಲಿಲ್ಲದ 'ಕಳಿಜು' ಶಬ್ದದಿಂದ ನಿಷ್ಪನ್ನಮಾಡುವುದೂ ವ್ಯರ್ಥ (ಪು. 246-7) "ಶಿಶುಮಾಯಣನ ಕಾಲ"ದ ಚರ್ಚೆಯಲ್ಲಿ ಹಿಂದಿನ ವಿದ್ವಾಂಸರ ಉಲ್ಲೇಖವಿಲ್ಲ.

ಅಚ್ಚಿನ ತಪ್ಪುಗಳಿಂದ ಕಿಕ್ಕಿರಿದು ತುಂಬಿರುವ ಇಂತಹ ಕೃತಿಯಿಂದ ಕನ್ನಡ ಸಂಶೋಧನ ಕ್ಷೇತ್ರಕ್ಕೆ ಎಷ್ಟೋ ಸಾರಿ ಉಪಯೋಗಕ್ಕಿಂತ ಅನಾಹುತವಾಗುವ ಸಂಭವ ಹೆಚ್ಚು. ಇಂತಹ ಬರಹವನ್ನು ಗಂಭೀರ ಸಂಶೋಧನೆಯೆಂದು ಯಾರಾದರೂ ಭ್ರಮಿಸಿದರೆ ಗತಿಯೇನು?

ಎಸ್. ಶಂಕರನಾರಾಯಣಭಟ್ಟ ಅವರ "ಗೋವಿಂದಪೈ ಅವರ ಛಂದೋಗತಿ-ಒಂದು ಅಧ್ಯಯನ" ಎನ್ನುವ ಕೃತಿ ನಮ್ಮಲ್ಲಿ ಕೆಲವು ನಿರೀಕ್ಷೆಗಳನ್ನು ಹುಟ್ಟಿಸುವ ಕೃತಿ. ಕನ್ನಡದಲ್ಲಿ ಇಲ್ಲಿಯವರೆಗೆ ನಡೆದಿರುವ ಒಬ್ಬ ಕವಿಯ ಛಂದೋ ಪ್ರಯೋಗಗಳನ್ನು ಕುರಿತಾದ ಮೀಮಾಂಸೆಯಲ್ಲಿ ಇದು ಮೊದಲನೆಯ ಗ್ರಂಥವೆಂಬ ಸ್ಥಾನವನ್ನು ಪಡೆದಿದೆ. "ಈ ಕೃತಿಯಲ್ಲಿ ಪೈಯವರು ತೋರಿದ ಛಂದೋಗತಿಯನ್ನು ನನಗೆ ತಿಳಿದಷ್ಟರಮಟ್ಟಿಗೆ ಸಾದರಪಡಿಸಿರುತ್ತೇನೆ. ಈ ನನ್ನ ಸಂಶೋಧನೆ ಪೈಯವರ ಛಂದೋಗತಿಯ ಒಂದು ಮುಖ ಮಾತ್ರ. ಇನ್ನೊಂದು ಮುಖ ಬೇರೆಯೇ ಇದೆ. ಬಹುಭಾಷಾ ತಜ್ಞರಾದ ಅವರು ಪ್ರಪಂಚದ ನಾನಾ ಭಾಷೆಗಳಲ್ಲಿರುವ ಕವನಗಳ ಛಂದಸ್ಸನ್ನು ಕನ್ನಡನುಡಿಯ ಪದ್ಯಕ್ಕೆ ಅಳವಡಿಸಿಕೊಂಡಿದ್ದಾರೆ. ಆದುದರಿಂದ ಅವರು ಪ್ರಯೋಗಿಸಿದ ಛಂದಸ್ಸಿನ ಗತಿಯಾಗಲೀ ಹರಹಾಗಲೀ ತಾಳಲಯ ಪ್ರಾಸಗಳಾಗಲೀ ಯಾವ ಯಾವ ಭಾಷಾ ಮೂಲಗಳಿಂದ ಉದ್ಧೃತವಾಗಿವೆಯೆಂದು ನೋಡಬೇಕಾಗಿದೆ". ಇಲ್ಲಿ ಏಳುವ ಪ್ರಶ್ನೆಯೆಂದರೆ, ಪೈ ಅವರ ಛಂದಸ್ಸಿನ ಬಗ್ಗೆ ಬರೆದ ಲೇಖನವೊಂದರ ಕರ್ತೃ ಈ ಮಾತು ಹೇಳಿದರೆ ಅರ್ಥವಾದೀತು; ಆದರೆ ಪುಸ್ತಕವನ್ನೇ ಬರೆಯ ಹೊರಟವರು ಇನ್ನೂ "ನೋಡಬೇಕಾಗಿದೆ" ಎಂದರೆ, "ನೋಡಬೇಕಾ

ದವರು" ಯಾರು? ವಾಸ್ತವ ಸಂಗತಿಯೆಂದರೆ, ಪೈ ಅವರ ಛಂದಸ್ಸಿನ ವೈವಿಧ್ಯವನ್ನು ಕುರಿತು ವಿಚಾರ ಮಾಡುವವರು ಸಂಸ್ಕೃತ, ಹಿಂದಿನ ಕನ್ನಡ, ಇಂಗ್ಲಿಷ್ ಛಂದಸ್ಸನ್ನು ನೋಡಿ, ಮುಖ್ಯವಾಗಿ ಪೈ ಅವರ ಕೃತಿಗಳನ್ನೇ ಸರಿಯಾಗಿ ವಿಶ್ಲೇಷಿಸಿದರೆ ಸಾಕು.

ಹೊಸಮಟ್ಟುಗಳ ಬಂಧಪ್ರಕಾರ, ಹಳೆಮಟ್ಟುಗಳ ಬಂಧ ಪ್ರಕಾರ, ಸಾನೆಟ್ಟುಗಳ ಬಂಧಪ್ರಕಾರ, ಪ್ರಾಸವಿಲಾಸ ಇವು ಈ ಕೃತಿಯ ನಾಲ್ಕು ಅಧ್ಯಾಯಗಳು.

ಹೊಸಮಟ್ಟುಗಳ ಬಗ್ಗೆ ಮಾತನಾಡುವಾಗ ಕನ್ನಡ ನವೋದಯದ ಸಂದರ್ಭ ದಲ್ಲಿ ನಡೆದ ಛಂದೋ ಪ್ರಯೋಗಗಳ ಹಿನ್ನೆಲೆಯನ್ನು ಗಮನಿಸದೇ ಹೋಗುವುದರಿಂದ ಚರ್ಚೆ ಬಹಳ ನಿಷ್ಫಲವಾಗುತ್ತದೆ. ಮೂರು ನಾಲ್ಕು ಐದು ಮಾತ್ರೆಗಳ ಗಣಗಳ ಲೆಕ್ಕಾಚಾರದಲ್ಲಿ ಪದ್ಯಗಳನ್ನು ಅಳೆಯುವುದರಲ್ಲಿ ಇಲ್ಲಿನ ಕೆಲಸ ಪರ್ಯವಸಾನವಾಗಿದೆ. ತೀ.ನಂ.ಶ್ರೀಕಂಠಯ್ಯನವರು "ಸಮಾಲೋಕನ" ಗ್ರಂಥದಲ್ಲಿ "ಎಷ್ಟು ಪರಿಕಲ್ಪನೆಗಳನ್ನು ಸೂಚಿಸಿದರು, ಎಷ್ಟು ಹೊಸ ಪದಗಳನ್ನು ಸೃಷ್ಟಿಸಿದರು : ಅವುಗಳ ಸಹಾಯವಿಲ್ಲದೆ ಹೊಸಗನ್ನಡ ಕವಿತೆಯ ಛಂದಸ್ಸಿನ ಬಗ್ಗೆ ವಿಚಾರಮಾಡುವುದನ್ನು ಕಲ್ಪಿಸಿಕೊಳ್ಳಲೂ ಸಾಧ್ಯ ವಿಲ್ಲ. ಆದರೆ ಇಲ್ಲಿ ಎಲ್ಲೂ ತೀ.ನಂ.ಶ್ರೀ. ಯವರ ಉಲ್ಲೇಖವೂ ಇಲ್ಲ, ಅವರ ಸೂಚನೆಗಳ ಉಲ್ಲೇಖವೂ ಇಲ್ಲ. ಹಳೆಯ ಮಟ್ಟುಗಳ ಬಂಧಪ್ರಕಾರ ವಿಚಾರವಾಗಲಿ ಸಾನೆಟ್ ವಿಚಾರವಾಗಲಿ ಹೇಳಿಕೊಳ್ಳುವಂತಹ ಏನನ್ನೂ ಒಳಗೊಂಡಿಲ್ಲವೆಂಬುದನ್ನು ಹೇಳ ಬೇಕಾಗಿದೆ. ಇದೇ ಮಾತನ್ನು ಪ್ರಾಸವಿಚಾರಕ್ಕೂ ಹೇಳಬೇಕಾಗಿದೆ. ಕನ್ನಡದಲ್ಲಿ ಛಂದಸ್ಸಿನ ಬಗೆಗೆ ಹೊಸವಿಚಾರಗಳ ಚರ್ಚೆ ನಡೆದಿರುವುದನ್ನು ಗುರುತಿಸಿಯೇ ಇಲ್ಲ. ಕೊನೆಗೆ, ನಾಗವರ್ಮನ ಛಂದೋಂಬುಧಿಯ ಪಾಠದ ಬಗ್ಗೆಯೂ ಈಚಿನ ಶೋಧಗಳನ್ನು ಗಮನಿಸಿಲ್ಲ. "ಮಂದರ ಧರಗಣ..." ಎನ್ನುವ ಪದ್ಯವನ್ನು ಅದರ ಹಳೆಯ ರೂಪದಲ್ಲೇ ಇಟ್ಟಿರುವುದನ್ನು (ಪು. 80) ಇಲ್ಲಿ ನೋಡಬೇಕು. ಅದರ ಪಾಠದ ಬಗ್ಗೆ ವಿದ್ವಾಂಸರ ಚರ್ಚೆ ಭಟ್ಟರ ಗಮನಕ್ಕೆ ಬಂದಿಲ್ಲವೆಂಬುದು ಸ್ಪಷ್ಟವಾಗಿದೆ.

ಗೋವಿಂದಪೈ ಅವರ ಛಂದೋಗತಿಯ ಬಗ್ಗೆ ಬಂದಿರುವ ಈ ಕೃತಿಯಿಂದ ಆ ಕವಿಯ ಛಂದಸ್ಸಿನ ಅಧ್ಯಯನಕ್ಕೆ ಆಗಿರುವ ಉಪಕಾರ ಅತ್ಯಲ್ಪವೆಂದೇ ಹೇಳ ಬೇಕಾಗಿದೆ. ಪೈಯವರ 'ಸರಳರಗಳೆ'ಯ ಪ್ರಯೋಗದ ಸೂಚನೆಯೂ ಈ ಕೃತಿ ಯಲ್ಲಿ ಕಾಣದಿರುವುದು ವಿಷಾದದ ಸಂಗತಿ.

"ತಿರುಪತಿ ತಿಮ್ಮಪ್ಪ" ಎಸ್. ಕೆ. ರಾಮಚಂದ್ರರಾಯರು ಬರೆದಿರುವ ಒಂದು ಅಪೂರ್ವ ಸಂಶೋಧನ ಕೃತಿ. ತಿರುಪತಿಯ ದೇವಾಲಯ ದಕ್ಷಿಣ ಭಾರತದ ಅತಿ ಪ್ರಸಿದ್ಧ ಯಾತ್ರಾಸ್ಥಳ ಮತ್ತು ಇಡೀ ಭಾರತದ ಅತ್ಯಂತ ಶ್ರೀಮಂತ ದೇವಾಲಯ. ಆ ದೇವಾಲಯವನ್ನು ಕುರಿತಂತೆ ಈ ಪುಸ್ತಕ ಕನ್ನಡದಲ್ಲಿದೆ ಎಂಬ ಒಂದೇ ಕಾರಣಕ್ಕೆ

ಇದು ಕೇವಲ ಪರಿಚಯಾತ್ಮಕವೆಂದು ಯಾರಾದರೂ ಭಾವಿಸಿದರೆ ತಪ್ಪಾಗುತ್ತದೆ. ದೇವಾಲಯದ ಸಾಕ್ಷಾತ್ತಾದ ಪರಿಚಯ, ದೈವದ ಬಗ್ಗೆ ಆತ್ಮೀಯವಾದ ಭಕ್ತಿ, ಶಾಸ್ತ್ರೀಯ ದೃಷ್ಟಿ, ಮೂಲ ಆಕರಗಳ ಪರಿಶೀಲನೆ ಇವುಗಳಿಂದಾಗಿ ಈ ಕೃತಿ ಮೌಲಿಕ ಗ್ರಂಥವೆನ್ನಿಸಿಕೊಳ್ಳಲು ಯೋಗ್ಯವಾಗಿದೆ ; ಸಂಶೋಧನ ಬರಹಗಳಲ್ಲಿ ಉಲ್ಲೇಖಾರ್ಹವಾಗಿದೆ.

ಬೆಟ್ಟದ ದೈವವಾದ 'ವೇಂಗಡ'ನಾಥನ ಪರಿಚಯ ಆರಂಭದಲ್ಲಿದೆ. ಬೆಟ್ಟದ ಮೂಲ ಹೆಸರು 'ವೇಂಗಡ', 'ವೆಂಕಟಾದ್ರಿ' ಎಂಬುದು ಅದರ ಸಂಸ್ಕೃತ ಛಾಯೆಯೆಂದು ರಾಯರ ಅಭಿಪ್ರಾಯ. ವೇಂಗಡದ ಪ್ರಾಚೀನತೆ, ಸಾಮಾನ್ಯದೈವವಾಗಿದ್ದ ವೆಂಕಟಪತಿ ಕ್ರಮೇಣ ಜನಪ್ರಿಯವಾದುದು, ಭಕ್ತರನ್ನೂ ಜನರನ್ನೂ ಆಕರ್ಷಿಸುತ್ತಾ ಬಂದಿದ್ದು ಈ ಎಲ್ಲ ಸ್ವಾರಸ್ಯದ ಇತಿಹಾಸ ಚಿತ್ರ ದೊರಕುತ್ತದೆ. ದೇವಾಲಯಕ್ಕೆ ದತ್ತಿಗಳು ಬಂದುವು ; ಗುಡಿಯೂ ಬೆಳೆಯಿತು. ರಾಮಾನುಜರ ಕಾಲದಲ್ಲಿ ಗುಡಿಯ ಬಗ್ಗೆ ಸಾಕಷ್ಟು ವ್ಯವಸ್ಥೆಗಳಾದುವು. ಬಂಗಾರದ ವಿಮಾನ ಸೇರಿತು. ವಿಜಯನಗರದ ದೊರೆಗಳ ಕಾಲದಲ್ಲಿ ಗುಡಿಗೆ ಹಿಂದೆ ಇಲ್ಲದಷ್ಟು ಪ್ರಾಶಸ್ತ್ಯ ಒದಗಿಬಂತು. ಅದರಲ್ಲೂ ಕೃಷ್ಣದೇವರಾಯನಿಂದ ಆದ ಸೇವೆ ಬಹುದೊಡ್ಡದು. ಎಂದರೆ, ದೇವಾಲಯದ ಅನೇಕ ನೂರು ವರುಷಗಳ ಸ್ವಾರಸ್ಯದ ಇತಿಹಾಸ ಈ ಪುಸ್ತಕದ ಮೊದಲ ಪುಟಗಳಲ್ಲಿ ನಮ್ಮ ಮುಂದೆ ತೆರೆಯುತ್ತದೆ. ಜೊತೆಗೆ, ಕಾಲದಿಂದ ಕಾಲಕ್ಕೆ ದೇವಾಲಯದ ಆಡಳಿತದಲ್ಲಿ ಕಂಡುಬಂದ ಮಾರ್ಪಾಟುಗಳ ನಿರೂಪಣೆಯೂ ಉಂಟು. ಈಗ ಇರುವ ದೇವಾಯದ, ಎಲ್ಲ ದೈವಗಳ ಪೂಜೆ ಕೈಂಕರ್ಯಗಳ ಮಾಹಿತಿಯನ್ನು ಕೊಟ್ಟಿದ್ದಾರೆ. ತಿಮ್ಮಪ್ಪನ ವಿಗ್ರಹ ಮೂಲತಃ ವಿಷ್ಣುವೋ ಶಿವನೋ ಹರಿಹರನೋ ಸುಬ್ರಹ್ಮಣ್ಯನೋ ದುರ್ಗೆಯೋ ವೀರಭದ್ರನೋ "ಎನ್ನುವ ವಿಚಾರವಾಗಿ ಬಗೆಹರಿಯದ ಗೊಂದಲ ಹಿಂದಿನಿಂದಲೂ ಇದೆ" (ಪು. 250). ಮೂರ್ತಿ ಕಪ್ಪು ಶಿಲೆಯದಾದರೂ, 'ಮರದಿಂದ ಮಾಡಿದ್ದೋ' ಎನ್ನುವ ಸಂಶಯ'ವೂ ಇದೆ (ಪು. 251).

ಎಂದರೆ, ಬರಿಯ ಭಕ್ತಿಯಿಂದ ಪ್ರಚೋದಿತವಾದ ಕೃತಿ ಇದು ಅಲ್ಲವೆನ್ನುವುದಕ್ಕೆ ಇದೊಂದು ಉದಾಹರಣೆ ಸಾಕು. ಸೊಗಸಾದ ನಿರೂಪಣೆಯಿಂದಲೂ ಸಮೃದ್ಧವಾದ ಮಾಹಿತಿಯಿಂದಲೂ ಉಚಿತ ಚಿತ್ರಗಳಿಂದಲೂ ಶೋಭಿತವಾದ ಈ ಪುಸ್ತಕ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದೆ.

ತಿರುಪತಿಯಲ್ಲಿ ಪೂರ್ವಕ್ಕೆ ಗುಡ್ಡವೊಂದರ ಮೇಲೆ ಇರುವ ಗಂಗಮ್ಮನ—ಈಕೆ ವೆಂಕಟೇಶ್ವರನ ಸೋದರಿಯಂತೆ—ಜಾತ್ರೆಯ ಉಲ್ಲೇಖ ಸ್ವಾರಸ್ಯವಾಗಿದೆ. ವರ್ಷಕ್ಕೊಮ್ಮೆ ಒಣ ಹುಲ್ಲನ್ನು ತುಂಬಿ ಮೂರ್ತಿಯನ್ನು ಸಿದ್ಧಪಡಿಸಿ, ಜಾತ್ರೆ ಮುಗಿದ ಮೇಲೆ ಸಂಭ್ರಮದಿಂದ ಅದನ್ನು ಸುಡುತ್ತಾರೆ. ತಿರುಪತಿಯ ಇತಿಹಾಸವನ್ನು ಬರೆಯುವವರು ಇದನ್ನು ಲಕ್ಷಿಸಬೇಕೆಂದು ರಾಯರು ಹೇಳಿರುವುದು ಗಮನಿಸತಕ್ಕದ್ದು.

ಎಸ್. ಕೆ. ರಾಮಚಂದ್ರರಾಯರ "ಭಾರತದ ದೇವಾಲಯ (ನೆಲೆ : ಹಿನ್ನೆಲೆ)" ಒಂದು ಚಿಕ್ಕ, ಸ್ವಾರಸ್ಯವಾದ ಕೃತಿ. ಅನೇಕರು "ಭಾರತೀಯ ದೇವಾಲಯಗಳ ತಾತ್ಪರ್ಯವನ್ನು ಬಹುಮಟ್ಟಿಗೆ ಅರಿಯರು." ದೇವಾಲಯದ ಶಿಲ್ಪ, ಇತಿಹಾಸಗಳನ್ನು ಕುರಿತು ವಿದ್ವಾಂಸರು ಸಾಕಷ್ಟು ಬರೆದಿದ್ದರೂ, "ದೇವಾಲಯವುಸ್ಥಪತಿಯ, ಅರ್ಚಕನ ಅನುಭವದ ಆಳದಿಂದ ಎದ್ದದ್ದು, ಅದಕ್ಕೊಂದು ಆಗಮದ ಚೌಕಟ್ಟಿದೆ ಎಂಬುದನ್ನು ಸಾಮಾನ್ಯವಾಗಿ ಜನ ಮರೆಯುತ್ತಾರೆ. ದೇವಾಲಯದ ನಿರ್ಮಾಣ, ಅಲ್ಲಿ ನಡೆಯುವ ಆರಾಧನೆ ಇವುಗಳನ್ನು ಕುರಿತು ನಮ್ಮಲ್ಲಿ ದೊಡ್ಡದೊಂದು ಶಾಸ್ತ್ರವೇ ಇದೆ. ಈ ಶಾಸ್ತ್ರವನ್ನು ನೋಡದೆ ದೇವಾಲಯ ತಾತ್ಪರ್ಯ ಅರ್ಥವಾಗುವುದಿಲ್ಲ". ದೇವಾಲಯದ ತಾತ್ವಿಕ ಸಾಂಕೇತಿಕ ಸ್ವರೂಪವನ್ನು ವಿವರಿಸುವುದು ಈ ಪುಸ್ತಕದ ಉದ್ದೇಶ.

ಹಳೆಯ ಕಾಲದಲ್ಲಿ ದೇಗುಲ, ದೇಗುಲ ಬೆಳೆಯಿತು, ಆಲಯದ ಕಟ್ಟಡ, ಸಂಕೇತದ ಬಲೆ, ಸಾಂಪ್ರದಾಯಿಕವಾದ ಚೌಕಟ್ಟು, ಗುಡಿಯೊಂದು ಮಂಡಲ ಇವು ಇಲ್ಲಿಯ ಅಧ್ಯಾಯಗಳು. ಪ್ರಾಕ್ತನ ಮಾನವನ ಭೀತಿಯ ವಸ್ತು, ಸಮಾಧಿ ಮಾಡಿದ ಜಾಗ, ಅಲ್ಲಿನ ಕಲ್ಲು, ಹಿರಿಯನ ಚೇತನವನ್ನು ಪ್ರತಿನಿಧಿಸುತ್ತಿದ್ದ ಮರ ಇವು ನಮ್ಮ ದೇವಾಲಯಗಳ ಮೂಲ. ಒಂದು ಜಾಗ, ಕಲ್ಲು, ಕಲ್ಲಿನ ರಾಶಿ ಬೆಳೆದು ಬಂದು ದೇವಾಲಯವಾಗಿ ರೂಪುಗೊಂಡ ಕತೆ ಸ್ವಾರಸ್ಯವಾದುದು. ದೇವಾಲಯದ ಭಾಗಗಳಾದ ಗರ್ಭಗುಡಿ, ವಿಮಾನ, ಗೋಪುರ, ಬಲಿಪೀಠ ಇತ್ಯಾದಿಗಳಿಗೆಲ್ಲ ಅರ್ಥವಿದೆ. ರಾಮಚಂದ್ರರಾಯರು ಅವುಗಳನ್ನು ಭಾರತೀಯ ಶಾಸ್ತ್ರಾನುಸಾರವಾಗಿ ವಿವರಿಸಿದ್ದಾರೆ. ಇಡೀ ದೇವಾಲಯ ರಚನೆ ಮನುಷ್ಯನ ದೇಹರಚನೆಯೊಂದಿಗೆ ಸಮೀಕರಣಗೊಳ್ಳುವುದನ್ನು ತೋರಿಸಿದ್ದಾರೆ. ಗುಡಿಗೂ 'ಮಂಡಲಕ್ಕೂ' ಇರುವ ಸಾಮ್ಯವನ್ನು ಕೊನೆಯ ಅಧ್ಯಾಯದಲ್ಲಿ ಎತ್ತಿ ತೋರಿಸಿದ್ದಾರೆ. ಭಾರತೀಯ ದೇವಾಲಯಗಳನ್ನು ಭಾರತೀಯ ಹಿನ್ನೆಲೆಯಲ್ಲಿ ತಿಳಿಸಬಯಸುವ ಈ ಕೃತಿ ರಾಯರ ಹಿರಿಯ ಕಾಣಿಕೆಗಳಲ್ಲೊಂದು.

"ಸಮಾಧಿ–ಬಲಿದಾನ – ವೀರಮರಣ ಸ್ಮಾರಕಗಳು" ಎಂ, ಎಂ, ಕಲಬುರ್ಗಿಯವರು ಬರೆದ ಒಂದು ಚಿಕ್ಕ ಶ್ರೇಷ್ಠ ಕೃತಿ. ಜೈನ ಸನ್ಯಾಸಿಗಳು ಸಲ್ಲೇಖನ ವಿಧಿಯಿಂದ ಸಮಾಧಿ ಮರಣವನ್ನು ಪಡೆದುದು, ವೀರರು ಯಾವುದೋ ಆದರ್ಶಕ್ಕೆ ತಮ್ಮನ್ನು ತಾವು ಅತ್ಮಬಲಿ ಮಾಡಿಕೊಂಡುದು, ಯುದ್ಧದಲ್ಲಿ ಭಾಗಿಗಳಾಗಿ ಹೋರಾಡಿ ಸತ್ತುದು ಇವು ಇಲ್ಲಿಯ ಸಂಶೋಧಿತ ವಿಷಯಗಳು. ನೂರಾರು ಶಾಸನಗಳನ್ನೂ ಹಲವು ಬಗೆಯ ಆಕರಗಳನ್ನೂ ಬಳಸಿಕೊಂಡು ಬರೆದಿರುವ ಈ ಕೃತಿ ಕರ್ನಾಟಕದ ಸಂಸ್ಕೃತಿಯಲ್ಲಿ ಆಸಕ್ತರಾಗಿರುವವರು ಅತ್ಯವಶ್ಯವಾಗಿ ಪರಾಮರ್ಶಿಸಬೇಕಾದ ಗ್ರಂಥವಾಗಿದೆ. ಕೆಲವು ಅಪೂರ್ವ ಚಿತ್ರಗಳು ಈ ಕೃತಿಯ ಮಹತ್ವವನ್ನು ಹೆಚ್ಚಿಸುತ್ತವೆ.

## ಜಾನಪದ

ಸಿದ್ಧಲಿಂಗಯ್ಯ

ಈ ವರ್ಷ ನಮ್ಮ ಸಮೀಕ್ಷೆಗೆ ಲಭ್ಯವಾಗಿರುವ ಕೃತಿಗಳ ಸಂಖ್ಯೆ ಕಡಿಮೆ. ಈ ಸಂಖ್ಯೆಯನ್ನೇ ಗಮನಿಸಿ ಜಾನಪದಾಸಕ್ತಿ ನಮ್ಮಲ್ಲಿ ಕಡಿಮೆ ಆಗುತ್ತಿದೆ ಎಂದು ಹೇಳುವುದು ಕಷ್ಟ. ಪ್ರಕಟವಾಗುವ ಕೃತಿಗಳ ಸಂಖೆಗಿಂತ ಅವುಗಳ ಗುಣಮಟ್ಟವನ್ನೇ ಮಾನದಂಡಮಾಡುವುದು ಸೂಕ್ತವಾಗುತ್ತದೆ. ಈ ವರ್ಷ ಸಿಕ್ಕಿರುವ ಕೃತಿಗಳಲ್ಲಿ ಒಂದೆರಡನ್ನು ಬಿಟ್ಟರೆ ಗುಣಪ್ರಮಾಣ ಎರಡರಲ್ಲೂ ಜಾನಪದ ಅಧ್ಯಯನ ಸೊರಗಿರುವುದು ಗೋಚರವಾಗುತ್ತದೆ. ಜಾನಪದ ಆಸಕ್ತಿಯನ್ನು ಸಂಗ್ರಹ ಮತ್ತು ಅಧ್ಯಯನಕ್ಕೆ ಪರಿವರ್ತಿಸಿಕೊಳ್ಳುವುದು ಅಗತ್ಯವಾಗಿದೆ.

ಜಾನಪದ, ಸಂಸ್ಕೃತಿಯ ಅತ್ಯಂತ ಮುಖ್ಯವಾದ ಭಾಗ. ಬಹುಸಂಖ್ಯಾತರ ಬದುಕಿನ ಸಾಂಸ್ಕೃತಿಕ ಜೀವನದ ಪುನರ್‌ರಚನೆ ಮತ್ತು ಅರ್ಥೈಸುವಿಕೆ ಜಾನಪದ ಅಧ್ಯಯನದಿಂದ ಸಾಧ್ಯವಾಗುತ್ತದೆ. ಜನಪದ ಸಾಹಿತ್ಯ ಪ್ರಕಾರಗಳಂತೂ ಶ್ರಮದೊಡನೆ ನಿಕಟ ಸಂಬಂಧವನ್ನು ಹೊಂದಿವೆ. ದುಡಿಯುವ ಜನವರ್ಗದ ಆಸೆ-ಭರವಸೆ-ಆತಂಕ-ಸಂಕಟಗಳು ಪ್ರತಿಭಟನೆಯ ಸೂಚನೆಗಳು ಜಾನಪದದಲ್ಲಿ ಸಿಗುವಷ್ಟು ಮತ್ತೆಲ್ಲೂ ಸಿಗಲಾರವು. ಶ್ರೇಣಿಕೃತ ಸಮಾಜ ವ್ಯವಸ್ಥೆಯೊಂದರ ವರ್ಣ-ವರ್ಗ ವೈಷಮ್ಯಗಳನ್ನು ಗುರುತಿಸಲು ಇಲ್ಲಿ ಸಾಧ್ಯವಿದೆ. ಜಾನಪದವನ್ನು ಸಂಗ್ರಹಿಸುವ, ವ್ಯಾಖ್ಯಾನಿಸುವ ವಿದ್ವಾಂಸರಿಗೆ ಈ ದೃಷ್ಟಿಕೋನದ ನೆರವು ಇಂದು ಅಗತ್ಯವಾಗಿದೆ.

### ನಮ್ಮ ಜಾನಪದ : ಚಂದ್ರಶೇಖರ ಕಂಬಾರ

ಕನ್ನಡ ಜಾನಪದದಲ್ಲಿ ಚಂದ್ರಶೇಖರ ಕಂಬಾರರದು ಮುಖ್ಯವಾದ ಹೆಸರು. ಜಾನಪದವನ್ನು ಆಳವಾಗಿ ಚಿಂತಿಸುವ, ಭಾವಿಸುವ ಅಪರೂಪದ ಸಾಮರ್ಥ್ಯವುಳ್ಳ ಕಂಬಾರರು "ನಮ್ಮ ಜಾನಪದ"ವನ್ನು ಪ್ರಕಟಿಸಿದ್ದಾರೆ. ಇಲ್ಲಿಯ ಹನ್ನೊಂದು ಲೇಖನಗಳು ಎರಡು ಭಾಗಗಳಲ್ಲಿ ಹರಡಿಕೊಂಡಿವೆ. ಒಂದನೆಯ ಭಾಗದಲ್ಲಿ ಜನಪದ ಸಾಹಿತ್ಯವನ್ನು ಕುರಿತಂತೆ, ಎರಡನೆಯ ಭಾಗದಲ್ಲಿ ಜನಪದ ರಂಗಭೂಮಿಯನ್ನು ಕುರಿತಂತೆ ಲೇಖನಗಳಿವೆ.

"ಜನಪದ ಸಾಹಿತ್ಯ" ಎಂಬ ಶೀರ್ಷಿಕೆಯ ಲೇಖನದಲ್ಲಿ ಜನಪದ ಸಾಹಿತ್ಯದ ವಿವಿಧ ಪ್ರಕಾರಗಳ ಕಿರುಸಮೀಕ್ಷೆಯಿದೆ. ಗೀತೆ, ಕಥೆ, ಲಾವಣಿ, ಗಾದೆ, ಒಗಟು

ಗಳನ್ನು ಕುರಿತ ಅಧ್ಯಯನವನ್ನು ಇಲ್ಲಿ ಕಾಣಬಹುದು. ಗರತಿಯ ಹಾಡು ಮತ್ತು ಬ್ರಾಹ್ಮಣಿಯ ಹಾಡುಗಳಲ್ಲಿನ ವ್ಯತ್ಯಾಸವನ್ನು ಗುರುತಿಸುವ ಲೇಖಕರು ಬ್ರಾಹ್ಮಣಿಯ ಹಾಡುಗಳನ್ನು ಜನಪ್ರಿಯ ಸಾಹಿತಕ್ಕೆ ಸೇರಿಸಿರುವುದು ಔಚಿತ್ಯಪೂರ್ಣವಾಗಿದೆ. ಕಲ್ಗಿ—ತುರಾ ಪದ್ಧತಿಯ ಉಗಮವನ್ನು ಕುರಿತು ಪ್ರಸ್ತಾಪಿಸುವ ಹದಿನೆಂಟು ಮತ್ತು ಒಂಭತ್ತು ಪಣದ ವಿಚಾರ ಇನ್ನೂ ವಿವರವಾಗಿ ಬಂದಿದ್ದರೆ ಅವರ ವಾದ ಬಲ ಗೊಳ್ಳುತ್ತಿತ್ತು.

ಕತೆ, ಗಾದೆ ಮತ್ತು ಒಗಟಿನ ಚರ್ಚೆಯೂ ಈ ಕೃತಿಯಲ್ಲಿದೆ. ಇಲ್ಲಿ ಗಮನಿಸ ಬೇಕಾದ ವಿಚಾರ ಈ ಪ್ರಕಾರಗಳನ್ನು ಅಷ್ಟೇ ಏಕೆ ಜಾನಪದದ ಎಲ್ಲ ಪ್ರಕಾರಗಳನ್ನು ಅಧ್ಯಯನ ಮಾಡುವಾಗ ಅವುಗಳನ್ನು ಹೇಳುವ ಸಂದರ್ಭವನ್ನು ಪರಿಗಣಿಸುವ ರೀತಿ. ತೋಂಡಿ ಸಂಪ್ರದಾಯ ಜಾನಪದದ ಜೀವಾಳವಾಗಿರುವುದರಿಂದ ಅದು ನಿತ್ಯವೂ ಸೃಷ್ಟಿಕ್ರಿಯೆಗೆ ಒಳಪಡಿಸುವಂಥದ್ದು. ಈ ಸಾಹಿತ್ಯದಅಧ್ಯಯನವನ್ನು ಅದು ಹುಟ್ಟುವ ಸಂದರ್ಭವನ್ನು ಗಮನಿಸಿಯೇ ಕೈಗೊಂಡಿರುವುದು ಕಂಬಾರರ ವಿಶಿಷ್ಟತೆ. ಈ ಪುಸ್ತಕದ ಎಲ್ಲ ಲೇಖನಗಳಲ್ಲೂ ಸಂದರ್ಭದ ಅಧ್ಯಯನವುಸಾಗಿರು ವುದರಿಂದ ಇಲ್ಲಿಯ ವಿಚಾರಗಳು ಒಂದು ಬಗೆಯ ಖಚಿತತೆಯನ್ನು ಪಡೆದುಕೊಂಡಿವೆ.

'ಒಂದು ಜನಪದ ಪ್ರಣಯ ಕತೆ' ಎಂಬ ಲೇಖನದಲ್ಲಿ ಕತೆಯ ಲಕ್ಷಣ, ಸ್ವರೂಪ ಗಳ ಕುತೂಹಲಕರವಾದ ಚರ್ಚೆಯಿದೆ. ಇವರು ಅಭ್ಯಾಸಕ್ಕೆ ಆಯ್ಕೆಮಾಡಿಕೊಂಡಿ ರುವ ಕಥೆ ಅಪರೂಪದ ಆಶಯಗಳನ್ನುಳ್ಳ ವಿಶಿಷ್ಟ ಕತೆಯಾಗಿದೆ. 'ಲಕ್ಷಾಪತಿ ರಾಜನ ಕಥೆಯ' ಲಕ್ಷಣಗಳನ್ನು ವಿವರಿಸಿ ಆರಾಧನೆಯ ಕಥೆಗಳ ಹೊಸ ವಿಭಾಗ ವೊಂದನ್ನು ಸೂಚಿಸುವುರುದು ಕನ್ನಡ ಜಾನಪದಕ್ಕೆ ಹೊಸ ಸಂಗತಿಯಾಗಿದೆ.

'ಒಂದೆರಡು ಜನಪದ ಕಥೆಗಳು' ಮತ್ತು 'ಭರತೇಶ ವೈಭವದಲ್ಲಿ ಜಾನಪದ ಅಂಶಗಳು' ಎಂಬ ಲೇಖನಗಳು ಸಾಧಾರಣವಾಗಿವೆ ಎನ್ನಿಸುತ್ತದೆ. ಒಂದೆರಡು ಜನಪದ ಕಥೆಗಳು' ಲೇಖನದ ವಿಚಾರಗಳು ಅಸ್ಪಷ್ಟವಾಗಿವೆಯಲ್ಲದೆ ಲೇಖಕರು ಅಭ್ಯಾಸಕ್ಕೆ ಆಯ್ಕೆಮಾಡಿಕೊಂಡಿರುವ ಕಥೆಗಳು ತೀರಾ ಸಾಮಾನ್ಯವಾದವುಗಳು.

ನವೋದಯ ಕಾವ್ಯದಲ್ಲಿ ಜನಪದ ಸತ್ವವನ್ನು ಶೋಧಿಸುವ ಲೇಖನ ಅಭ್ಯಾಸ ಯೋಗ್ಯವಾಗಿದೆ. ತಾಂತ್ರಿಕ ಕಾರಣಗಳಿಗಾಗಿ ಶಿಷ್ಟಕವಿಗಳನ್ನೇ ಜನಪದ ಕವಿಗಳು ಎಂಬ ಹಣೆ ಚೀಟಿ ಅಂಟಿಸುವುದನ್ನು ಒಪ್ಪದ ಕಂಬಾರರು ಜನಪದ ಮನೋ ಧರ್ಮವೇ ಇಲ್ಲಿ ಮುಖ್ಯ ಎನ್ನುತ್ತಾರೆ. ಬೇಂದ್ರೆಯವರು ಜಾನಪದದಿಂದ ಪಡೆ ದಿರುವ ಪ್ರೇರಣೆಯ ವಿವರವಾದ ಚರ್ಚೆ ಇಲ್ಲಿದೆ.

ಎರಡನೆಯ ವಿಭಾಗದ ಲೇಖನಗಳು ಮೊದಲನೆಯ ವಿಭಾಗದ ಲೇಖನ ಗಳಷ್ಟೇ ವಿದ್ವತ್‌ಪೂರ್ಣವಾಗಿವೆ. ಇಲ್ಲಿ ಲೇಖಕರು ವ್ಯಕ್ತಪಡಿಸಿರುವ ವಿಚಾರಗಳು ರಂಗಭೂಮಿಯ ಸಂದರ್ಭದಲ್ಲಿ ಹೆಚ್ಚು ಅಥೆಂಟಿಕ್ ಆಗಿವೆ. ಲೇಖಕರು ಜಾನಪದ

ವಿದ್ವಾಂಸರಷ್ಟೇ ಅಲ್ಲ, ಅದಕ್ಕಿಂತ ಮಿಗಿಲಾಗಿ ಜಾನಪದ ಕಲಾವಿದರು ಎಂಬುದು ಈ ಖಚಿತತೆಗೆ ಕಾರಣವಾಗಿರಬಹುದೇನೊ? 'ಆಚರಣೆಯ ಕುಣಿತ ಮತ್ತು ಬಯಲಾಟ' ಎಂಬ ಲೇಖನ ತುಂಬಿಕೊಂಡಿರುವ ವಿಚಾರಗಳು ಅತ್ಯಂತ ಉಪಯುಕ್ತವಾಗಿವೆ. ಬಯಲಾಟದ ಉಗಮಕ್ಕೆ ಆಚರಣೆಯೇ ಮೂಲ ಎಂಬ ತಮ್ಮ ವಾದಕ್ಕೆ ಲೇಖಕರು ಒದಗಿಸುವ ಸಾಕ್ಷಾಧಾರಗಳು ಸ್ವೀಕಾರಾರ್ಹವಾಗಿವೆ. ಎಲ್ಲಮ್ಮನ ಆಚರಣೆ ಮತ್ತು ಪುರಾಣವನ್ನು ಕಂಬಾರರು ಅರ್ಥೈಸಿರುವ ರೀತಿ ವೈಜ್ಞಾನಿಕವೂ, ಸಾಂದರ್ಭಿಕವೂ ಆಗಿದೆ. ಬಯಲಾಟಗಳಲ್ಲಿ ಸಂಗೀತ ಎಂಬ ಲೇಖನ ಪುಟ್ಟದಾದರೂ ವ್ಯಕ್ತವಾಗಿರುವ ವಿಚಾರಗಳು ವಿಶೇಷ ಪರಿಶ್ರಮ ಮತ್ತು ತಿಳುವಳಿಕೆಯಿಂದ ಬಂದಿವೆ.

ಜಾನಪದ ರಂಗಭೂಮಿಯ ಬಗ್ಗೆ ಲೇಖಕರಿಗೆ ಇರುವ ಅಧ್ಯಯನ ಮತ್ತು ಚಿಂತನೆಯ ಫಲ ಕೊನೆಯ ಲೇಖನ. ದ್ರಾವಿಡರ ನಾಟಕದ ಕಲ್ಪನೆಯನ್ನು ಕುರಿತ ವಿಚಾರಗಳು ಸಂಕ್ಷಿಪ್ತವಾಗಿದ್ದರೂ ಖಚಿತವಾಗಿವೆ.

'ನಮ್ಮ ಜಾನಪದ' ಜಾನಪದ ಅಭ್ಯಾಸಿಗಳಿಗೆ ಉಪಯುಕ್ತ ಕೃತಿ. ಲೇಖಕರು ಜಾನಪದವನ್ನು ಅನುಭವಿಸಿ ಆಲೋಚಿಸಿ ತಾವೂ ಅದರ ಅಂಗವಾಗಿ ಹೇಳಿರುವ ಇಲ್ಲಿಯ ವಿಚಾರಗಳು ಮನನಯೋಗ್ಯವಾಗಿವೆ.

ಜಾನಪದ : ಸಂಶೋಧನಾತ್ಮಕ ಪ್ರಬಂಧಗಳು, ಎಂ. ಎಸ್. ಲಠ್ಠೆ

ಜಾನಪದದ ವಿವಿಧ ಅಂಶಗಳನ್ನು ಕುರಿತ ಎಂಟು ಲೇಖನಗಳಿವೆ. ಜಾನಪದ ಕಲೆಗಳು, ಕವಿಗಳು, ನಂಬಿಕೆಗಳು, ವೇಶಭೂಷಣಗಳನ್ನು ಕುರಿತ ಮಾಹಿತಿಗಳನ್ನು ಕೊಡಲಾಗಿದೆ. ಇವರ ಚಿಂತನೆಯಲ್ಲಿ ವೈವಿಧ್ಯತೆ ಎದ್ದು ಕಾಣುವ ಅಂಶ. ಇವು ಜಾನಪದದ ವಿವಿಧ ಸಂಗತಿಗಳನ್ನು ಕುರಿತ ಸಂಶೋಧನಾತ್ಮಕ ಲೇಖನಗಳು ಎಂದು ಲೇಖಕರು ಭಾವಿಸಿರುವುದು ಸ್ಪಷ್ಟವಾಗಿದೆ, ಆದರೆ ಕೃತಿಯ ಹೆಸರನ್ನು ನೋಡಿನ ಜಾನಪದ ವಿದ್ಯಾರ್ಥಿ ಲೇಖನಗಳನ್ನು ನೋಡಿದರೆ ನಿರಾಶನಾಗುತ್ತಾನೆ. ಗಂಭೀರ ಸಂಶೋಧನೆಗೆ ಸಲ್ಲದ ಉದ್ಗಾರಗಳು, ವಿಶೇಷಣಗಳು, ಉದಾರವಾದ ಹೇಳಿಕೆಗಳು ಲೇಖಕರ ಸಂಶೋಧನಾತ್ಮಕ ಉದ್ದೇಶವನ್ನು ಭಗ್ನಗೊಳಿಸಿವೆ. ಉದಾ. "ಕರ್ನಾಟಕ ಬಹುದೊಡ್ಡನಾಡು. ದಕ್ಷಿಣ ಭಾರತದ ಸಂಸ್ಕೃತಿಯ ನೆಲೆವೀಡು. ಮೂಲದ್ರಾವಿಡ ಜನಾಂಗದ ಬೀಡು" (ಪು. 1) ಲೇಖಕರ ಆಲೋಚನೆಯ ಅಸ್ಪಷ್ಟತೆಗೆ ಇನ್ನೊಂದು ಉದಾಹರಣೆ "ಕಲೆ ಕಾಮುವಾಸನೆಗೆ ಅಂಟಿಕೊಂಡರೆ ಅದು ತನ್ನ ಸೌಂದರ್ಯವನ್ನು ಕಳೆದುಕೊಂಡು ಸತ್ವಹೀನವೆನಿಸುತ್ತದೆ. ಅಂಥ ಕಲೆಯಿಂದ ಯಾವ ಸಂತೋಷವೂ ಆಗಲಾರದು. ಕಾಮುವಾಸನೆಯನ್ನು ಸುಟ್ಟರೆ ಮಾತ್ರ ಕಲೆಯ ಬೆಳವಣಿಗೆ" (ಪು. 3) ಇಂಥ ಸಾಲುಗಳು ಲೇಖಕರ ಸಂಶೋಧನ ದೃಷ್ಟಿಯ ಬಗ್ಗೆಯೇ ಶಂಕೆಯನ್ನುಂಟುಮಾಡುತ್ತವೆ.

'ಬೆಳಗಾಂ ಜಿಲ್ಲೆಯ ಜನಪದ ಕವಿಗಳು' ಉಪಯುಕ್ತ ಲೇಖನ. ಬೆಳಕಿಗೆ ಬಾರದ ಅನೇಕ ಜನಮುಹತ್ವದ ಲಾವಣಿಕಾರರ, ಹಾಡುಗಾರರ ಜೀವನ ವಿವರಗಳನ್ನು ಕುತೂಹಲಕರವಾಗಿ ನಿರೂಪಿಸಿದ್ದಾರೆ. ಇಂಚಲದ ಕೆಂಚನಾಯಕನ ಬಗ್ಗೆ ಹೇಳುವಾಗ "ಕೆಂಚನಾಯ್ಕನು ಕರ್ನಾಟಕದ ಜಾನಪದ ಹೋಮರನಾಗಿ ಮೆರೆದನೆಂದು" ಹೇಳುವುದು ಪ್ರಶಂಸೆಯ ಮಾತಾಯಿತು.

'ಬಯಲಾಟದ ವೇಶಭೂಷಣಗಳು' ಲೇಖನದಲ್ಲಿ ಪರಿಶ್ರಮದ ಫಲವಾದ ಮಾಹಿತಿಗಳಿವೆ. 'ಜಾನಪದ ನಂಬಿಕೆಗಳು,' ಇನ್ನೊಂದು ಲೇಖನ. ನಂಬಿಕೆಯನ್ನು ಕುರಿತ ವಿವರಣೆಗಿಂತ ವಿಶ್ಲೇಷಣೆ ಇದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತು. ಈ ಕೃತಿಯ ಗಮನಾರ್ಹ ಲೇಖನವೆಂದರೆ "ಕವಲೆತ್ತಿನವರು" ಇಲ್ಲಿ ಅಚ್ಚುಕಟ್ಟಾದ ಅಧ್ಯಯನವಿದೆ. ಶಿಸ್ತಿನ ಸಂಗ್ರಹ ಕಾರ್ಯವಿದೆ. ಒಂದು ಜನಾಂಗದ ಅಧ್ಯಯನಕ್ಕೆ ಈ ಲೇಖನ ಮಾದರಿ ಎನ್ನುವಂತಿದೆ. ಲೇಖಕರ ಸಂಶೋಧನ ದೃಷ್ಟಿ ಇಲ್ಲಿ ಜಾಗೃತವಾಗಿರುವುದನ್ನು ಗುರುತಿಸಬಹುದು.

ಜಾನಪದ ಪರಿಶೀಲನ : ಬಿ. ಎನ್. ನಾಗರತ್ನ

ಈ ಕೃತಿಯಲ್ಲಿ ಹತ್ತು ಜಾನಪದ ಲೇಖನಗಳಿವೆ. ಮೊದಲ ಏಳು ಲೇಖನಗಳು ವಿಶ್ಲೇಷಣೆಗೆ ಸಂಬಂಧಪಟ್ಟಿವೆ. ಉಳಿದ -ಮೂರು ಲೇಖನಗಳು ಮಾಹಿತಿ ಸಂಗ್ರಹದ ರೂಪದಲ್ಲಿವೆ. "ಜನಪದ ಸಾಹಿತ್ಯದಲ್ಲಿ ಹೆಣ್ಣು" ಲೇಖನದಲ್ಲಿ ಲೇಖಕಿ ತಮ್ಮ ವೈಚಾರಿಕ ನಿಲುವನ್ನು ಪ್ರಕಟಿಸುವುದರ ಮೂಲಕ ಚರ್ಚೆಯನ್ನು ಉಪಯುಕ್ತಗೊಳಿಸಿದ್ದಾರೆ. ನಮ್ಮ ಜಾನಪದವನ್ನು ವಸ್ತುನಿಷ್ಠ ನೆಲೆಯಲ್ಲಿ ವಿವರಿಸುವ ಈ ಬಗೆಯ ಬರವಣಿಗೆ ಇಂದು ತೀರಾ ಅಗತ್ಯವಾಗಿದೆ. ಸೃಜನಶೀಲ ಬರವಣಿಗೆಯ ಭಾಷೆ ಆಡು ಭಾಷೆಯಾಗುವುದಕ್ಕೆ ಯಾರ ಅಭ್ಯಂತರವೂ ಇಲ್ಲ. ವಿಮರ್ಶೆ, ಸಂಶೋಧನೆಯ ಭಾಷೆ ಆಡು ಭಾಷೆ ಆಗಿರಬೇಕೆ ಎಂಬುದನ್ನು ಲೇಖಕಿ ಪುನರಾಲೋಚಿಸುವುದು ಸೂಕ್ತ.

ಕೊನೆಯ ಮೂರು -ಲೇಖನಗಳಲ್ಲಿ 'ಗ್ರಾಮದೇವತೆಗಳು ಒಂದು ಅಧ್ಯಯನ' ಗಮನ ಸೆಳೆಯುತ್ತದೆ. ಇಲ್ಲಿ ನಿರೂಪಿತವಾಗಿರುವ ವಿಷಯಗಳು ಸ್ವಾರಸ್ಯಕರವಾಗಿವೆ. ಗ್ರಾಮದೇವತೆಗಳ ಶಾಸ್ತ್ರೀಯ ವಿಭಜನೆ ಇಲ್ಲದಿರುವುದು ಈ ಲೇಖನದ ಕೊರತೆ. ಪ್ರಗತಿಪರ ಮನೋಧರ್ಮ, ಜಾನಪದಾಸಕ್ತಿಯುಳ್ಳ ಈ ಲೇಖಕಿಯಿಂದ ಇನ್ನೂ ಉತ್ತಮ ಕೃತಿಗಳನ್ನು ನಿರೀಕ್ಷಿಸಬಹುದು.

ಜಾನಪದ ಚಿಂತನ : ಚಕ್ಕರೆ ಶಿವಶಂಕರ್

ಜಾನಪದವನ್ನು ಕುರಿತ ಏಳು ಲೇಖನಗಳ ಈ ಕೃತಿ ತನ್ನ ವಿಷಯ ವೈವಿಧ್ಯತೆಯಿಂದ ನಮ್ಮ ಗಮನ ಸೆಳೆಯುತ್ತದೆ. ಮೊದಲ ಲೇಖನದಲ್ಲಿ ಉತ್ತರ ಕರ್ನಾಟಕದ

ಬಾದಾಮಿ ತಾಲ್ಲೂಕಿನ ಒಂದು ಹಳ್ಳಿಯ ಕೃಷಿಗೆ ಸಂಬಂಧಿಸಿದ ಆಚರಣೆ ಮತ್ತು ನಂಬಿಕೆಗಳನ್ನು ದಾಖಲುಗೊಳಿಸಲಾಗಿದೆ. ಲೇಖನದ ಆರಂಭದಲ್ಲಿ ಕೊಟ್ಟಿರುವ ಬಾದಾಮಿಯ ರಾಜಕೀಯ ಮತ್ತು ಭೌಗೋಳಿಕ ಹಿನ್ನೆಲೆ ಲೇಖಕರ ಶಿಸ್ತಿನ ಅಧ್ಯಯನಕ್ಕೆ ಸಾಕ್ಷಿ. 'ಚಿಕ್ಕೋಳು ಹಿರಿದಿಮ್ಮವ್ವ' ಲೇಖನವನ್ನೂ ಗಮನಿಸಬಹುದು.

'ಚಕ್ಕರೆ ಚೌಡಮ್ಮ' ಲೇಖನದಲ್ಲಿ ವಿಶ್ಲೇಷಣೆಯ ಕೊರತೆ ಕಂಡು ಬಂದರೂ ವಿವರಗಳು ಅಚ್ಚುಕಟ್ಟಾಗಿ ಮೂಡಿಬಂದಿವೆ. ನಮ್ಮ ಸಾಮಾಜಿಕ ಸನ್ನಿವೇಶದಲ್ಲಿ ಅರ್ಥಪೂರ್ಣವೆನಿಸುವ ಮಾಹಿತಿಗಳನ್ನು ಒಳಗೊಂಡಿರುವ ಈ ಲೇಖನ ಜಾನಪದ ಅಭ್ಯಾಸಿಗಳು ಗಮನಿಸತಕ್ಕಂಥದ್ದು. ಕೊನೆಯ ಎರಡು ಲೇಖನಗಳು ರಾಗೌ ಮತ್ತು ದೇಜಗೌ ಅವರ ಜಾನಪದ ಸಾಹಿತ್ಯ ಸೃಷ್ಟಿಯನ್ನು ಪರಿಚಯ ಮಾಡಿಕೊಡುತ್ತವೆ. ತಮ್ಮ ಈ ಮೊದಲ ಕೃತಿಯಲ್ಲಿ 'ಜಾನಪದ ಚಿಂತನೆ'ಯನ್ನು ಆರಂಭಿಸಿರುವ ಚಕ್ಕರೆ ಶಿವಶಂಕರ್ ಅವರಿಂದ 'ಜಾನಪದ ಜಗತ್ತು' ಹೆಚ್ಚಿನದನ್ನು ನಿರೀಕ್ಷಿಸುತ್ತದೆ.

ಬೇಕಾದ ಸಂಗಾತಿ : ಸಂ : ಕಾಳೇಗೌಡ ನಾಗವಾರ

ವೈವಿಧ್ಯಮಯವಾದ ಜನಪದ ಗೀತಸಂಪತ್ತನ್ನು ಒಳಗೊಂಡ ಕೃತಿ ಇದು. ಐದು ಭಾಗಗಳಲ್ಲಿ ಇಲ್ಲಿಯ ಹಾಡುಗಳು -ಪ್ರಕಟವಾಗಿವೆ. ಒಡಹುಟ್ಟು, ತವರು, ಸಂಗಾತಿ, ದೇವರು, ಈ ಸಂಬಂಧದ ಹಾಡುಗಳು ಮೊದಲ ಭಾಗದಲ್ಲಿವೆ. ಮದುವೆಯ ಪದಗಳು, ಗುಣಸಾಗರಿ, ಲಾವಣಿಗಳು, ಕೋಲಾಟದ ಬಿಂಗಿ ಪದಗಳು ಉಳಿದ ಭಾಗಗಳಲ್ಲಿ ಪ್ರಕಟವಾಗಿವೆ.

ಕೃತಿಯ ಆರಂಭದಲ್ಲಿ ಸಂಪಾದಕರು ಕೊಟ್ಟಿರುವ ಪ್ರಸ್ತಾಪನೆ ಉಪಯುಕ್ತವಾಗಿದೆ. ಸಾಮಾಜಿಕ ಸಂದರ್ಭದಲ್ಲಿ ಜನಪದ ಗೀತೆಗಳನ್ನು ವಿವರಿಸುವ ಇವರ ವಿಧಾನ ಅನುಕರಣೀಯ ಎನ್ನಿಸುತ್ತದೆ. ನಮ್ಮ ಸಾಮಾಜಿಕ ರಚನೆಯ -ಪರಿಜ್ಞಾನ ನಮ್ಮ ಸಂಸ್ಕೃತಿಯ ಒಂದು ಭಾಗವಾದ ಜಾನಪದದ ಅಧ್ಯಯನಕ್ಕೆ ಸಹಾಯಕ ಎಂಬುದಕ್ಕೆ ಇವರ ಕೃತಿಯೇ ಪುರಾವೆಯಾಗಿದೆ. ಇಲ್ಲಿಯ ಸಂಗ್ರಹಕ್ಕೆ ಸಂಬಂಧಿಸಿದ ಹಾಡುಗಳ ಉಳಿದ ಪಠ್ಯಗಳನ್ನೂ ಗಮನದಲ್ಲಿಟ್ಟುಕೊಂಡು ವಿವರಿಸುವ ಪ್ರಯತ್ನ ಮಾಡಲಾಗಿದೆ.

ಕೊನೆಯಲ್ಲಿಯ ಸಂಪಾದಕರ ಕ್ಷೇತ್ರ ಕಾರ್ಯದ ನೆನಪುಗಳು ಸ್ವಾರಸ್ಯಪೂರ್ಣ ದಾಖಲೆ. ಜಾನಪದದಲ್ಲಿ ಕ್ಷೇತ್ರ ಕಾರ್ಯ ಮಾಡುವ ಆಗಿನ ತಮ್ಮ ಅನುಭವಗಳನ್ನು ದಾಖಲಿಸುವುದು ಜಾನಪದವನ್ನು ಅರ್ಥಮಾಡಿಕೊಳ್ಳಲು ನೆರವಾಗುತ್ತದೆ. ಪ್ರಸಿದ ಹಾಡುಗಾರ್ತಿ ಲಕ್ಕಮ್ಮಜ್ಜಿಯೊಡನೆ ಸಂಪಾದಕರ ಸಂದರ್ಶನ ವಿಶಿಷ್ಟ ರೀತಿಯದು. ವಕ್ತೃಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಗ್ರಹಿಸಲು ಈ ಬಗೆಯ ಸಂದರ್ಶನ ಅಗತ್ಯವಾಗಿದೆ.

"ನಮ್ಮ ಪರಿಸರದ ಜಾನಪದ ಅಧ್ಯಯನ ಮೊದಲಿನ ಉತ್ಸಾಹದ-'ರಸನಿಷ್ಠೆ' ಹಾಗೂ 'ವೈಭವೀಕರಣದ' ನೆಲೆಯಿಂದ ಮುಂದುವರಿದು ಬೇರೆ ಬೇರೆ ಆಯಾಮ ಗಳನ್ನು ಪಡೆಯುತ್ತಿದೆ ಎಂಬುದು ಗುರುತಿಸತಕ್ಕ ಅಂಶವಾಗಿದೆ......... ಜಾನಪದ ವನ್ನು ಒಂದು ಸಾಂಸ್ಕೃತಿಕ ಅಭಿವ್ಯಕ್ತಿ ಎಂದು ನೋಡುವ ಮತ್ತು ಅದರ ಮೂಲಕ ಒಂದು ಜನಾಂಗದ ನಿಜವಾದ ಚರಿತ್ರೆಯನ್ನು ಗುರುತಿಸುವ ನಿಲುವುಗಳು ಇಂಥ ಕೆಲವು ಪ್ರಯತ್ನಗಳಲ್ಲಿ ಪ್ರಕಟವಾಗುತ್ತಿರುವುದು ಸಮಾಧಾನದ ಸಂಗತಿಯಾಗಿದೆ' ಎಂದು ಈ ಕೃತಿಯನ್ನು ಕುರಿತಂತೆ ಜಿ. ಎಸ್. ಶಿವರುದ್ರಪ್ಪನವರು ಹೇಳಿರುವ ಮಾತುಗಳನ್ನು ಅವಶ್ಯಕವಾಗಿ ಗಮನಿಸಬೇಕಾಗಿದೆ.

ತಂಬೂರಿ ಸಂಪ್ರದಾಯದ ಕಾವ್ಯಗಳು : (ಎ. ಹಿರಿಯಣ್ಣ)

ಜನಪದ ಸಾಹಿತ್ಯ ಸಂಗ್ರಹಣೆಯಲ್ಲಿ ಗಮನಾರ್ಹವಾಗಿ ಕೆಲಸ ಮಾಡುತ್ತಿರುವ ಹಿರಿಯಣ್ಣನವರು ತೂಬೂರಿ ಸಂಪ್ರದಾಯದ ಕಾವ್ಯಗಳನ್ನು ಪ್ರಕಟಿಸಿದ್ದಾರೆ. ಈ ಸಂಗ್ರಹ ಕಾರ್ಯ ಹಾಸನ ಜಿಲ್ಲೆಯಲ್ಲಿ ನಡೆದದ್ದು.

ವಿಭಿನ್ನವಾದ ಘಟನಾವಳಿಗಳು, ಆಶಯಗಳನ್ನುಳ್ಳ ಹತ್ತೊಂಬತ್ತು ಜನಪದ ಕಾವ್ಯಗಳನ್ನು ಸಂಗ್ರಹಿಸಿಕೊಡಲಾಗಿದೆ. ಈ ಕಾವ್ಯಗಳ ಉಳಿದ ಪಠ್ಯಗಳನ್ನು ಗಮನ ದಲ್ಲಿಟ್ಟುಕೊಂಡು ವಿವರವಾಗಿ ಚರ್ಚಿಸಿರುವುದು ಈ ಸಂಗ್ರಹದ ಹೆಗ್ಗಳಿಕೆ. ತಂಬೂರಿ ಪದದ ನಿಷ್ಪತ್ತಿ ತಂಬೂರಿ ವಾದ್ಯದ ಸ್ವರೂಪ, ಈ ಸಂಪ್ರದಾಯದ ಹಿನ್ನೆಲೆ ಮತ್ತು ಲಕ್ಷಣಗಳನ್ನು ಔಚಿತ್ಯ ಪೂರ್ಣವಾಗಿ ವಿವರಿಸಿದ್ದಾರೆ. ಸಂಗ್ರಹ ಕಾರ್ಯದ ಜೊತೆ ಅಚ್ಚು ಕಟ್ಟಾದ ಅಧ್ಯಯನವೂ ಮೇಳವಿಸಿರುವುದು ಇಲ್ಲಿ ಕಂಡುಬರುತ್ತದೆ. ಕೊನೆಯಲ್ಲಿ ಕೊಟ್ಟಿರುವ ಒಂಭತ್ತು ಉಪಕತೆಗಳು ಸ್ವಾರಸ್ಯಕರವಾಗಿದೆ. ನಮ್ಮ ಸಂಗ್ರಾಹಕರು ಮುಖ್ಯ ಕಥೆಯ ಮೇಲೆ ತಮ್ಮ ಗಮನವನ್ನು ಕೇಂದ್ರೀಕರಿಸಿ ಉಪಕತೆಯನ್ನು ಕಡೆಗಾಣಿಸುವ ಸಂಪ್ರದಾಯವಿದೆ. ಉಪಕಥೆಗಳೂ ಒಂದು ಕಥಾ ಪರಂಪರೆಯ ಅವಿಭಾಜ್ಯ ಅಂಗಗಳೇ ಆಗಿವೆ. ಹಿರಿಯಣ್ಣನವರ ಈ ಕಾರ್ಯ ಸ್ತುತ್ಯ. ವಕ್ತೃಗಳ ಜೀವನ ವಿವರಗಳು ವಿಸ್ತಾರವಾಗಿ ಬಂದಿದ್ದರೆ ಇನ್ನೂ ಪ್ರಯೋಜನಕಾರಿಯಾಗುತ್ತಿತ್ತು. ಒಟ್ಟಿನಲ್ಲಿ ಈ ಕೃತಿ ಅಭ್ಯಾಸಿಗಳು ಅಗತ್ಯವಾಗಿ ಗಮನಿಸಲು ಯೋಗ್ಯವಾಗಿದೆ..

ಧರೆಗೆ ದೊಡ್ಡವರ ಕಾವ್ಯ : ತಮಂಪ ಮೂರ್ತಿ

ನೀಲಗಾರರು ಹಾಡುವ ಮಂಟೇಸ್ವಾಮಿ ಕಾವ್ಯ ಈ ಹೆಸರಿನಲ್ಲಿ ಪ್ರಕಟ ವಾಗಿದೆ. ಇದಕ್ಕೆ ಮೊದಲೆ ಜಿ. ಶಂ. ಪ. ಸಂಪಾದಿಸಿದ ಮಂಟೇಸ್ವಾಮಿ ಕಾವ್ಯ ವನ್ನು ತಮಂಪ ಅವರು ಗಮನದಲ್ಲಿಟ್ಟುಕೊಂಡಿದ್ದಾರೆ. ಸ್ವಾರಸ್ಯಕರವಾದ ಪ್ರಸ್ತಾವನೆ ಯಲ್ಲಿ ಈ ಎರಡೂ ಕೃತಿಗಳ ತೌಲನಿಕ ಅಧ್ಯಯನವೇ ನಡದಿದೆ.

ಕನ್ನಡ ಜಾನಪದದ ಧಾರ್ಮಿಕ ನಾಯಕರಲ್ಲಿ ಒಬ್ಬನಾದ ಮಂಟೇಸ್ವಾಮಿಯ ಹುಟ್ಟನ್ನು ಕುರಿತು ವಿವಾದವಿದೆ. ತಮಗೆ ಲಭ್ಯವಾಗಿರುವ ಸಾಕ್ಷಾಧಾರಗಳ ಮೂಲಕ ಸಂಪಾದಕರು ಮಂಟೇಸ್ವಾಮಿಯ ಕಥೆಯನ್ನು ಸಂಘರ್ಷಿಸಿದ -ವರ್ಣ ಹಿನ್ನೆಲೆಯಲ್ಲಿ ಇವರು ಮಾಡಿರುವ ಅಧ್ಯಯನ ಹೊಸಬಗೆಯದಾಗಿದೆ. ಕೊನೆಯಲ್ಲಿ ಅರ್ಥಕೋಶ ಮತ್ತು ಗಾಯಕನನ್ನು ಕುರಿತ ವಿವರ ಪ್ರಯೋಜನಕಾರಿಯಾಗಿದೆ.

ಕಲ್ಗಿ ಮತ್ತು ತುರಾ ಲಾವಣಿಗಳು : ಟಿ.ಎಸ್. ರಾಚಪ್ಪ

ಜನಪದ ಸಾಹಿತ್ಯದಲ್ಲಿ ವಿಶಿಷ್ಟ ಪ್ರಕಾರವೆನಿಸಿದ ಕಲ್ಗಿ-ತುರಾ ಲಾವಣಿಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಈ ಸಂಪ್ರದಾಯದ ನೆಲೆಗಳನ್ನು ಶೋಧಿಸಿ ಅದರವ್ಯಾಪ್ತಿಯನ್ನು ಗುರುತಿಸಿದ್ದಾರೆ. ಬಗೆ ಬಗೆಯ ಸಂಗ್ರಹಗಳನ್ನು ಕೊಟ್ಟಿರುವ ಟಿ.ಎಸ್. ರಾಚಪ್ಪನವರು ಈ ಅಪರೂಪದ ಕೃತಿ ತಂದಿರುವುದು ಸ್ವಾಗತಾರ್ಹವಾಗಿದೆ.

ಕಲ್ಗಿ-ತುರಾ ಹಾಡುವ ಸಂದರ್ಭ ಅದಕ್ಕೆ ಪ್ರೇಕ್ಷಕರ ಪ್ರತಿಕ್ರಿಯೆಯನ್ನು ಅವರು ದಾಖಲು ಮಾಡುತ್ತಾರೆ. ಸಂಕ್ಷಿಪ್ತವಾಗಿ ಅದರ ಇತಿಹಾಸವನ್ನೂ ಗುರುತಿಸುತ್ತಾರೆ. ಈ ಲಾವಣಿ ಪ್ರಕಾರದ ನಿರೂಪಣೆಯ ಚರ್ಚೆ ಇದೆ. ಜಾನಪದ ಆಸಕ್ತರು ನೋಡಬೇಕಾದ ಕೃತಿ ಇದು.

ಸುಬ್ಬಕ್ಕ ಹಾಡಿದ ನಂಜಂಡೇಶ್ವರ ಕಾವ್ಯ : ಕ್ಯಾತನಹಳ್ಳಿ ರಾಮಣ್ಣ

ನಂಜುಂಡ ಚಾಮುಂಡಿಯುವರ ಪ್ರಣಯಕಥೆಗಳನ್ನುಳ್ಳ ಹಲವಾರು ಪಾಠಗಳು ದೊರೆಯುತ್ತವೆ. ಆದರೆ ನಂಜುಂಡನ 'ಇತಿವೃತ್ತ'ವನ್ನು ಹೇಳುವ ಪಾಠ ಇಂದಿನವರೆಗೂ ದೊರೆತಿರಲಿಲ್ಲ. ಆ ಕೊರತೆಯನ್ನು ರಾಮಣ್ಣನವರು ಸಂಪಾದಿಸಿರುವ ಈ ಕೃತಿ ತುಂಬುತ್ತದೆ. ಈ ಕಾವ್ಯದಲ್ಲಿ ಬರುವ ವಿವರಗಳು ನಂಜುಂಡೇಶ್ವರನನ್ನು ಹೊಸ ದೃಷ್ಟಿಯಿಂದ ನೋಡಿ, ಅವನ ಜೀವನ ಕಥೆಯನ್ನು ನಿರೂಪಿಸಲು ನೆರವಾಗುತ್ತವೆ.

ಈ ಕೃತಿಯಲ್ಲಿರುವ ಪಿ. ಕೆ. ರಾಜಶೇಖರ ಅವರ ಮುನ್ನುಡಿ ವಿದ್ವತ್ಪೂರ್ಣವಾಗಿದೆ. 'ಮಹದೇಶ್ವರ – ಪಾಂಡಿತ್ಯ' ಪಡೆದಿರುವ ಅವರು ನಂಜುಂಡನ ಬಗ್ಗೆಯೂ ಅಷ್ಟೇ ಖಚಿತವಾಗಿ ಬರೆದಿದ್ದಾರೆ. ಜನಪದ ದೇವತೆಗಳ ಅಧ್ಯಯನಕ್ಕೆ ಅಗತ್ಯವಾಗಿರುವ ಈ ಮುನ್ನುಡಿಯು ಗಮನಾರ್ಹವಾದುದು. ಈ ಕೃತಿಯನ್ನು ಸಿಂಪಿಲಿಂಗಣ್ಣನವರಿಗೆ ಅರ್ಪಿಸಿರುವುದು ಔಚಿತ್ಯ ಪೂರ್ಣವಾಗಿದೆ.

ಗಂಧದ ಮರವೇ ನೆಳಲಾಗು : ವಿ. ಗ. ನಾಯಕ

ನಾಮಧಾರಿ ಜನಾಂಗದಲ್ಲಿ ಪ್ರಚಲಿತವಾಗಿರುವ ಕೆಲವು ಆಚರಣೆಗಳು ಮತ್ತು ಅವುಗಳನ್ನು ಕುರಿತ ಹಾಡುಗಳನ್ನು ಒಳಗೊಂಡ ಕೃತಿ. ಆಚರಣೆ ಹಾಡಿನ ನೆರವಿ

ನೊಂದಿಗೆ ವಿವರಿಸಲ್ಪಟ್ಟಿದೆ. ವಿವರಣೆ ಸ್ವಾರಸ್ಯಕರವಾಗಿದ್ದು ಇವರ ಸಂಗ್ರಹ ನೋಡುವಂತಿದೆ.

ನಿರ್ದಿಷ್ಟ ಜನಾಂಗವೊಂದರಲ್ಲಿಯ ಜಾನಪದವನ್ನು ಕುರಿತು ನಿರ್ದಿಷ್ಟ ಪ್ರದೇಶವೊಂದರಲ್ಲಿ ಸಂಪಾದಕರು ಸಂಗ್ರಹ ಕಾರ್ಯದಲ್ಲಿ ತೊಡಗಿದ್ದಾರೆ. ಇದೇ ಕೃತಿಯ ವಿಶಿಷ್ಟತೆ.

ಸೋಮಸೇಖರ ಚಿತ್ರಸೇಖರ ಯಕ್ಷಗಾನ : ಎಸ್. ಉಮಾಪತಿ

ಕಸ್ತೂರಿ ಸಿದ್ಧನೆಂಬ ಕವಿಯಿಂದ ರಚಿತವಾಗಿರುವ ಯಕ್ಷಗಾನ ಕೃತಿ. ಇದರ ಕಥೆ ಕಳ್ಳ ರಾಜಕುಮಾರರಿಗೆ ಸಂಬಂದಿಸಿದ್ದು. ಆಶಯವನ್ನು ಜಾನಪದದಿಂದ ಆಯ್ದು ಕೊಳ್ಳಲಾಗಿದೆ. ಪ್ರಸ್ತಾವನೆಯಲ್ಲಿ ಕವಿಯ ಕಾಲದೇಶವನ್ನು ಚರ್ಚಿಸಲಾಗಿದೆ. ಕಥಾ ಗರ್ಭದ ವಿವರಗಳಿವೆ.

ಸಂಪಾದಕರು ಮಾಡಿರುವ ಯಕ್ಷಗಾನ – ಬಯಲಾಟವನ್ನು ಕುರಿತ–ಅಧ್ಯಯನ, ಯಕ್ಷಗಾನ ಸಂಗೀತದ ಬಗ್ಗೆ ಅವರ ವಿಚಾರ ಗಮನೀಯವಾದುದು. ಕೊನೆಯಲ್ಲಿ ಸೂಚಿಸಿರುವ ಅರ್ಥಕೋಶ ಪ್ರಯೋಜನಕಾರಿಯಾಗಿದ್ದು ಆಸಕ್ತರು ನೋಡಬಹುದಾದ ಕೃತಿ.

ಹಾಸನ ಜಿಲ್ಲೆಯ ಜನಪದ ಕಥೆಗಳು : ಎಚ್. ಎಸ್. ರಾಮಚಂದ್ರ ಗೌಡ

ಹಾಸನ ಜಿಲ್ಲೆಯಲ್ಲಿ ಸಂಗ್ರಹಿಸಿದ 92 ಕಥೆಗಳ ಬೃಹತ್ ಸಂಕಲನ. ಆದ್ದರಿಂದ ಈ ಕೃತಿಗೆ ಪ್ರಾದೇಶಿಕ ಮಹತ್ವವಿದೆ. ವೈವಿಧ್ಯಮಯವಾದ ಆಶಯಗಳು, ವರ್ಗಗಳು ಇಲ್ಲಿನ ಕಥೆಗಳಲ್ಲಿ ಕಾಣಿಸಿಕೊಂಡಿವೆ. ರಮ್ಯ ಕಥೆಗಳು, ಅತಿಮಾನುಷ ಕಥೆಗಳು. ಹಾಸ್ಯ ಕಥೆಗಳು, ಪ್ರಾಣಿ ಕಥೆಗಳು, ಬುದ್ಧಿವಂತಿಕೆಯ ಕಥೆಗಳು, ನೀತಿ ಕಥೆಗಳು, ಒಗಟು ಮಾಂತ್ರಿಕ ಕಥೆಗಳು, ಎಂಬ ಒಂಭತ್ತು ವಿಭಾಗಗಳಲ್ಲಿ ಕಥೆಗಳನ್ನು ಅಚ್ಚುಮಾಡಲಾಗಿದೆ. ಅಂತ್ಯದಲ್ಲಿ ವಕ್ತೃಗಳ ಪರಿಚಯವಿದ್ದು ಅರ್ಥಕೋಶವನ್ನು ಕೊಡಲಾಗಿದೆ. ಹೀಗೆ ಭಿನ್ನ ಆಶಯಗಳು, ವರ್ಗಗಳನ್ನುಳ್ಳ ಕಥೆಗಳ ರಾಶಿಯನ್ನು ಕೊಟ್ಟ ಸಂಪಾದಕರು ಅಭಿನಂದನಾರ್ಹರು. ಇಲ್ಲಿಯ ಕಥೆಗಳು ಹಾಸನ ಜಿಲ್ಲೆಯ ಸಂಸ್ಕೃತಿ, ಭಾಷೆ, ಜನ ಜೀವನದ ಇನ್ನಿತರ ಅಂಶಗಳನ್ನು ಅಧ್ಯಯನ ಮಾಡಲು ಸಹಾಯಕವಾಗಿವೆ. ಕೆಲವು ಕಥೆಗಳು ಅಪರೂಪದವುಗಳಾಗಿದ್ದು ಜಾನಪದ ವಿದ್ವಾಂಸರು ಇವುಗಳನ್ನು ಆಳವಾದ ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ.

ಸಂಪಾದಕರು ಬರೆದಿರುವ ಪ್ರಸ್ತಾವನೆ ವ್ಯಾಪಕವಾದ ಅಧ್ಯಯನ ಮತ್ತು ಚಿಂತನೆಯ ಫಲದಿಂದ ಬಂದದ್ದಾಗಿದೆ. ಜನಪದ ಕಥೆಗಳ ಅಧ್ಯಯನದ ಇತಿಹಾಸವನ್ನು ಅವರು ಗುರುತಿಸಿ ಪ್ರಸ್ತುತ ಸಂಕಲನದ ಕಥೆಗಳನ್ನು ವಿವಿಧ ದೃಷ್ಟಿಗಳಿಂದ ಅಭ್ಯಾಸ ಮಾಡಿದ್ದಾರೆ.

ಇಲ್ಲಿಯ ಕಥೆಗಳ ಭಾಷೆ, ಪಾತ್ರಗಳು, ಅವು ಹುಟ್ಟಿ ಬೆಳೆಯುವ ಸಾಂಸ್ಕೃತಿಕ ಸಂದರ್ಭ ಇತ್ಯಾದಿಗಳನ್ನು ಗಂಭೀರವಾಗಿ ಚರ್ಚಿಸಲಾಗಿದೆ. ಇದೇ ರೀತಿಯ ಆಶಯಗಳನ್ನುಳ್ಳ ಇನ್ನಿತರ ಕಥೆಗಳ ಸಂಕಲನಗಳನ್ನು ಗಮನದಲ್ಲಿ ಇಟ್ಟುಕೊಂಡಿದ್ದಾರೆ. ನಿರ್ದಿಷ್ಟ ಸಮಾಜ ವ್ಯವಸ್ಥೆಯೊಂದರಲ್ಲಿ ಉಂಟಾಗುವ ವೈರುಧ್ಯ ವರ್ಣ ವರ್ಗಗಳ ಸಂಘರ್ಷದ ಸೂಚನೆಗಳು ಈ ಸಂಕಲನದ ಕಥೆಗಳಲ್ಲಿ ಕಂಡುಬರುತ್ತವೆ. ಈ ಅಂಶ ಗಳನ್ನು ಸಂಪಾದಕರು ಗುರುತಿಸಿರುವುದು ಮೆಚ್ಚಬೇಕಾದ ಅಂಶ. ಕಥೆಗಳನ್ನು ವಿಶ್ಲೇಷಿಸಿರುವ ಇವರ ವಿಧಾನದಲ್ಲಿ ಕಥೆಯ ನಾಟಕೀಯ ಅಂಶವನ್ನೇ ಪ್ರಧಾನವಾಗಿ ಹಿಡಿದು ಮುಂದೆ ಸಾಗುವುದು ಇವರ ವಿಶಿಷ್ಟತೆ. ಇವರು ಸಂಗ್ರಹಿಸಿದ ಅನೇಕ ಕಥೆಗಳು ನಾಟಕಗಳಾಗುವ ಸಾಧ್ಯತೆಯನ್ನು ಸಂಪಾದಕರು ಅರಿತೋ ಅರಿಯದೆಯೋ ತೋರಿಸಿಕೊಟ್ಟಿದ್ದಾರೆ. ಸಂಗ್ರಹಿಸುವ, ವಿಶ್ಲೇಷಿಸುವ ದೃಷ್ಟಿಯಿಂದ ಈ ಕಥಾ ಸಂಗ್ರಹ ಮಹತ್ವದ್ದು. ಕಥೆಗಳನ್ನು ತಾವು ವಿಭಜಿಸುವ ರೀತಿಗೆ ಕಾರಣಗಳನ್ನಾಗಲೀ ಸಮರ್ಥನೆಯನ್ನಾಗಲೀ ಕೊಡದೇ ಇರುವುದು ಕೃತಿಯ ಒಂದು ಕೊರತೆ. ಯಾಕೆಂದರೆ ಕೆಲವೇ ವಿಭಾಗಗಳಲ್ಲಿ ಈ ಕಥೆಗಳನ್ನು ಅಳವಡಿಸಲು ಸಾಧ್ಯವಿತ್ತು.

ಈ ಕಥೆಗಳ ಬಗ್ಗೆ, ತಮ್ಮ ಅಧ್ಯಯನ ವಿಧಾನದ ಬಗ್ಗೆ ಸಂಪಾದಕರು ಈ ಕಥೆ ಗಳನ್ನು "ಒಂದು ಸಮಾಜದ ಸಮಾಜಿಕ ಪುನರ್‌ರಚನೆಯ ಅಧ್ಯಯನಕ್ಕೆ ಆಕರಗಳಾಗಿ ಸ್ವೀಕರಿಸಿದುವು. ಹಗುರವಾಗಿ ಮಾತನಾಡುವುದು ಈ ಅಂಶವನ್ನು ಗಮನದಲ್ಲಿಟ್ಟು ಕೊಂಡು ಈ ಕಥೆಗಳನ್ನು ಸ್ವೀಕರಿಸಬೇಕು. ಮುಕ್ತ ಸಾಮಾಜಿಕ ವಿಮರ್ಶೆ ಮತ್ತು ಸಮಾಜದ ದೃಷ್ಟಿಗೆ ನೆರವಾಗಬೇಕು" ಎಂದಿದ್ದಾರೆ. ಈ ಮಾತುಗಳಿಗೆ ನಾವೂ ಒಪ್ಪಿಗೆ ಸೂಚಿಸಬಹುದು.

ಕಬ್ಬಾಳು ಕುಳಿಯಲ್ಲಿ ಹುಲಿ : ಕ್ಯಾತನ ಹಳ್ಳಿ ರಾಮಣ್ಣ

ಇದು ವಿಶಿಷ್ಟವಾದ ಆಶಯಗಳನ್ನುಳ್ಳ 43 ಕಥೆಗಳ ಸಂಕಲನ. ಕನಕಪುರ ತಾಲ್ಲೂಕಿನ ಕಬ್ಬಾಳು ಬಳಿಯಲ್ಲಿ ಈ ಕತೆಗಳನ್ನು ಸಂಗ್ರಹಿಸಲಾಗಿದೆ. ಕಬ್ಬಾಳು ಈ ತಾಲ್ಲೂಕಿನ ಅತ್ಯಂತ ಪ್ರಸಿದ್ಧ ಕ್ಷೇತ್ರ. ಇಲ್ಲಿನ ಮುಖ್ಯದೇವತೆಯಾದ ಕಬ್ಬಾಳಮ್ಮನನ್ನು ಕುರಿತ ಸಂಗತಿಗಳನ್ನು ಸಂಪಾದಕರು ಕಲೆ ಹಾಕಿದ್ದಾರೆ. ಕಬ್ಬಾಳು ಬೆಟ್ಟಕ್ಕೆ ಸಂಬಂಧಿಸಿದ ಐತಿಹಾಸಿಕ -ಅಂಶಗಳೂ ಇಲ್ಲಿವೆ. ಕಥೆಗಳ ಸಂಕ್ಷಿಪ್ತ ಪರಿಚಯವನ್ನು ಕೊಟ್ಟು ಕೊನೆ ಯಲ್ಲಿ ಕಥೆಗಾರರ ವಿವರ, ಅರ್ಥಕೋಶವನ್ನು ಒದಗಿಸಿದ್ದಾರೆ. ಹೀಗೆ ಇವರ ಪ್ರಸ್ತಾವನೆ ಉಪಯುಕ್ತವಾಗಿದೆ.

ಕಥೆಗಳನ್ನು ವರ್ಗೀಕರಿಸದಿರುವುದು ಒಂದು ದೋಷ. ಹಬ್ಬದ ಆಚರಣೆಯ ವಿವರಗಳು ಇಲ್ಲಿ ನಮೂದಿತವಾಗಿರುವುದು ಸ್ವಾಗತಾರ್ಹ. ಆದರೆ ಅಪಾರ ಕ್ಷೇತ್ರ ಕಾರ್ಯದ ಅನುಭವ, ಸಾಮರ್ಥ್ಯವುಳ್ಳ ಈ ಸಂಪಾದಕರಿಂದ ಇನ್ನೂ ವಿಸ್ತಾರವಾದ ವಿವರಣೆ, ವಿಶ್ಲೇಷಣೆಯನ್ನು ಅಭ್ಯಾಸಿಗಳು ಬಯಸುತ್ತಾರೆ.

ಜನಪದ ವೈದ್ಯ : ಶಾಂತಕುಮಾರಿ ಪಾಟೀಲ

ಪುಟ್ಟದಾದರೂ ಅಭ್ಯಾಸಕ್ಕೆ ಯೋಗ್ಯವಾದ ಕೃತಿ ಇದು. ಜನಪದ ವೈದ್ಯವನ್ನು ಕುರಿತಂತೆ ಸಂಗ್ರಹಗಳು ಕಡಿಮೆ ಇರುವ ಕಾಲದಲ್ಲಿ ಇದರ ಪ್ರಕಟಣೆ ಸ್ವಾಗತಾರ್ಹವಾದದ್ದು. ನೂರ ಹನ್ನೊಂದು ರೋಗಗಳನ್ನು ಪಟ್ಟಿಮಾಡಿ ಅವುಗಳ ನಿವಾರಣೆಗೆ ಬಗೆಬಗೆಯ ಜನಪದ ಔಷಧಿಗಳನ್ನು ಸೂಚಿಸಲಾಗಿದೆ. ನೂರ ಹನ್ನೊಂದನೆಯ ರೋಗ ಸಂಪಾದಕಿಯರ ಪ್ರಕಾರ "ಗಂಡ ಹೆಂಡಿರ ಜಗಳ" ಇದನ್ನು ಬಗೆಹರಿಸಲು ನಮ್ಮ ಜನಪದರು ವೈದ್ಯವನ್ನು ಸಿದ್ಧಪಡಿಸಿರುವುದು ಆಶ್ಚರ್ಯದ ವಿಚಾರ. ಇದಕ್ಕೆ ಸೂಚಿಸಿರುವ ವೈದ್ಯದ ಸ್ವರೂಪವೂ ವಿಚಿತ್ರವಾಗಿದೆ. ಈ ರೋಗವನ್ನು ಇಲ್ಲಿ ಸೇರಿಸಬೇಕಿತ್ತೇ ಎನ್ನುವುದೂ ಪ್ರಶ್ನಾರ್ಹ.

ಪ್ರಸ್ತಾವನೆಯಲ್ಲಿ ಜನಪದ ವೈದ್ಯದ ಬಗ್ಗೆ ಸಂಪಾದಕರು ಸವಿಸ್ತಾರವಾಗಿ ಚರ್ಚಿಸಿದ್ದಾರೆ. ಈ ವಿಷಯವನ್ನು ಕುರಿತು ಇವರು ಮಂಡಿಸಿರುವ ವಿಚಾರಗಳು ಹೊಸ ರೀತಿಯವಾಗಿವೆ. ಜನಪದ ವೈದ್ಯ ಮೂಢ ನಂಬಿಕೆಗೆ ತಿರುಗಿ ಆಗುವ ಅನಾಹುತದ ಅರಿವೂ ಇವರಿಗಿರುವುದು ಆರೋಗ್ಯಕರ ವಿಚಾರ.

## ಸಂಕೀರ್ಣ

**ಜಿ. ಎಸ್. ಶಿವರುದ್ರಪ್ಪ**

ಈ ವರ್ಷದ 'ಸಂಕೀರ್ಣ' ವಿಭಾಗದ ಪರಿಶೀಲನೆಗೆ ಒಳಪಡುವ ಕೃತಿಗಳ ಸಂಖ್ಯೆ ಇಪ್ಪತ್ತರಷ್ಟಿವೆ. ಇವುಗಳಲ್ಲಿ ಮಾಸ್ತಿಯವರ 'ಪ್ರಸಂಗ', ದಿವಂಗತ ಬಿ.ಜಿ.ಎಲ್. ಸ್ವಾಮಿಯವರ 'ಸಾಕ್ಷಾತ್ಕಾರದ ದಾರಿಯಲ್ಲಿ' ಡಾ. ಕುಪ್ಪುಸ್ವಾಮಿಯವರ 'ಶ್ರದ್ಧೆ–ನಂಬಿಕೆ ಮತ್ತು ವೈಚಾರಿಕತೆ' ಇಂಥ ಕೆಲವು ವಿಶಿಷ್ಟವಾದ ಕೃತಿಗಳನ್ನು ಬಿಟ್ಟರೆ, ಉಳಿದವುಗಳು ಹೇಳಿಕೊಳ್ಳುವಂಥ ವಿಶೇಷತೆಯೇನನ್ನೂ ಪ್ರಕಟಿಸುವುದಿಲ್ಲ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ಪ್ರಸಂಗ-5' ಇದೇ ಹೆಸರಿನಿಂದ ಪ್ರಕಟವಾಗಿರುವ ಸಂಗ್ರಹ ಮಾಲೆಯಲ್ಲಿ ಐದನೆಯದು. ಇದರಲ್ಲಿ ಒಟ್ಟು ಹನ್ನೊಂದು ಲೇಖನಗಳಿವೆ. ಇಲ್ಲಿ ಸೇರ್ಪಡೆಯಾದ ಲೇಖನಗಳು ಎಂದು ಯಾವಾಗ ಬರೆದವುಗಳು ಎಂಬ ವಿವರಗಳನ್ನು ಮಾಸ್ತಿಯವರು ಈ ಕೃತಿಯ ಮುನ್ನುಡಿಯಲ್ಲಿ ಮತ್ತು ಆಯಾ ಲೇಖನಗಳ ಒಡಲಲ್ಲಿ ಸೂಚಿಸಿದ್ದಾರೆ. ಬೇರೆ ಬೇರೆಯ ಕಾಲಗಳಲ್ಲಿ ಬೇರೆ ಬೇರೆಯ 'ವಸ್ತು'ಗಳನ್ನು ಕುರಿತು ಬರೆದ ಈ ಲೇಖನಗಳು ಮಾಸ್ತಿಯವರ ವಿಚಾರ ಮುಖವೊಂದನ್ನು ಪರಿಚಯ ಮಾಡಿಕೊಡುತ್ತವೆ. ಇವುಗಳಲ್ಲಿ ಐದು, ವ್ಯಕ್ತಿಗಳನ್ನು ಕುರಿತವು. ಬೆಳ್ಳಾವೆ ವೆಂಕಟನಾರಣಪ್ಪನವರು, ತೀ. ನಂ. ಶ್ರೀ., ಸರ್. ಎಂ. ವಿಶ್ವೇಶ್ವರಯ್ಯನವರು, ಶ್ರೀ ಜಯಚಾಮರಾಜ ಒಡೆಯರು, ಮತ್ತು ಶ್ರೀ ರಾಮಾ ನಂಜಾಚಾರ್ಯರು ಇವರನ್ನು ಕುರಿತು ವ್ಯಕ್ತಿ ಚಿತ್ರಗಳು ತುಂಬ ಪ್ರೀತಿ-ವಿಶ್ವಾಸ-ಗೌರವಗಳ ಬಣ್ಣದಿಂದ ಬರೆದವುಗಳು, ಇಂಗ್ಲಿಷ್ ಗೀತೆಗಳು, ಬಿಜ್ಜಳರಾಯ ಚರಿತೆಯ ಉಪೋದ್ಘಾತ – ಈ ಎರಡು ವಿಮರ್ಶಾತ್ಮಕ ಲೇಖನಗಳು ; ಲಾಓಜು, ಸಾಲೊಮನ್ ಪ್ರಭುವಿನಗೀತ ಈ ಎರಡೂ ಅನುಭಾವಿಕ ಅಭಿವ್ಯಕ್ತಿಗಳನ್ನು ಕುರಿತ ಪರಿಚಯಾತ್ಮಕ ಹಾಗೂ ತೌಲನಿಕ ವಿವೇಚನೆಗಳಾಗಿವೆ. ಜನಾಂಗದ ವಿದ್ಯಾಭ್ಯಾಸ, ವರ್ಣವಿದ್ವೇಷ ಈ ಎರಡೂ ಮಾಸ್ತಿಯವರ ಅಧ್ಯಯನ ಮತ್ತು ಚಿಂತನೆಗಳನ್ನು ಪ್ರತಿನಿಧಿಸುವ ಅತ್ಯಂತ ಮೌಲಿಕವಾದ ಬರೆಹಗಳು. ಈ ಎಲ್ಲವೂ 'ಪ್ರಸಂಗ–5' ಎಂಬ 160 ಪುಟಗಳ ಈ ಸಂಪುಟದಲ್ಲಿ ಸಮಾವೇಶಗೊಂಡಿವೆ.

ಇಲ್ಲಿರುವ ಲೇಖನಗಳಲ್ಲಿ ಒಂದೊಂದನ್ನೂ ಕುರಿತು ವಿವರವಾಗಿ ಹೇಳುವ ಅಗತ್ಯವಿಲ್ಲ. ಮಾಸ್ತಿಯವರಂಥ ಮಹತ್ವದ ಲೇಖಕರ ಉದಾರವಾದೀ ಮಾನವತಾ ದೃಷ್ಟಿ, ಬದುಕಿನಲ್ಲಿ ಸಾಧ್ಯವಾದಷ್ಟು ಒಳಿತನ್ನೆ ಕಾಣಬೇಕೆಂಬ ನಿಲುವು, ಅಕ್ಷುಬ್ಧ

ವಾಗಿ ಸಂಗತಿಗಳನ್ನು ಚರ್ಚಿಸುವ ಸಮುತೂಕ, ಗೌರವವನ್ನು ಗಳಿಸಿ ಕೊಳ್ಳುವ ಪರಿಣತಿ ಇತ್ಯಾದಿಗಳಿಗೆ ಈ ಸಂಗ್ರಹ ಒಂದು ಸಾಕ್ಷಿಯಾಗಿದೆ.

ಈ ವಿಭಾಗದ ಪರಿಶೀಲನೆಗೆ ಬರುವ ಮೂರು ಕೃತಿಗಳನ್ನು ಶ್ರೀ. ಸಿ.ಪಿ.ಕೆ. ಯವರು ಬರೆದಿದ್ದಾರೆ. ಸಮ್ಮೇಳ, ಮೆಲುಕು, ಮತ್ತು ಠಾಕೂರ್ ವಚನಾಂಜಲಿ.

'ಸಮ್ಮೇಳ' ಸಿ.ಪಿ.ಕೆ.ಯವರು ಆಗೀಗ ಬರೆದ ಹದಿಮೂರು ಬರೆಹಗಳ ಸಂಗ್ರಹ ; ಮೆಲುಕು ಇಪ್ಪತ್ತೈದು ಕಿರುಚಿಂತನೆಗಳ ಸಂಕಲನ ; ಠಾಕೂರ್ ವಚನಾಂಜಲಿ, ರವೀಂದ್ರ ಗೀತಾಂಜಲಿ, ಫಲ ಸಂಚಯ ಮತ್ತು ತೋಟಗಾರ ಈ ಮೂರರಿಂದ ಆಯ್ದು ಕನ್ನಡಕ್ಕೆ ಅನುವಾದಿಸಿದ ಎಂಬತ್ತೇಳು ವಚನಗಳ ಸಂಗ್ರಹ.

ಸಮ್ಮೇಳ ಮತ್ತು ಮೆಲುಕು ಈ ಎರಡರಲ್ಲಿರುವ ವ್ಯತ್ಯಾಸವೆಂದರೆ, 'ಮೆಲುಕು' ದಲ್ಲಿರುವ ಚಿಂತನಗಳು ತೀರಾ ಪರಿಮಿತ ಪ್ರಮಾಣದವುಗಳು ; ಆಕಾಶವಾಣಿಯ ಮೂರು ನಿಮಿಷದ ಕಾರ್ಯಕ್ರಮುಗಳಿಗೆ ಬರೆಯುುವ ಸ್ವರೂಪದವು. ಸಮ್ಮೇಳದಲ್ಲಿರುವ ಲೇಖನಗಳು ಇದಕ್ಕಿಂತ ಕೊಂಚ ವಿಸ್ತೃತವಾದವುಗಳು. ಇವುಗಳಲ್ಲಿ ಮೂರು, ಅವರು ಸಭೆ ಸಮ್ಮೇಳನಗಳಲ್ಲಿ ಮಾಡಿದ ಭಾಷಣಗಳು ; ಮೂರು, ಅವರು ಭಾಷಾಂತರಿಸಿದ ಹಾಗೂ ಸಂಪಾದಿಸಿದ ಕೃತಿಗಳಿಗೆ ಬರೆದ ಪ್ರಸ್ತಾವನೆಗಳು ; ಮೂರು, ಇಂಗ್ಲಿಷಿನಿಂದ ಕನ್ನಡಕ್ಕೆ ಮಾಡಿದ ಅನುವಾದಗಳು ; ಇನ್ನುಳಿದವು ಸಾಂದರ್ಭಿಕ ರಚನೆಗಳು.

ಈ ಬರೆಹಗಳ ಹದವಾದ ಗದ್ಯ ಶೈಲಿಯನ್ನೂ, ಅಚ್ಚುಕಟ್ಟಾದ ನಿರೂಪಣೆ ಗಳನ್ನೂ ನಾವು ಮೆಚ್ಚಿಕೊಳ್ಳಬಹುದಾದರೂ, ಎಷ್ಟೋ ಬರೆಹಗ್ಳು ಸರಳವಾದ ಸಾಮಯಿಕವಾದ ಉಪನ್ಯಾಸಗಳಂತೆಯೋ, ಪ್ರೌಢವಾದ ವಿದ್ಯಾರ್ಥಿಯೊಬ್ಬನು ಬರೆದ ಪರೀಕ್ಷೆಯ ಪ್ರಬಂಧಗಳಂತೆಯೋ, ತರಗತಿಯ ಟಿಪ್ಪಣಿಗಳಂತೆಯೋ ತೋರು ತ್ತವೆ. ಬರೆಹದಲ್ಲಿನ ಎಷ್ಟೋ ವಿಚಾರಗಳು ಆಗಲೇ ಯಾರೋ ಹೇಳಿದ್ದು, ಬರೆದದ್ದು, ಎಲ್ಲೋ ಓದಿದ್ದು ಎಂದು ನನ್ನಂಥವರಿಗೆ ಅನ್ನಿಸದಿರುವುದಿಲ್ಲ. ಬರೆಹಗಾರ ತನ್ನದು ಯಾವುದು ಬೇರೆಯವರದು ಯಾವುದು ಎಂಬ ಬಗ್ಗೆ ಯಾವ ವ್ಯತ್ಯಾಸವನ್ನೂ ಮಾಡದೆ, ಒಟ್ಟಿನಲ್ಲಿ ಓದುಗರಿಗೆ ಒಂದಷ್ಟು ವಿಚಾರಗಳನ್ನು ಒಟ್ಟು ಮಾಡಿ ಕೊಟ್ಟರೆ ತಾನು ಕೃತ ಕೃತ್ಯನಾದ ಹಾಗೆಯೇ ಎಂಬ ಧೋರಣೆಯಿಂದ ಹೊರಟರೆ ಆಗುವುದು ಹೀಗೆ. ಈ ಬರೆಹಗಳೆಲ್ಲ "ಆಯಾ ಸಮಯದಲ್ಲಿ ಅನಿವಾರ್ಯ ಒತ್ತಡದಿಂದಲೆ ಬರೆದವು; ಕೇವಲ ಹವ್ಯಾಸದಿಂದ ಹೊಸೆದವಲ್ಲ. ಹೇಳಬೇಕಾದ್ದು ಮತ್ತೇನಿದೆ–ನನ್ನ ವಾಙ್ಮ ಯದ ಮೇಲೆ ಸಂಖ್ಯಾರೋಪ ಮಾಡುವವರಿಗೆ ಇಲ್ಲೊಂದು ಹೊಸ ಅಸ್ತ್ರ ಸಿಕ್ಕುತ್ತಿದೆ ಎಂಬುದರ ವಿನಾ ?' (ಮೊದಲ್ನುಡಿ : ಸಮ್ಮೇಳ) "ಸ್ವೋಪಜ್ಞತೆ ಯಾವಾಗಲೂ ಅನೇಕ ಪ್ರಭಾವ, ಪ್ರೇರಣೆಗಳ ಹಿನ್ನೆಲೆಯಲ್ಲಿ ಅಥವಾ ಜೊತೆಯಲ್ಲಿ ಕೆಲಸ ಮಾಡು ವಂಥದು. ಆಲೋಚನೆಯಲ್ಲಿ ಮತ್ತು ಅಭಿವ್ಯಕ್ತಿಯಲ್ಲಿ ನನ್ನತನ ಅಷ್ಟಿಷ್ಟು ಕಂಡು

ಬಂದರೆ ಸಾಕು' (ಮುನ್ನುಡಿ : ಮೆಲುಕು) – ಎಂಬ ಲೇಖಕರ ಈ ನಿಲುವುಗಳು, ತಾವು ಬರೆದದ್ದನ್ನು ತಾವೇ ಸಮರ್ಥಿಸಿಕೊಳ್ಳುವ ಉದ್ದೇಶದ್ದಾಗಿವೆಯೇ ವಿನಾ, ಯಾವ ನಿಜವಾದ ವಿಮರ್ಶೆಗೂ ತೆರೆದ ಮನಸ್ಸಿನ ಮಾತುಗಳಂತೆ ತೋರುವುದಿಲ್ಲ. ಅವರ ಇನ್ನೊಂದು ಕೃತಿ 'ಠಾಕೂರ್ ವಚನಾಂಜಲಿ' ರವೀಂದ್ರರ ಕೆಲವು ವಚನಗಳ ಅನುವಾದ. ಅನುವಾದವೇನೋ ಕೆಲವೆಡೆ ನಿರ್ದುಷ್ಟವಾದುದೆಂಬಂತೆ ತೋರಿದರೂ, ರವೀಂದ್ರರ ಇಂಗ್ಲಿಷ್ ಮೂಲದ ಕಾವ್ಯಸತ್ವ ಸಿ.ಪಿ.ಕೆ.ಯವರ ಅನುವಾದಗಳಿಂದಾಚೆ ನುಣುಚಿ ಹೋದಂತೆ ಭಾಸವಾಗುತ್ತದೆ. ನಿದರ್ಶನಕ್ಕೆ ಗೀತಾಂಜಲಿಯ ಹತ್ತನೆಯ ವಚನವನ್ನೆ ನೋಡಬಹುದು. ಇಂಗ್ಲಿಷಿನಲ್ಲಿ ಅದು ಹೀಗಿದೆ :

Here is thy footstool and there rest rhy feet
Where live the Poorest and lowliest and lost

ಈ ವಚನದ ಈ ಕೆಲವು ಪಂಕ್ತಿಗಳ ಅನುವಾದ ಸಿ.ಪಿ.ಕೆ.ಯವರಲ್ಲಿ ಹೀಗಿದೆ :

ಇಲ್ಲಿದೆ ನಿನ್ನ ಕಾಲ್ಮಣೆ ; ಅಲ್ಲಿ ಅತ್ಯಂತ ದರಿದ್ರರೂ ಕನಿಷ್ಠರೂ
ನಷ್ಟರೂ ವಾಸಿಸುವೆಡೆ – ನಿನ್ನ ಪಾದಗಳು ವಿರಮಿಸಿವೆ. (ಪು. 67)

ಮೂಲದ ಕಾವ್ಯಮಯತೆ, ಮತ್ತು ಅದರ ಪದಬಂಧಗಳ ಸೊಗಸು, ಸಿ.ಪಿ.ಕೆ.ಯವರ ಅನುವಾದದಲ್ಲಿ ನಾಪತ್ತೆಯಾಗಿವೆ.

ಈ ಮೂರೂ ಕೃತಿಗಳನ್ನು ನೋಡಿದರೆ ಸಿ.ಪಿ.ಕೆ.ಯವರು ಏನನ್ನಾದರೂ ಬರೆಯುತ್ತಲೇ ಇರುವಂಥವರು ; ಬಹುಶಃ ಹಾಗೆ ಬರೆದು ಪ್ರಕಟಿಸುವುದರಲ್ಲೇ ಅವರಿಗೊಂದು ಸುಖವಿರುವಂತೆ ತೋರುತ್ತದೆ. ಇದು ತಪ್ಪು ಎಂದು ಯಾರೂ ಹೇಳಲಾರರು.

ಹಾ. ಮಾ. ನಾಯಕರ 'ಸಂಪುಟ' ಮತ್ತು 'ಸ್ತವನ' ಎಂಬ ಎರಡು ಕೃತಿಗಳು ಸಿ.ಪಿ.ಕೆ.ಯವರ ಬರವಣಿಗೆಯ ಜತೆಗೆ ಪರಿಶೀಲಿಸ ಬೇಕಾದವು. ಸಂಪುಟದಲ್ಲಿ ಹಾಮಾ ನಾಯಕರು, 1977ನೆ ಆಗಸ್ಟ್ ತಿಂಗಳಿಂದ 1979ನೆ ಆಗಸ್ಟ್‌ವರೆಗೆ, ಗ್ರಂಥಲೋಕ ವೆಂಬ ಪತ್ರಿಕೆಗೆ 'ತಿಂಗಳಪುಸ್ತಕ'ವೆಂಬ ಸ್ಥಿರಶೀರ್ಷಿಕೆಯ ಅಂಕಣಕ್ಕೆ ಬರೆದ ಇಪ್ಪತ್ತೈದು ಲೇಖನಗಳಿವೆ. ಹಾ.ಮಾ. ನಾಯಕರ ಬಹುಪಾಲು ಬರೆಹಗಳೆಲ್ಲ ಹೀಗೆಯೇ ; ವಿವಿಧ ಪತ್ರಿಕೆಗಳಿಗೆ ಉದ್ದಕೂ ಬರೆದ ಅಂಕಣ ಲೇಖನಗಳ, ಅಥವಾ ಹತ್ತು ಹಲವೆಡೆ ಮಾಡಿದ ಭಾಷಣಗಳ ಸಂಗ್ರಹಗಳಾಗಿವೆ. ಈಗಾಗಲೇ ಅವರು ಪ್ರಕಟಿಸಿರುವ ಸಲ್ಲಾಪ, ಸೂಲಂಗಿ, ಸಂದರ್ಭ ಇಂಥವುಗಳು ಈ ವರ್ಗಕ್ಕೆ ಸೇರಿದವು.

'ಸಂಪುಟ'ದಲ್ಲಿರುವ ಇಪ್ಪತ್ತೈದು ಲೇಖನಗಳು ಇಪ್ಪತ್ತೈದು ಪುಸ್ತಕಗಳನ್ನು ಕುರಿತ ಸಮೀಕ್ಷೆಗಳಾಗಿವೆ. ಒಂದೊಂದು ಬರೆಹ ಸರಾಸರಿ ನಾಲ್ಕು ಪುಟದಿಂದ ಒಂಭತ್ತು ಹತ್ತು ಪುಟಗಳವರೆಗೆ ಹರಡಿಕೊಂಡಿದೆ. ತಿಂಗಳಿಗೆ ಒಂದರಂತೆ, ತಾವೇ ಆಯ್ಕೆ

ಮಾಡಿಕೊಂಡ ಪುಸ್ತಕಗಳ -ಗುಣ-ಸ್ವರೂಪ ಕಥನ ಈ ಬರೆಹದ ಉದ್ದೇಶ. "ಹೀಗೆ ಆಯ್ಕೆ ಮಾಡಿಕೊಳ್ಳುವ ಪುಸ್ತಕ ಕೇವಲ ಶ್ರೇಷ್ಠತೆಯನ್ನೆ ಆಧರಿಸಿರುವುದಿಲ್ಲ. ಒಂದು ಪುಸ್ತಕದ ಮಹತ್ವಕ್ಕೆ ಹಲವು ಕಾರಣಗಳಿರುತ್ತವೆ. ವೈಯುಕ್ತಿಕ ಅಭಿರುಚಿ, ವಸ್ತು, ಹೊಸತನ, ಸಾಂದರ್ಭಿಕತೆ, ಲೇಖಕರ ಧೋರಣೆ, ಉಪಯುಕ್ತತೆ ಮೊದಲಾದುವು ಇಂಥ ಕಾರಣಗಳು' (ಸಂಪುಟ ತೆರೆಯುವ ಮುನ್ನ ಪು. 9) ಎಂದು ಬರೆಹಗಾರರು ತಮ್ಮ ಆಯ್ಕೆಯನ್ನು ಸಮರ್ಥಿಸಿಕೊಂಡ ಮೇಲೆ, ಆಯಾ ತಿಂಗಳು ನೀವು ಆರಿಸಿ ಕೊಂಡ ಪುಸ್ತಕಗಳಿಗಿಂತ ಇನ್ನೂ ಮಹತ್ವದ ಕೃತಿಗಳಿದ್ದುವಲ್ಲ, ಅವುಗಳನ್ನೇಕೆ ನೀವು ಆರಿಸಿಕೊಳ್ಳಲಿಲ್ಲ ಎಂದು ಯಾರಾದರೂ ಪ್ರಶ್ನಿಸುವುದು ಅರ್ಥವಿಲ್ಲದ್ದು.

ಈ ಬರೆಹ ಮೂಲತಹ ಒಂದು ಕೃತಿಯನ್ನು, ಸ್ವಾರಸ್ಯವಾದ ರೀತಿಯಲ್ಲಿ ಪರಿಚಯ ಮಾಡಿಕೊಡುವ ಉದ್ದೇಶದ್ದು. ಪುಸ್ತಕದ ಮುನ್ನುಡಿಯಿಂದಲೋ, ಪುಸ್ತಕದ ಒಳಪುಟಗಳಿಂದಲೋ ಮಾತುಗಳನ್ನು, ಸಂದರ್ಭಗಳನ್ನು ಉಲ್ಲೇಖಿಸಿ ಅದರ ಸೊಗಸುಗಳ ಕಡೆಗೆ ಗಮನ ಸೆಳೆಯುವುದು ; ಇರುವ ವಿಸಂಗತಿಗಳನ್ನು, ತಪ್ಪು ಮಾಹಿತಿಗಳನ್ನು ತೋರಿಸುವುದು ; ಲೇಖಕರಿಗೆ ಅಲ್ಲಲ್ಲಿ ಕಿವಿಮಾತು ಹೇಳುವುದು; ಜತೆಗೆ ವಿಮರ್ಶೆಯ ಮಾತನ್ನೂ ಹೇಳುವುದು ; ಪುಸ್ತಕದ ಸ್ವರೂಪ ಹಾಗೂ ಮಹ ತ್ವದ ಬಗ್ಗೆ ಟಿಪ್ಪಣಿಸುವುದು–ಇದು ಈ ಬರೆವಣಿಗೆಯ ರೀತಿ. ಪ್ರತಿಯೊಂದು ಬರೆಹಕ್ಕೂ ಒಂದು ತೃಪ್ತಿಕರವಾದ ಚೌಕಟ್ಟಿದೆ. ಸ್ವಾರಸ್ಯವಾದ ಕೃತಿ ಪರಿಚಯದ ಮೂಲಕ, ಓದುಗರು ಆಯಾ ಕೃತಿಗಳನ್ನು ಓದಬೇಕೆಂಬ ಆಸಕ್ತಿಯನ್ನು ಕೆರಳಿಸು ವುದರಲ್ಲಿ ಸಂಪುಟದ ಲೇಖನಗಳು ಸಫಲವಾಗಿವೆ.

ಸ್ತವನ ಇದೇ ಲೇಖಕರ ಇನ್ನೊಂದು ಕೃತಿ. ಹಾ.ಮಾ. ನಾಯಕರು ತಮ್ಮ ಗೌರವ ವಿಶ್ವಾಸಗಳಿಗೆ ಪಾತ್ರರಾದ ಹದಿನೇಳು ವ್ಯಕ್ತಿಗಳನ್ನು ಕುರಿತು ಬರೆದ ಭಾಷಣ ಲೇಖನಗಳು ನೂರ ಐವತ್ತೈದು ಪುಟಗಳಲ್ಲಿ ಅಡಕಗೊಂಡಿವೆ. ಕುವೆಂಪು ಅವರಿಂದ ಹಿಡಿದು ದೇವರಾಜ ಅರಸರವರೆಗೆ ನಾಯಕರ ಸ್ತವನಕ್ಕೆ ಪಾತ್ರರಾದ ವಿವಿಧ ಕ್ಷೇತ್ರದ ವ್ಯಕ್ತಿಗಳ ಗುಣ ಕಥನ ಇಲ್ಲಿದೆ. ಈ ಬರೆಹದಲ್ಲಿ ಆಯಾ ವ್ಯಕ್ತಿಗಳ ಜತೆ ಹೆಣೆದು ಕೊಂಡ ನಾಯಕರ ಸಂಬಂಧಗಳು, ನೆನಪುಗಳು, ಆಯಾ ವ್ಯಕ್ತಿತ್ವದ ವೈಲಕ್ಷಣ್ಯಗಳು ಹಾಗೂ ಸಾಧನೆಗಳು ಹದವರಿತು ನಿರೂಪಣೆಗೊಂಡಿವೆ. ಎಲ್ಲ ಬರೆಹಗಳೂ ಸಾಂದರ್ಭಿಕವಾದ್ದರಿಂದ, ಮತ್ತು ಕೇವಲ ಗೌರವಭಾವದಿಂದ ಕಂಡ ನೆಲೆಯವಾದ್ದ ರಿಂದ ಅಂಥ ಯಾವ ಆಳವನ್ನೂ ಸ್ಪರ್ಶಿಸದೆ ಮೇಲು ನೋಟದವುಗಳಾಗಿವೆ. ಕುವೆಂಪು, ಬೇಂದ್ರೆ, ಕಾರಂತ ಇಂಥವರನ್ನು ಕುರಿತ ಬರೆಹಗಳೂ ಅವರವರ ಸಾಹಿತ್ಯಕ ಸಾಧನೆಗಳನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡುವಂತಿವೆಯೇ ಹೊರತು, ಅವರವರ ವ್ಯಕ್ತಿತ್ವದ ಹೊಸ ಆಯಾಮಗಳನ್ನು ದೀಪ್ತಿಗೊಳಿಸಿ ತೋರುವ ಯಾವ ಹೊಸ ಮಾತುಗಳನ್ನು ಒಳಕೊಳ್ಳುವುದಿಲ್ಲ. ಇನ್ನು ಅನ.ಕೃ. ಮುಳಿಯ ತಿಮ್ಮಪ್ಪಯ್ಯ, ಕು.ಶಿ. ಹರಿದಾಸಭಟ್ಟ ಇಂಥವರನ್ನು ಕುರಿತ 'ಸ್ತವನ'ಗಳಂತೂ ತೀರಾ ಸಪ್ಪೆ

ಯಾಗಿವೆ. ದೊಡ್ಡ ದೊಡ್ಡ ವ್ಯಕ್ತಿಗಳ ಮಹತ್ಸಾಧನೆಗಳನ್ನು ಉಗ್ಗಡಿಸುವ ಸಂದರ್ಭದಲ್ಲಿ ಹೇಗೋ ಅವಕಾಶಮಾಡಿಕೊಂಡು ತಮ್ಮ ಪರಿಸರದ ಬುದ್ಧಿ ಜೀವಿಗಳನ್ನು, ವಿಮರ್ಶಕರನ್ನು ಅನಗತ್ಯವಾಗಿ ಟೀಕಿಸುವ ವ್ಯಂಗ್ಯಚಾಪಲ್ಯವನ್ನು ಲೇಖಕರು ತಡೆ ಹಿಡಿದಿದ್ದರೆ ಚೆನ್ನಾಗಿತ್ತು. ಬಹುಶಃ ನಾಯಕರು ಭಾಷಣ ಮಾಡುವ ಹೊತ್ತಿನಲ್ಲಿ ಇಂಥ ಮಾತುಗಳು ಚಪ್ಪಾಳೆಗಳ ಸುರಿಮಳೆಗೆ ಕಾರಣವಾಗಿದ್ದಿರಬಹುದು ; ಆದರೆ ಭಾಷಣ ಮಾಡಿದ್ದನ್ನು ಬರೆದು ಅಚ್ಚುಮಾಡುವಾಗಲೂ ಅಂಥ ಮಾತುಗಳು ದಾಖಲಾಗಬೇಕೆ ಎಂಬುದನ್ನು ಲೇಖಕರು ಯೋಚಿಸಬಹುದಾಗಿತ್ತು. ಕುವೆಂಪು ಅವರನ್ನು ಕುರಿತು ಭಾಷಣ ಮಾಡುವಾಗ, ಕುವೆಂಪು ಅವರನ್ನು ಆರಾಧಿಸುವ ಶಿಷ್ಯವೃಂದವನ್ನು ಕುರಿತು, ಕಾರಂತರನ್ನು ಸ್ತವನ ಮಾಡುವಾಗ ಈ ದೇಶದ ಬುದ್ಧಿಜೀವಿಗಳನ್ನು ಕುರಿತು, ಬೇಂದ್ರೆಯವರನ್ನು ಪ್ರಶಂಸಿಸುವಾಗ ಕನ್ನಡದ ವಿಮರ್ಶಕರನ್ನು ಕುರಿತು ನಾಯಕರು ಆಡುವ ಮಾತುಗಳು ಸಮುತೂಕದವುಗಳೆಂದು ಅನ್ನಿಸುವುದಿಲ್ಲ. ಯಾರದೋ ನೆಪದಲ್ಲಿ ಯಾರನ್ನೋ ತೆಗಳುವುದು, ಯಾವುದೋ ಸಂದರ್ಭದ ಭಾಷಣದ ವೇದಿಕೆಯನ್ನು ಮತ್ತಾವುದೋ ಉದ್ದೇಶಕ್ಕೆ ಬಳಸುವುದು ರಾಜಕಾರಣಗಳಲ್ಲಿ ತೀರಾ ಸಹಜವಾದದ್ದು ; ಆದರೆ ಸಾಹಿತ್ಯ ಕ್ಷೇತ್ರಗಳಲ್ಲಿ ಇದು ಖಂಡಿತ ಶೋಭಿಸುವುದಿಲ್ಲ. ತಮ್ಮನ್ನು ತಾವು ಪರೀಕ್ಷಿಸಿಕೊಂಡು ನೋಡಬಲ್ಲವರು ರಾಜಕಾರಣಿಗಳನ್ನು ಅನುಕರಿಸಲಾರರು.

ವಿಚಾರಸಾಹಿತ್ಯದ ವಲಯಕ್ಕೆ ಸೇರುವ ಕೃತಿಗಳು ಈ ಸಲ ಎರಡಿವೆ. ಒಂದು ಷಣ್ಮುಖಯ್ಯ ಅಕ್ಕೂರ ಮಠ ಅವರ 'ವೈಚಾರಿಕ ಸಾಹಿತ್ಯ : ದಿಗ್ದರ್ಶನ' ; ಮತ್ತೊಂದು ಡಾ. ಬಿ. ಕುಪ್ಪಸ್ವಾಮಿಯವರ 'ಶ್ರದ್ಧೆ, ನಂಬಿಕೆ ಮತ್ತು ವೈಚಾರಿಕತೆ'.

'ವೈಚಾರಿಕ ಸಾಹಿತ್ಯ : ದಿಗ್ದರ್ಶನ' ಎಂಬುದು ಒಂಬತ್ತು ಲೇಖನಗಳನ್ನು ಒಳಕೊಳ್ಳುವ 103 ಪುಟಗಳ ಒಂದು ಕೃತಿ. ಇರುವ ಒಂಬತ್ತು ಲೇಖನಗಳಲ್ಲಿ ಐದು ವೀರಶೈವ ಸಾಹಿತ್ಯಕ್ಕೆ ಸಂಬಂಧಪಟ್ಟವು. ವೀರಶೈವ ಶರಣರನ್ನು ಕುರಿತು ಪ್ರಚಲಿತವಾಗಿರುವ ಸಾಮಾನ್ಯ ಗ್ರಹಿಕೆಗಳನ್ನು ಷಣ್ಮುಖಯ್ಯನವರು ವಿಚಾರದ ಒ॒ಗಲ್ಲಿ ಗತಿ ನೋಡಿದ್ದಾರೆ. ವೀರಶೈವ ಶರಣರು ವೈದಿಕ ಸಂಸ್ಕೃತಿಯ ವಿರೋಧಿಗಳೆಂದು ಬಹುಮಂದಿ ತಿಳಿದುಕೊಂಡಿದ್ದಾರೆ. ಈ ತಿಳುವಳಿಕೆಯನ್ನು ಚರ್ಚೆಗೆ ಗುರಿಪಡಿಸಿ, ಶರಣರು ನಿಜಕ್ಕೂ ವೈದಿಕ ಸಂಸ್ಕೃತಿಯ ವಿರೋಧಿಗಳಲ್ಲ, ಅವರು ಅದರ ಸುಧಾರಕರು ಎಂಬುದನ್ನು ಷಣ್ಮುಖಯ್ಯನವರು ಸಾಧಿಸುತ್ತಾರೆ. 'ಶರಣರು ಮತ್ತು ಜೋತಿಷ್ಯ ಶಾಸ್ತ್ರ' ಎಂಬ ಲೇಖನದಲ್ಲಿ, ಶರಣರ ಜ್ಯೋತಿಷ್ಯವನ್ನು ಕುರಿತ ನಿಲುವು ಹೇಗೆ ವೈಚಾರಿಕವಾದದ್ದು ಎಂಬುದನ್ನು ಪ್ರತಿಪಾದಿಸಿದ್ದಾರೆ. 'ವೀರಶೈವ ಪುರಾಣಗಳು ; ಸೃಷ್ಟಿ ಮತ್ತು ದೃಷ್ಟಿ' ಎಂಬ ಲೇಖನ ಏನನ್ನೂ ಹೇಳದೆ ಸೋಲುತ್ತದೆ. ನಿಜಗುಣರನ್ನು ಕುರಿತ ಲೇಖನದಲ್ಲಿ ಜೈನ-ವೀರಶೈವರು ಪ್ರಾಂತೀಯ ಭಾಷೆಗಳಲ್ಲಿ ಬರೆದುದನ್ನು

ಪ್ರಸ್ತಾಪಿಸುತ್ತಾ 'ವೈದಿಕ ಧರ್ಮದ ಭಾವನೆಗಳನ್ನು ಖಂಡಿಸಲು ಹೋದ ಈ ಜನ ಸಂಸ್ಕೃತ ಭಾಷೆಯನ್ನು ಖಂಡಿಸಿ ತಿರಸ್ಕರಿಸಿ ದುದಕ್ಕಾಗಿ, ಸಂಸ್ಕೃತ ಭಾಷೆಗೂ ಜನತೆಗೂ ಉಭಯ ನಷ್ಟವಾದಂತಾಯಿತು" (ಪು. 47) ಎನ್ನುತ್ತಾರೆ. ನಿಜಕ್ಕೂ ಇದು ತೀರಾ ಅವೈಚಾರಿಕವಾದ ವಾಕ್ಯವೇ. ಇಡೀ ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತವನ್ನು ಕುರಿತು ಕನ್ನಡ ಕವಿಗಳ ನಿಲುವು ಏನು ಎಂಬುದನ್ನು ಲೇಖಕರು ಗುರುತಿಸಿದಂತೆ ತೋರು ವುದಿಲ್ಲ. ಕನ್ನಡ ಕವಿಗಳು ಸಂಸ್ಕೃತದ ಅತಿ ಪ್ರವೇಶವನ್ನು ನಿರಾಕರಿಸಿದರೇ ಹೊರತು ಸಂಸ್ಕೃತವನ್ನೆಂದೂ ತಿರಸ್ಕರಿಸರಲಿಲ್ಲ. ಶಿವಶರಣರು ಸಂಸ್ಕೃತಕ್ಕೆ ಸವಾಲಾಗಿ ನಿಲ್ಲದಿದ್ದರೆ ವಚನ ಎಂಬ ಅಭಿವ್ಯಕ್ತಿ ಪ್ರಕಾರ ಹುಟ್ಟಿಕೊಳ್ಳುತ್ತಲೇ ಇರಲಿಲ್ಲ. ಈ ದೇಶದ ಬುದ್ಧಿಯ ಭಾಷೆಯಾಗಿ ಸಂಸ್ಕೃತ ಏನನ್ನು ಸಾಧಿಸಿತೋ ಅದನ್ನು ಕನ್ನಡವೂ ಸಾಧಿಸ ಬಲ್ಲದೆಂಬುದನ್ನು ವಚನಕಾರರು ತೋರಿಸಿದರು. ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ ಇತ್ಯಾದಿ ಛಂದೋ ವಿಧಾನಗಳು ಜನಾಭಿಮುಖ ಸಾಹಿತ್ಯ ನಿರ್ಮಿತಿಗೆ ಒದಗಿಬಂದದ್ದು ಸಂಸ್ಕೃತದ ಸವಾಲನ್ನು ನಮ್ಮ ಕವಿಗಳು ಎದುರಿಸಿದ್ದರಿಂದಲೇ, ಹೀಗಿರುವಾಗ ಷಣ್ಮುಖಯ್ಯನವರು ಹೇಳುವಂತೆ, ಜೈನ-ವೀರಶೈವರು ಸಂಸ್ಕೃತವನ್ನು ತಿರಸ್ಕರಿಸಿ ದ್ದಕ್ಕಾಗಿ "ಸಂಸ್ಕೃತ ಭಾಷೆಗೂ ಜನತೆಗೂ ಉಭಯ ನಷ್ಟವಾದಂತಾಯಿತು" ಎಂದರೆ ಏನರ್ಥ ? ನಿಜಗುಣರನ್ನು ಕುರಿತ ಲೇಖನದಲ್ಲಿ, ನಿಜಗುಣರ ಸಂದೇಶವೇನು ಮನು ಕುಲಕ್ಕೆ ಎಂಬ ಪ್ರಶ್ನೆಯನ್ನು ಎತ್ತಿ ಷಣ್ಮುಖಯ್ಯನವರು, "ಶ್ರೀ ಗುರುವಚನೋ ಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ" ಎಂಬುದು ಅದಕ್ಕೆ ಉತ್ತರ ವೆಂದು ಹೇಳುವುದು ತೀರಾವಿಲಕ್ಷಣವಾಗಿದೆ. ನಿಜಗುಣರ ಈ ಸಂದೇಶದಲ್ಲಿ ಏನಾದರೂ ಹೊಸತನವಿದೆಯೇ ? ಅಥವಾ ಗಹನವಾದ ವೈಚಾರಿಕತೆ ಇದೆಯೇ? ಬಸವಾದಿಗಳ ಕ್ರಾಂತಿಕಾರಕವಾದ ವಿಚಾರವಂತಿಕೆಯಿಂದ ನಡೆದ ಆಂದೋಲನದ ಆಶಯಗಳಿಗೆ ತೀರಾ ವಿರುದ್ಧವಾದ ಪ್ರತಿಗಾಮೀ ನಿಲುವುಗಳು ನಿಜಗುಣರಲ್ಲಿ ಸಾಕಷ್ಟಿವೆ ಎಂಬು ದನ್ನು ಷಣ್ಮುಖಯ್ಯನವರು ಇನ್ನೂ ಗುರುತಿಸಬೇಕಾಗಿದೆ. ಶಿಶುನಾಳ ಷರೀಫರನ್ನು ಕುರಿತ ಲೇಖನ ಕೇವಲ ಪರಿಚಯಾತ್ಮಕವಾಗಿದೆ. ಇದ್ದುದರಲ್ಲಿ 'ಅಲ್ಲಮನ ವಿಚಾರ ದರ್ಶನ' ವೊಂದೇ ಒಳ್ಳೆಯ ಲೇಖನ ಈ ಸಂಗ್ರಹದಲ್ಲಿ.

ಶ್ರೀ ಷಣ್ಮುಖಯ್ಯನವರ ಬರೆಹದ ಹಿಂದೆ ಸಾಹಿತ್ಯ ಹಾಗೂ ಧಾರ್ಮಿಕ ವಿಷಯಗಳನ್ನು ವೈಚಾರಿಕ ದೃಷ್ಟಿಯಿಂದ ವೀಕ್ಷಿಸುವ ಕಳಕಳಿ ಇದೆ. ಆದರೆ ಅವರು ಅಲ್ಲಲ್ಲಿ ತಾಳುವ ನಿಲುವುಗಳು, ವೈಚಾರಿಕತೆಯ ಹೆಸರಿನಲ್ಲಿ ಪ್ರಾಚೀನ ಪರಂಪರೆ ಯನ್ನೆ ಸಮರ್ಥಿಸುವ ಚಾತುರ್ಯಗಳಾಗಿ ತೋರುತ್ತವೆ. ಸಾಹಿತ್ಯ ಹಾಗೂ ಧರ್ಮದ ವಿಷಯಗಳನ್ನು ವೈಚಾರಿಕ ದೃಷ್ಟಿಯಿಂದ ಚರ್ಚಿಸುವ ಕೆಲಸ ನಮ್ಮ ಸಾಹಿತ್ಯ ಪರಿಸರ ದಲ್ಲಿ ಎಷ್ಟು ನಡೆದಿದೆ ಎಂಬುದನ್ನು ಷಣ್ಮುಖಯ್ಯನವರು ಗಣನೆಗೆ ತೆಗೆದು ಕೊಳ್ಳುವುದು ಒಳ್ಳೆಯದು. ಹಾಗೆಯೇ ಈ ಕೃತಿಗೆ ಹಿನ್ನುಡಿ ಬರೆದಿರುವ ಮಲ್ಲೇಪುರಂ

ಜಿ. ವೆಂಟೇಶ ಅವರೂ ಇದನ್ನು ಗಮನಿಸುವುದು ಅಗತ್ಯವಾಗಿದೆ. ಅವರು ಹಾಗೆ ಗಮನಿಸಿದ್ದರೆ "ಸಾಹಿತ್ಯ ಮತ್ತು ಜೀವನವನ್ನು ವೈಚಾರಿಕ ನೆಲೆಯಲ್ಲಿ ನೋಡುವ ದೃಷ್ಟಿ ಕನ್ನಡ ಸಾಹಿತ್ಯ ಸಂದರ್ಭದ ಸಾಹಿತ್ಯಕ ಚರ್ಚೆಯಲ್ಲಿ ತೀರಾ ಹೊಸದು" ಎಂಬಂಥ ಸಂಭ್ರಮದ ಮಾತುಗಳನ್ನು ಈ ಕೃತಿಯು ಬಗ್ಗೆ ಆಡುವುದು ತಪ್ಪು ತಿತ್ತು.

'ಶ್ರದ್ಧೆ, ನಂಬಿಕೆ ಮತ್ತು ವೈಚಾರಿಕತೆ' ಎಂಬ ನಲವತ್ತು ಮೂರು ಪುಟದ ಕೃತಿ ಡಾ. ಬಿ. ಕುಪ್ಪುಸ್ವಾಮಿ ಯವರು ಬರೆದ ಒಂದು ಅಪರೂಪದ ಪುಸ್ತಕ. ಸ್ವತಃ ಮನಸ್‌ಶಾಸ್ತ್ರಜ್ಞರಾದ ಕುಪ್ಪುಸ್ವಾಮಿಯವರು ಭಾರತೀಯ ಪರಿಸರದಲ್ಲಿ ನಮ್ಮ ಸಾಮಾಜಿಕ ಜೀವನವು ಕೇವಲ ಶ್ರದ್ಧೆ ಹಾಗೂ ನಂಬಿಕೆಗಳನ್ನು ಅವಲಂಬಿಸುತ್ತ ವಿಚಾರ ಶಕ್ತಿಯನ್ನು ಬೆಳೆಯಿಸಿಕೊಳ್ಳದೆ, ನಿಜವಾದ ವ್ಯಕ್ತಿತ್ವವನ್ನು ಪಡೆಯಲಾರ ದಾಗಿದೆ ಎಂಬ ಸಂಗತಿಯನ್ನು ತಕ್ಕ ನಿದರ್ಶನಗಳೊಂದಿಗೆ ಪ್ರತಿಪಾದಿಸಿದ್ದಾರೆ. ಆದರೆ, ಇಂಗ್ಲಿಷಿನಲ್ಲಿ ಯೋಚನೆ ಮಾಡಿ ಕನ್ನಡ ದಲ್ಲಿ ಬರೆದಂತೆ ತೋರುವ ಈ ಕೃತಿಯ ಭಾಷೆ ತೀರಾ ಕೃತಕವಾಗುತ್ತಬೆ. ಎಷ್ಟೋ ಕಡೆ ಹೇಳಬೇಕೆಂದಿರುವ ವಿಚಾರಗಳಿಗೆ ಸರಿಯಾದ ಪದವೇ ಬೇರೇನನ್ನೂ ಬಳಸಲಾಗಿದೆ. ವೈಚಾರಿಕತೆ ಎಂಬ ಪದದ ಬದಲು ವಿಚಾರಣಾ ಶಕ್ತಿ ಎಂದೂ, Irrational doubtsಗೆ ಅಸಂಬದ್ಧ ಸಂಶಯ ಎಂದೂ, Rational doubts ಎಂಬುದಕ್ಕೆ ವಿಚಾರ ಪೂರ್ವಕ ಸಂಶಯ ಎಂದೂ ಬಳಸ ಲಾಗಿದೆ. ಜತೆಗೆ ಅಚ್ಚಿನ ತಪ್ಪುಗಳೂ ಕಿಕ್ಕಿರಿದಿವೆ. ನಮ್ಮ ಪರಿಸರದಲ್ಲಿ ಈ ಬಗೆಯ ಪುಸ್ತಕಗಳ ಅಗತ್ಯವಿದೆ. ಆದರೆ ಇಂಥ ವಿಷಯಗಳನ್ನು ಸಮರ್ಪಕವಾಗಿ ಹೇಳುವವರ ಅಭಾವವೂ ಇದೆ.

ಹರಿಹರ ಪ್ರಿಯರ 'ಕನ್ನಡ ತೆಲುಗು ಸಾಹಿತ್ಯ ವಿನಿಮಯ' ಅರುವತ್ತು ನಾಲ್ಕು ಪುಟಗಳ ಒಂದು ಪುಸ್ತಕ. ಅತ್ಯಂತ ಸಂಗ್ರಹವಾಗಿ, ಅಂಕಿ-ಅಂಶಗಳ ಸಮೇತ ಕನ್ನಡ ಹಾಗೂ ತೆಲುಗು ಸಾಹಿತ್ಯದ ಕೊಳು-ಕೊಡೆಗಳ ದಿಗ್ದರ್ಶನ ಮಾಡಿಸುವ ಉದ್ದೇಶದ ಈ ಕೃತಿ, ತೌಲನಿಕ ಅಧ್ಯಯನವನ್ನು ಕೈಕೊಳ್ಳುವವರಿಗೆ ಒಂದು ಒಳ್ಳೆಯ ಆಕರ ಸೂಚಿಯಾಗಿದೆ. ಇಂಥ ಒಂದು ಕೃತಿಯನ್ನು ಸಿದ್ಧಪಡಿಸಬೇಕಾಗಿ ಬಂದ ಸಂದರ್ಭದ ಆತ್ಮ ಕಥನ ರೂಪದ ಮುನ್ನುಡಿ ನಮ್ಮ ಸಾಹಿತ್ಯದ ಪರಿಸರಕ್ಕೆ ಸ್ವಾರಸ್ಯವಾದ ಕನ್ನಡಿ ಹಿಡಿಯುತ್ತದೆ.

ಆರು ಉಪವಿಭಾಗಗಳ ಈ ಕೃತಿ, ಎರಡು ಮತ್ತು ಮೂರನೆಯ ವಿಭಾಗಗಳಲ್ಲಿ ತೆಲುಗು ಮತ್ತು ಕನ್ನಡ ಕವಿಗಳ ಪರಸ್ಪರ ಪ್ರಭಾವಗಳನ್ನು ಸ್ಥೂಲವಾಗಿ ಸಮೀಕ್ಷಿ ಸುತ್ತದೆ. ಐದು ಆರನೆಯ ವಿಭಾಗ ತೆಲುಗಿನಿಂದ ಕನ್ನಡಕ್ಕೆ, ಕನ್ನಡದಿಂದ ತೆಲುಗಿಗೆ ಅನುವಾದಗೊಂಡ ಕೃತಿಗಳ ಮಾಹಿತಿಯನ್ನು ಕೊಡುತ್ತದೆ. "ಆದರೆ ಇತ್ತೀಚೆಗೆ ತೆಲುಗಿನಿಂದ ಕನ್ನಡಕ್ಕೆ, ಕನ್ನಡದಿಂದ ತೆಲುಗಿಗೆ ಅನುವಾದಗೊಂಡ ಸಾಹಿತ್ಯವನ್ನು ಗಮನಿ

ಸಿದರೆ, ಇದು ಎರಡೂ ಸಾಹಿತ್ಯಕ್ಕೆ ಗೌರವ ಮನ್ನಣೆ ತರುವಂಥದ್ದಲ್ಲ' (ಪು. 31–32) ಎಂಬ ತೀರ್ಮಾನಕ್ಕೆ ಹರಿಹರ ಪ್ರಿಯರು ಬಂದಿದ್ದಾರೆ. ಆದರೆ ಈ ಮಾತು ತೆಲುಗಿನಿಂದ ಕನ್ನಡಕ್ಕೆ ಅನುವಾದಿತವಾದ ಕೃತಿಗಳನ್ನು ಕುರಿತು ಒಪ್ಪುವಷ್ಟರ ಮಟ್ಟಿಗೆ, ಕನ್ನಡದಿಂದ ತೆಲುಗಿಗೆ ಅನುವಾದಗೊಂಡ ಕೃತಿಗಳಿಗೆ ಒಪ್ಪಲಾರದೇನೋ. 'ಕನ್ನಡದಿಂದ ತೆಲುಗಿಗೆ ಅನುವಾದ' ಎಂಬ ಆರನೇ ವಿಭಾಗದಲ್ಲಿ, ಡಿ.ವಿ.ಜಿ. ಯವರ ಮಂಕುತಿಮ್ಮನ ಕಗ್ಗ, ಬಸವಣ್ಣನವರ ಸಮಗ್ರ ವಚನಗಳು, ಸರ್ವಜ್ಞನ ಒಂದು ಸಾವಿರದ ಏಳುನೂರು ವಚನಗಳು, ತ.ರಾ.ಸು. ಅವರ ಹಂಸಗೀತೆ, ಭೈರಪ್ಪನವರ ವಂಶವೃಕ್ಷ, ಕಾರಂತರ ಮರಳಿ ಮಣ್ಣಿಗೆ, ನಿರಂಜನರ ಚಿರಸ್ಮರಣೆ, ಅನಂತಮೂರ್ತಿಯವರ ಸಂಸ್ಕಾರ ಶ್ರೀ ಕೃಷ್ಣ ಆಲನ ಹಳ್ಳಿಯವರ ಕಾಡು, ಮಾಸ್ತಿಯವರ ಸುಬ್ಬಣ್ಣ, ಮತ್ತು ಚಿಕ್ಕ ವೀರರಾಜೇಂದ್ರ, ತ್ರಿವೇಣಿಯವರ ಕೆಲವು ಕತೆಗಳು – ಇಂಥವುಗಳ ಪಟ್ಟಿಯನ್ನೇ ಹರಿಹರ ಪ್ರಿಯರು ಕೊಟ್ಟಿದ್ದಾರೆ. ನಿಜಕ್ಕೂ ಈ ಅನುವಾದಿತ ಕೃತಿಗಳು ಕನ್ನಡಕ್ಕೂ ತೆಲುಗಿಗೂ ಗೌರವ ತರುವಂಥವುಗಳಾಗಿವೆ ಎನ್ನಬಹುದು. ಆದರೆ ಇನ್ನೂ ಮುಖ್ಯ ವಾದ ಲೇಖಕರ ಮಹತ್ವದ ಕೃತಿಗಳು ತೆಲುಗಿಗೆ ಅನುವಾದವಾಗಬೇಕಾಗಿದೆ ಎಂಬು ದನ್ನು ಮರೆಯುವಂತಿಲ್ಲ.

ಹರಿಹರ ಪ್ರಿಯರ ಈ ಪ್ರಯತ್ನ ಸಾಧಾರಣವಾದದ್ದೇನೂ ಅಲ್ಲ. ಇಷ್ಟೊಂದು ಸಾಮಗ್ರಿಯನ್ನು ಕಲೆ ಹಾಕುವುದು ಸುಲಭವಾದ ಕೆಲಸವಲ್ಲ. ದೊರೆತ ಸಾಮಗ್ರಿ ಯನ್ನು ಸುಮ್ಮನೆ ಪಟ್ಟಿ ಮಾಡುವುದಿಲ್ಲ. ಬದಲು ಅಲ್ಲಲ್ಲಿ ತಮ್ಮವೇ ಆದ ಸಂಶಯ ಗಳನ್ನೂ, ಪ್ರಶ್ನೆಗಳನ್ನೂ ತಿಳಿದವರ ಗಮನಕ್ಕಾಗಿ ಮುಂದಿಡುತ್ತಾರೆ. ಅಲ್ಲಸಾನಿ ಪೆದ್ದನನ 'ನಿರುಪಹತಿಸ್ಥಲಂಬು' ಎಂಬ ಪದ್ಯವನ್ನು ಉದ್ಧರಿಸಿ 'ಇದಕ್ಕೆ ಹದಿಮೂರನೆ ಶತಮಾನದ ಒಂದು ಪದ್ಯವೆ (ಕನ್ನಡದ್ದು) ಮೂಲ ಎನ್ನುತ್ತಾರೆ. ಆದರೆ ಯಾವುದೆಂಬ ವಿಷಯ ಇನ್ನೂ ತಿಳಿದು ಬಂದಿಲ್ಲ' (ಪು. 40) ಎನ್ನುತ್ತಾರೆ ಹರಿಹರಪ್ರಿಯರು. ಇದಕ್ಕೆ 13ನೇ ಶತಮಾನದ ಒಂದು ಕನ್ನಡ ಪದ್ಯ ಮೂಲವೆಂಬುದು ನಿಜ. ಆ ಪದ್ಯ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದ ಪೀಠಿಕಾ ಪ್ರಕರಣದ 70ನೆಯ ವೃತ್ತವೇ ಅದೂ ಸಹ 'ನಿರುಪತಿ ಸ್ಥಲಂ' ಎಂದೇ ಶುರುವಾಗುತ್ತದೆ. ಹರಿಹರ ಪ್ರಿಯರು ಸರ್ವಜ್ಞನ ಕಾಲವನ್ನು ಕುತತು 'ಹದಿನೆಂಟನೆಯ ಶತಮಾನದ ಪೂರ್ವಭಾಗ' (ಪು. 41) ಎನ್ನುತ್ತಾರೆ. ಆದರೆ, 'ಪರಮಾರ್ಥ'ವೆಂಬ ಹೆಸರಿನಲ್ಲಿ ಸರ್ವಜ್ಞನ ವಚನಗಳನ್ನು ಸಂಪಾದಿಸಿದ ಡಾ. ಎಲ್. ಬಸವರಾಜು ಅವರು, ಈಗ ದೊರಕಿ ರುವ ಸರ್ವಜ್ಞನ ತ್ರಿಪದಿಗಳ, ಮೊದಲ ಲಿಖಿತ ಪ್ರತಿ ಕ್ರಿ.ಶ. 1636 ರಂದು ಎಂಬ ಅಂಶವನ್ನು ಗಮನಕ್ಕೆ ತಂದಿದ್ದಾರೆ.

ಹರಿಹರ ಪ್ರಿಯರ ಈ ಪ್ರಯತ್ನ ಪ್ರಶಂಸನೀಯವಾದದ್ದು. ಒಂದು ಭಾಷಾ ಸಾಹಿತ್ಯ ಮತ್ತೊಂದು ಭಾಷಾ ಸಾಹಿತ್ಯದಮೇಲೆ ಬೀರುವ ನೆಳಲು-ಬೆಳಕುಗಳನ್ನು,

ಗಂಟು-ನಂಟುಗಳನ್ನು ಕುರಿತು ಈ ಬಗೆಯ ಕೆಲಸ ನಡೆದಷ್ಟು ತೌಲನಿಕ ಅಧ್ಯಯನಕ್ಕೆ ಒಳ್ಳೆಯ ಪರಿಸರ ನಿರ್ಮಾಣವಾಗುತ್ತದೆ.

ಪು.ತಿ.ನ. ಅವರು ಕವಿ ಮಾತ್ರವಲ್ಲ, ಒಳ್ಳೆಯ ಚಿಂತಕರೂ ಹೌದು. ಅವರ ಕಾವ್ಯವೇ ಮೂಲತಹ ಚಿಂತನಾ ಪ್ರಧಾನವಾದದ್ದು. ಕಾವ್ಯ ಮೀಮಾಂಸೆಯನ್ನು ಕುರಿತ ಅವರ ಚಿಂತನಗಳು 'ರಸಸರಸ್ವತಿ' ಮತ್ತಿತರ ಕವಿತೆಗಳ ಚೌಕಟ್ಟಿನಲ್ಲಿ ಪ್ರಕಟ ವಾಗಿರುವಂತೆ, ಅವರ 'ಕಾವ್ಯಕುತೂಹಲ'ದಂಥ ಗದ್ಯ ಕೃತಿಯಲ್ಲೂ ಅಪೂರ್ವವಾದ ರೀತಿಯಲ್ಲಿ ಕಾಣಿಸಿಕೊಂಡಿವೆ. ಅವರ 'ರಸಪ್ರಜ್ಞೆ' ಎಂಬ 57 ಪುಟಗಳ ಕಿರುಕೃತಿ ಕಾವ್ಯಮೀಮಾಂಸೆಯನ್ನು ಒಂದು ವಿಶಿಷ್ಟವಾದ ಪುಸ್ತಕವಾಗಿದೆ.

ಈ ಕೃತಿಯಲ್ಲಿ ಪು.ತಿ.ನ. ಅವರು ರಸತತ್ವವನ್ನು ಕುರಿತು ತಮ್ಮದೇ ಆದ ರೀತಿ ಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಭಾರತೀಯ ಕಾವ್ಯಮೀಮಾಂಸೆಯ ಹಿನ್ನೆಲೆ, ಮಹಮಹಾಕವಿಗಳ ಕೃತಿಗಳಿಂದ ಸುಪುಷ್ಟವಾದ ಚೇತಸ್ಸು, ಭಾರತೀಯ ತತ್ವಶಾಸ್ತ್ರ, ಹಾಗೂ ಧಾರ್ಮಿಕ ಅಧ್ಯಾತ್ಮಿಕ ಚಿಂತನೆಗಳ ಪರಿಚಯ ಇತ್ಯಾದಿಗಳಿಂದ, ಸ್ವಯಂ ಕವಿಯಾಗಿ ಪು.ತಿ.ನ. ಅವರು, ಕಾವ್ಯ ಕರ್ಮವನ್ನು ರಸಪ್ರಜ್ಞೆ ಎಂಬ ಈ ಉಪನ್ಯಾಸ ಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ. ಮಾನವ ಮನಸ್ಸಿನ ವಿವಿಧ ಸ್ತರಗಳ ವ್ಯಾಪಾರ ಗಳನ್ನು ವಿಶ್ಲೇಷಿಸುವ ಪು.ತಿ.ನ. ಅವರು ಜೀವಕಾಮದ ಪ್ರಾಬಲ್ಯವಿರುವ ಭವಸ್ತರದ ಅನುಭವಗಳು ಹೇಗೆ ರಸಸ್ತರದಲ್ಲಿ ಆನಂದಸ್ಯಂದಿಯಾದ ಕಲಾ ನಿರ್ಮಿತಿಗಳಾಗುತ್ತವೆ ಎಂಬುದನ್ನು ತಕ್ಕ ನಿದರ್ಶನಗಳೊಂದಿಗೆ ವಿವರಿಸುತ್ತಾರೆ. ಜೀವ ಕಾಮದ ಭವಸ್ಥಿತಿ ಸಾಮಾನ್ಯ ಲೋಕ ; ಆತ್ಮಕಾಮ ತಪಸ್ವಿಗಳ ನಿಲುವು ; ಆದರೆ ಕವಿಯದು ಜೀವ ಕಾಮೋತ್ತರವಾದ ರಸಪ್ರಜ್ಞೆ ಎನ್ನುತ್ತಾರೆ ಪು.ತಿ.ನ. ಈ ರಸಪ್ರಜ್ಞೆಯ ಅತ್ಯಂತ ಮಹತ್ವದ ಸೃಷ್ಟಿಗಳಾದ ಕಲ್ಪಾಗಮುಗಳನ್ನು ಪು.ತಿ.ನ. ಅವರು ವಿವರಿಸುತ್ತ, ದೈನಂದಿನ ಧಾರ್ಮಿಕ ವಿಧಿಗಳಾದ ಕಲ್ಪಗಳೂ (rituals) ಸಹ, ನಾವು ನಮ್ಮ ಅಹಂಕಾರಾದಿ ಗಳಿಂದ ನಿರ್‌ವೃತಿಯನ್ನು ಪಡೆಯುವ ಪ್ರಯತ್ನಗಳು ಎನ್ನುತ್ತಾರೆ. 'ಶಾಸ್ತ್ರವಿಹಿತ ಮತ್ತು ಸಂಪ್ರದಾಯ ವಿಹಿತ ಸತ್ಕರ್ಮಗಳೆಲ್ಲ ನಮ್ಮ ಸಂಸ್ಕಾರಕ್ಕಾಗಿಯೇ ಹೊರತು ಮತ್ತೆ ಬೇರೆ ಅಲ್ಲ, ನಾವು ಈ ಲೋಕದಲ್ಲಿ ಪಡೆಯಬಹುದಾದ ಸಂತೋಷೋಲ್ಲಾಸಗಳ ಸಾಧ್ಯತೆಯನ್ನು ಇವು ಹೆಚ್ಚಿಸುತ್ತವೆ' (ಪು. 41–42) ಎಂಬ ಮಾತಿನ ಮೂಲಕ, ಕಾವ್ಯ ಕಲೆಗಳೆಲ್ಲವೂ ಕಲ್ಪಮೂಲ (ritualistic origin) ಎಂಬ ಸಿದ್ಧಾಂತ ವನ್ನು ಸಮರ್ಥಿಸುತ್ತಾರೆ. ಒಟ್ಟಿನಲ್ಲಿ 'ರಸ'ದಂಥ ವಿಷಯವನ್ನು ಕುರಿತು ಪು.ತಿ.ನ. ಅವರ ವಿಚಾರಗಳು ಈ ಕೃತಿಯಲ್ಲಿ ವಿಶಿಷ್ಟವಾದ ಚಿಂತನೆಗೆ ಒಳಗಾಗಿವೆ.

ಪು.ತಿ.ನ. ಅವರ ವಿಚಾರವಂತಿಕೆಯಲ್ಲಿ ಪರಂಪರೆಯ ಗಾಢವಾದ ಒಲವು ಕಂಡು ಬರುವುದರ ಜೊತೆಗೇ, ಆಧುನಿಕ ಕಾವ್ಯ ಚಿಂತನೆಗೆಗಳ ಬಗ್ಗೆ ಒಂದು ಬಗೆಯ ಅತೃಪ್ತಿ, ಅಸಮಾಧಾನ ಹಾಗೂ ಸಂಶಯಗಳೂ ಪ್ರಕಟಗೊಂಡಿವೆ. "ವೈಚಾರಿಕದೃಷ್ಟಿ,

ವೈಜ್ಞಾನಿಕದೃಷ್ಟಿ ವಾಸ್ತವತೆ ಮುಂತಾದ ಮಾತುಗಳನ್ನು, ಮುಂದುಮಾಡಿಕೊಂಡು ಜೀವಕಾಮುಕೆ ಅತ್ಯವಶ್ಯಕವಾಗಿ ಬೇಕಾದ, ಆದರೆ ರಸಪ್ರಜ್ಞೆಗೆ ಬೇಕಾಗದ, ಕಾರ್ಯ ಕಾರಣಾನ್ವೇಷಕವಾಗಿ ಉಪಯುಕ್ತತೆಯನ್ನೇ ಗುರಿಯಾಗಿ ಉಳ್ಳ ಬುದ್ಧಿಯನ್ನು ರಸ ಪ್ರಜ್ಞಾನಿರ್ಮಿತಿಗಳಿಗೆ ಅನ್ವಯಿಸುವುದರಿಂದ ಮಾನವ ನಿರಾನಂದಿಯಾಗುತ್ತಿದ್ದಾನೆ' (ಪು. 42) 'ಪಾಶ್ಚಾತ್ಯ ವಿಮರ್ಶಾಪ್ರಜ್ಞೆ ನಮ್ಮ ಕಾವ್ಯ ಪರಿಶ್ರಮವನ್ನು ಹಿಗ್ಗಾ ಮುಗ್ಗಾ ಎಳೆಯುತ್ತಿದೆ' (ಪು. 48) 'ನವ್ಯತೆ, ಆಧುನಿಕತೆ, ವಾಸ್ತವತೆ ಮುಂತಾದುವುಗಳ ನೆಪದಲ್ಲಿ ನಮ್ಮ ಕಾವ್ಯಕಲಾ ಪ್ರಪಂಚದಲ್ಲೂ ಬೌದ್ಧಿಕ ಶುಷ್ಕ ಸಾಂಕೇತಿಕತೆ, ಒಣಚರ್ಚೆ, ಇಲ್ಲದಿದ್ದರೆ ಕಾಮಕ್ರೋಧಾದಿ ರೂಕ್ಷೋದ್ವೇಗಗಳ ಸಾಂಕ್ರಾಮಿಕತೆ, ವೈಚಾರಿಕತೆಯ ಸೋಗಿನಲ್ಲಿ ನಿಂದೆ ಅಸಹಿಷ್ಣುತೆಗಳು ಮರೆಯುತ್ತಿವೆ" (ಪು. 55) ಈ ಕೆಲವು ಮಾತುಗಳು ಇದಕ್ಕೆ ನಿದರ್ಶನವಾಗಿವೆ. ಪು.ತಿ.ನ. ಅವರ ಈ ಪ್ರತಿಕ್ರಿಯೆ ಗಳು ಹುರುಳಿಲ್ಲದವುಗಳಲ್ಲವಾದರೂ, ಪಾಶ್ಚಾತ್ಯ ವಿಚಾರ ವಿಮರ್ಶೆ ಇತ್ಯಾದಿಗಳಿಂದ ಗಳಿಂದ ಆಧುನಿಕ ಭಾರತೀಯ ಸಾಹಿತ್ಯ ಚರ್ಚೆಗೆ ಏನೂ ಪ್ರಯೋಜನವಾಗಿಲ್ಲವೆಂಬ ಅವರ ನಿಲುವನ್ನು ಒಪ್ಪುವುದು ಕಷ್ಟ.

ಶ್ರೀ ಬಿ.ವಿ. ಅರ್ತಿಕಜೆ ಮತ್ತು ಡಾ. ಬಿ. ಸುರೇಂದ್ರರಾವ್ ಇಬ್ಬರೂ ಜತೆಗೂಡಿ ಬರೆದ 'ಅಪರೂಪ' ಎಂಬ ಎಪ್ಪತ್ಮೂರು ಪುಟದ ಪುಸ್ತಕ ಇತಿಹಾಸದ ಕೆಲವು ವ್ಯಕ್ತಿ ಗಳನ್ನು ಮತ್ತು ಪದ್ಧತಿಗಳನ್ನು ಕುರಿತ ಅತ್ಯಂತ ಸಾರಸ್ಯವಾದ ಬರೆಹಗಳನ್ನೊಳ ಗೊಂಡಿದೆ. ಇದರಲ್ಲಿರುವ ಐದು ಲೇಖನಗಳಲ್ಲಿ, ಮೂರು ಇತಿಹಾಸ ನಿರ್ಮಾಪಕ ರಾದ ಹೂಣ ದೊರೆ ಅಟ್ಟಿಲ, ನಪೋಲಿಯನ್ ಮತ್ತು ಹಿಟ್ಲರ್ ಇವರನ್ನು ಕುರಿತ ಸ್ವಭಾವ ಚಿತ್ರಣಗಳಾಗಿವೆ. ಇನ್ನೆರಡು 'ಸತೀಸಹಗಮನ' 'ಅಮಾನುಷ ದಂಡನೆಗಳು' ಧರ್ಮದ ಹಾಗೂ ನೀತಿಯ ಹೆಸರಿನಲ್ಲಿ ಉಳಿದುಬಂದ ಅಮಾನವೀಯ ಆಚರಣೆ ಗಳನ್ನು ಕುರಿತವುಗಳು.

ಅಟ್ಟಿಲ, ನಪೋಲಿಯನ್ ಮತ್ತು ಹಿಟ್ಲರನನ್ನು ಕುರಿತ ಚಿತ್ರಗಳು ಓದುಗರಿಗೆ ಆಯಾ ವ್ಯಕ್ತಿಗಳ ಸ್ವಭಾವದ ಕೆಲವು ವೈಲಕ್ಷಣ್ಯಗಳನ್ನು ಪರಿಚಯ ಮಾಡಿಕೊಡುತ್ತ ಆ ವ್ಯಕ್ತಿತ್ವದ ಬೇರೆ ಬೇರೆಯ ಮುಖಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹ ವನ್ನು ಹುಟ್ಟಿಸುತ್ತವೆ. ಇದೇ ಲೇಖಕರು, ಇಂಥ ವ್ಯಕ್ತಿಗಳ ಸಮಗ್ರವಾದ ಬದುಕನ್ನು ಕನ್ನಡದಲ್ಲಿ ಬರೆದರೆ ತುಂಬಾ ಒಳ್ಳೆಯದು. ಇಂಗ್ಲಿಷ್‌ನಲ್ಲಿ ಎಮಿಲ್ ಲಡ್ವಿಗ್ ನೆಪೋಲಿಯನ್ ಕುರಿತು ಬರೆದಂಥ ಉಜ್ವಲವಾದ ಕೃತಿ, ಕನ್ನಡದಲ್ಲಿ ಬರುವುದು ಯಾವಾಗ ?

ಸತೀಸಹಗಮನ ಮತ್ತು ಅಮಾನುಷ ದಂಡನೆಗಳು ಇತಿಹಾಸದ ಕ್ರೂರ ಅಧ್ಯಾಯಗಳು. ಈ ವಿಷಯಗಳನ್ನುಕುರಿತ ಪ್ರಸ್ತುತ ಲೇಖಕರ ಬರೆಹ ಅತ್ಯಂತ ಮೌಲಿ ಕವಾದುದಾಗಿದೆ. ಇತಿಹಾಸ, ಶಾಸನ, ಸಾಹಿತ್ಯ ಮತ್ತಿತರ ಸಮೃದ್ಧವಾದ ಆಧಾರ ಸಾಮಗ್ರಿಗಳ ನೆರವಿನಿಂದ, ಕೆಲವು ಪದ್ಧತಿಗಳ ಇಡೀ ಚರಿತ್ರೆಯನ್ನು ಅತ್ಯಂತ

ಸ್ವಾರಸ್ಯವಾಗಿ ನಿರೂಪಿಸಿರುವ ಲೇಖಕರ ಕೌಶಲ ಪ್ರಶಂಸನೀಯವಾದುದಾಗಿದೆ. ಈ ಕೃತಿಯ ಎಲ್ಲಾ ಲೇಖನಗಳ ಹಿಂದೆ ವಿಸ್ತಾರವಾದ ಅಧ್ಯಯನ ನಿಶ್ಶಬ್ದವಾಗಿ ಹರಹಿಕೊಂಡಿದೆ. 'ಚರಿತ್ರೆ'ಯ ವಸ್ತುವನ್ನು ಸಾಹಿತ್ಯವನ್ನಾಗಿ ಸಲ್ಲುವಂತೆ ಮಾಡಿರುವ ಈ ಬರವಣಿಗೆ, ಕನ್ನಡ ಸಾಹಿತ್ಯದ ವಸ್ತು ವೈವಿಧ್ಯತೆಗೆ ಒಂದು ವಿಶಿಷ್ಟವಾದ ಕೊಡುಗೆಯಾಗಿದೆ.

'ಚಂದ್ರಕಾಂತಿ' ಎಚ್ಚೆಸ್ಕೆಯವರು ಬರೆದ ಮೂವತ್ತು ಚಿಂತನೆಗಳನ್ನು ಒಳಗೊಂಡ ತೊಂಬತ್ತು ಪುಟಗಳ ಒಂದು ಕೃತಿ. ಆಕಾಶವಾಣಿಯ ಚಿಂತನಕಾರ್ಯಕ್ರಮಗಳಿಗೆ ಬರೆದ ಈ ಕಿರುಬರೆಹಗಳು ಮೂರು-ನಾಲ್ಕು ನಿಮಿಷಗಳ ಅವಧಿಗೆ ವಿಚಾರವೊಂದನ್ನು ಹರಳುಗೊಳಿಸುವ ಅಭಿವ್ಯಕ್ತಿಗಳಾಗಿವೆ.

ಎಚ್ಚೆಸ್ಕೆಯವರ ಈ ಬರೆಹಗಳು ಕೇವಲ ಸಾಮಯಿಕ ರಚನೆಗಳು ಎಂದು ಅನ್ನಿಸದೆ, ಅನುಭವದ ಕಾವಿನಲ್ಲಿ ಪಾಕಗೊಂಡ ವಿಚಾರಗಳ ರಮ್ಯ ನಿರೂಪಣೆಯಾಗಿ ಮನಸ್ಸನ್ನು ಹಿಡಿದು ನಿಲ್ಲಿಸಿಕೊಳ್ಳುತ್ತವೆ. ಬಹುಪಾಲು ಬರೆಹಗಳು ಕೇಂದ್ರ ಚಿಂತನೆಯ ಸುತ್ತ ಉಚಿತವಾದ ವೃತ್ತದ ಪರಿಧಿಯಲ್ಲಿ ಹದವರಿತು ಹರಹಿಕೊಂಡವುಗಳಾಗಿವೆ. ವಿಸ್ತಾರವಾದ ಅಧ್ಯಯನ, ಅಪಾರವಾದ ಅನುಭವ, ಅಂತರ್ಮುಖೀ ಪ್ರಜ್ಞೆಯಲ್ಲಿ ಮಿಂದೆದ್ದು ಅವು ಪಡೆದುಕೊಳ್ಳುವ ಹೊಳಪು, ಮತ್ತು ಅಭಿವ್ಯಕ್ತಿಯ ರಮ್ಯತೆ ಇತ್ಯಾದಿಗಳಿಂದ, ಓದಿದನಂತರ ಆಯಾ ವಿಷಯಗಳನ್ನು ಕುರಿತು ಮೆಲುಕು ಹಾಕುವಂತೆ ಮಾಡುವ, ಈ 'ಚಂದ್ರಕಾಂತಿ' ನಿಜಕ್ಕೂ ಎರವಲು ಬೆಳಕಲ್ಲ ಅನ್ನಿಸುವಂಥ ಲಕ್ಷಣವನ್ನು ಪಡೆದುಕೊಂಡ ಕೃತಿಯಾಗಿದೆ.

ಈ ಕೃತಿಯೊಂದಿಗೆ ಹೋಲಿಸಿದರೆ ಸೂ. ಸುಬ್ರಮಣ್ಯಂ ಅವರ 'ಸೀಕರಣೆ' ಸಪ್ಪೆ ಅನ್ನಿಸಿಬಿಡುತ್ತದೆ. ಅಷ್ಟೇ ಅಲ್ಲ, ಅದು ಅಸ್ತವ್ಯಸ್ತ ಕೂಡಾ. ಅರುವತ್ತು ನಾಲ್ಕು ಪುಟಗಳ ಈ ಕಲಬೆರಕೆ ಪುಸ್ತಕದಲ್ಲಿ ಪದ್ಯಗಳಿವೆ, ಹರಟೆಗಳಿವೆ, ಕತೆಯನ್ನು ಹೋಲುವ ಬರೆಹಗಳಿವೆ. ಆದರೆ ಯಾವುವೂ ಮನಸ್ಸನ್ನು ಮುಟ್ಟುವುದಿಲ್ಲ ; ತಟ್ಟುವುದೂ ಇಲ್ಲ ; ಕಡೆಗೆ ಯಾವ ಉಲ್ಲಾಸವನ್ನೂ ನೀಡುವುದಿಲ್ಲ. ಇರುವ ಕೆಲವು ಪದ್ಯಗಳಂತೂ ಅಧ್ವಾನ. ರಾಜರತ್ನಂ ಅವರ, ಕೈಲಾಸಂ ಅವರ ಪ್ರಭಾವದಿಂದ ನರಳುವ ನೆರಳುಗಳಂತಿವೆ ಬಹುಪಾಲು ಲೇಖನಗಳು. ಇದ್ದುದರಲ್ಲಿ 'ನಕ್ಷತ್ರಕೂಟ' ಎಂಬ ಕಥೆಯಂಥ ಬರೆಹ ಸಹನೀಯವಾಗಿದೆ. ಒಟ್ಟಿನಲ್ಲಿ ಇಡೀ ಸಂಗ್ರಹ ಯಾವ ತೀವ್ರವಾದ ಮನಃಸ್ಥಿತಿಯಿಂದಲೂ ರೂಪುಗೊಂಡಂತೆ ತೋರದೆ, ಚೂರು ಪಾರುಗಳ ತೇಪೆಯಂತೆ ತೋರುತ್ತದೆ.

ಬಿ. ಜಿ. ಎಲ್. ಸ್ವಾಮಿಯವರ 'ಸಾಕ್ಷಾತ್ಕಾರದ ದಾರಿಯಲ್ಲಿ' ಈ ವರ್ಷದ ಅತ್ಯಂತ ಅಪೂರ್ವವಾದ ಕೃತಿಯಾಗಿದೆ. ಇನ್ನೂರಾ ಇಪ್ಪತ್ತೊಂದು ಪುಟಗಳ ಈ ಪುಸ್ತಕ, ಮನುಷ್ಯನಿಗೆ ಒಂದು ಬಗೆಯ ತಾತ್ಕಾಲಿಕವಾದ ಸುಖ-ಆನಂದಗಳನ್ನೊದಗಿ

